ಕಾಖಂಡಕಿ

# ಶ್ರೀ ಮಹಿಪತಿರಾಯರು

(ಚರಿತ್ರೆ ಮತ್ತು ಕೃತಿಗಳ ಅಧ್ಯಯನ)



ಡಾ।। ಕೃಷ್ಣ ಕೊಲ್ಹಾರಕುಲಕರ್ಣಿ

ಮರಾಠಿ-ಕನ್ನಡ ಸ್ನೇಹ ವರ್ಧನ ಕೇಂದ್ರ, ಪುಣೆ
मराठी-कन्नड स्नेह वर्धन केंद्र, पुणे

ಬೆಲೆ ರೂ. ೬೦/-



*ಈ ಪುಸ್ತಕದ ಪ್ರಕಟನೆಗೆ ಧನಸಹಾಯ ನೀಡಿದ*
**ತಿರುಪತಿ ತಿರುಮಲೈ ದೇವಸ್ಥಾನದ ಧರ್ಮದತ್ತಿಗೆ**
*ಕೃತಜ್ಞತೆಗಳು.*

—ಲೇಖಕ

*Sincere Thanks to*

**Tirupati Tirumalai Devasthanam Trust**
**for their Financial aid in Publishing this book.**

-Author

# ಪ್ರಕಾಶಕರ ನುಡಿ

ಇದು ನಮ್ಮ ಕೇಂದ್ರದ ಪ್ರಪ್ರಥಮ ಪ್ರಕಟನೆ. ಮರಾಠಿ-ಕನ್ನಡ ಸ್ನೇಹ ವರ್ಧ
ೇಂದ್ರವು ಈಚೆಗೆ ಅಂದರೆ ಎಪ್ರಿಲ ೧೯೮೮ರಿಂದ ಅಸ್ತಿತ್ವದಲ್ಲಿ ಬಂದಿದೆ. ಅದರ ಹೆಸ
ೂಚಿಸುವಂತೆ, ಕನ್ನಡ-ಮರಾಠಿ ಜನರ ನಡುವೆ ಬಾಂಧವ್ಯವನ್ನು ಸಾಹಿತ್ಯ ಕಲೆಗಳ ಮೂ
ರ್ಧಿಸುವುದು ಅದರ ಉದ್ದೇಶವಾಗಿದೆ. ಅದರನ್ವಯ ಕೇಂದ್ರವು ಹಲವು ವಿಧಾಯ
ೋಜನೆಗಳನ್ನು ಹಮ್ಮಿಕೊಂಡಿದ್ದು, ಕನ್ನಡ-ಮರಾಠಿ ಸಂಯುಕ್ತ ವಿಷಯಗಳ ಅಧ್ಯ
ಕ್ಕೆ ಅವಕಾಶವನ್ನು ಒದಗಿಸುತ್ತಲಿದೆ. ಜೊತೆಗೆ ಗ್ರಂಥ ಪ್ರಕಟನೆಗೆ ಅಷ್ಟೇ ಆದ್ಯತೆಯ
ೀಡಲಾಗಿದೆ. ಈ ಗ್ರಂಥಗಳು ಮರಾಠಿಯಿಂದ ಕನ್ನಡಕ್ಕೆ, ಕನ್ನಡದಿಂದ ಮರಾಠಿಗೆ ಅನುವ
ೊಂಡವುಗಳು ಇರಬಹುದು; ಇಲ್ಲವೆ ಉಭಯ ಭಾಷೆ, ಸಂಸ್ಕೃತಿಗಳಿಗೆ ಒಂದಿಲ್ಲೊಂ
ೀತಿಯಲ್ಲಿ ಸಂಬಂಧಿಸಿರಬಹುದು. ಪ್ರಸ್ತುತ ಗ್ರಂಥವು ಎರಡನೆಯ ಪ್ರಕಾರದಲ್ಲಿ ಒ
ುದು. ಇದರಲ್ಲಿಯ ಕೇಂದ್ರ ವ್ಯಕ್ತಿ ಶ್ರೀ ಮಹಿಪತಿರಾಯರು ಕನ್ನಡ-ಮರಾಠಿ ಈ ಎರಡ
ಾಷೆಗಳಲ್ಲಿ ಹಾಡುಗಳನ್ನು ರಚಿಸಿದ್ದಾರೆ. ಅವರಿಗೆ ಮರಾಠಿ(ಅದರಂತೆ ದಖಣಿ ಭಾ
ೆನ್ನಾಗಿ ಬರುತ್ತಿತ್ತೆಂಬುದರ ಜೊತೆಗೆ ಆಗಿನ ಕನ್ನಡ,ಮರಾಠಿ ಭಾಷಿಕರು ಪರಸ್ಪರ ಸಾ
ರ್ಕದಲ್ಲಿದ್ದರೆಂಬುದರ ನಿದರ್ಶನವಾಗಿದೆ. ಈ ಸಂಬಂಧವಲ್ಲದೇ ಅವರ ಚರಿತ್ರೆಯ
ೇಳುವ ಆದಿಮ ಕೃತಿಗಳಲ್ಲಿ ಒಂದು ಮರಾಠಿಯಲ್ಲಿಯೇ ಇದೆ. ಅದುವೇ ರುಕ್ಮಜದ
ಂಬವರಿಂದ ಸುಮಾರು ೧೭೩೦ರಲ್ಲಿ ರಚಿತವಾದ 'ಗುರುಮಾಲಿಕೆ'. ಅದೀಗ ಮೊ
ಾರಿ ಈ ಗ್ರಂಥದಲ್ಲಿ ಮುದ್ರಣ ರೂಪವನ್ನು ತಳೆದಿದೆ. (ಅನುಬಂಧ ಮೂರು)

ಸ್ವತಃ ಗುರುದೇವ ರಾನಡೆಯವರು ಮಹಿಪತಿರಾಯರನ್ನು 'ವಿಶ್ವದ ಶ್ರೇಷ್ಠ ಅನುಭ
ವಿಗಳು' ಎಂದು ತಮ್ಮ ಕೃತಿಗಳಲೆಲ್ಲ ತುಂಬು ಹೃದಯದಿಂದ ಹೇಳಿದ್ದಾರೆ. ಮಹಿಪತಿ
ುರಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಈಗಾಗಲೇ ಹಲವು ಕೃತಿಗಳು ಹೊರಬಂದಿವೆ. ಇ
ಎಚ್.ಡಿ ಮಟ್ಟದ ಅಧ್ಯಯನ. ಈ ಹಿಂದಿನ ಕೃತಿಗಳಲ್ಲಿ ವ್ಯಕ್ತವಾದ ಅನೇಕ ತ
ಡೆಗಳನ್ನು ಇಲ್ಲಿ ಆಧಾರಸಹಿತವಾಗಿ ನೇರ್ಪಡಿಸಲಾಗಿದೆ.

ಲೇಖಕ ಡಾ। ಕೊಲ್ಹಾರಕುಲಕರ್ಣಿಯವರು ಪರಿಣತ ಸಂಶೋಧಕರು. ಅವರ ಕೃತಿಯ
ಅದೂ ನಮ್ಮ ಪ್ರಕಟನಾ ಯೋಜನೆಯ ಮೊದಲ ಕೃತಿಯಾಗಿ ಪ್ರಕಟಿಸುವ ಯೋ
ೋಗವು ನಮಗೆ ಹರ್ಷವನ್ನುಂಟುಮಾಡಿದೆ. ಅವರಿಗೆ ನಮ್ಮ ಹಾರ್ದಿಕ ಅಭಿವಂದನೆಗ

ನಮ್ಮ ಕೇಂದ್ರದ ಉಪಾಧ್ಯಕ್ಷರೂ ಪ್ರಕಟನಾ ಮಾಲೆಯ ಸಂಪಾದಕರಲ್ಲೊಬ್ಬ
ಗಿರುವ ಡಾ। ಹಾವನೂರರು ಈ ಕೃತಿಯು 'ಗರ್ಭಸ್ಥ'ವಿರುವಾಗಿನಿಂದ ಅದರ ದಾಯಿ
ಮಾಡಿದವರು. ಕೇಂದ್ರದ ವತಿಯಿಂದ ಈಗ ಅದು ಪ್ರಕಟವಾಗುವಂತೆ ನೋಡಿಕೊಂಡವ
ವರೇ.

ಪುಣೆ — ಅ.ರಾ.ತೋರೊ

೨೨ ಸೆಪ್ಟೆಂಬರ್ ೧೯೮೮ — ಅಧ್ಯಕ್ಷ

# ಮುನ್ನುಡಿ

ಪ್ರಿಯ ಮಿತ್ರರಾದ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಅವರು ತಮ್ಮ ಡಾ
ಪ್ರಬಂಧವನ್ನು ಪ್ರಕಟಿಸುತ್ತಿರುವ ಈ ಹೊತ್ತು, ಅವರಿಗೆ ಶುಭಾಶಯದ
ಮಾತುಗಳನ್ನು ಬರೆಯಲು ನನಗೆ ಸಂತೋಷವಾಗುತ್ತದೆ. ವಾಸ್ತವವಾಗಿ ಈ
ಯಾವ ಮೊದಲ ಮಾತುಗಳ ಶಿಫಾರಸ್ಸೂ ಬೇಕಾಗಿಲ್ಲ. ವಿಶ್ವವಿದ್ಯಾ ಲಯದ
ವಿದ್ವಾಂಸ ಮಂಡಳಿಯೇ ಇದನ್ನು ಡಾಕ್ಟರೇಟ್ ಪ್ರಶಸ್ತಿಗಾಗಿ ಶಿಫಾರಸ್ ಮಾಡಿ
ಇತರರ ಶಿಫಾರಸ್ ಯಾಕೆ ಬೇಕು?

ಡಾ. ಕುಲಕರ್ಣಿಯವರು ನನ್ನ ಬಹುಕಾಲದ ಮಿತ್ರರು. ನಾನು ಗುಲ
ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ದಿನಗಳಲ್ಲಿ ಅವರು ನನ್ನ ಬಳಿ ಬಂದು ಪಿಎ
ಪದವಿಗಾಗಿ ಕೆಲಸ ಮಾಡುವ ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಅದನ್ನು
ನನಗೆ ತುಂಬ ಸಂತೋಷವೆನ್ನಿಸಿತು. ಬರವಣಿಗೆ ಅವರಿಗೆ ಹೊಸತಲ್ಲ. ತಮ್ಮ
ವಿಧವಾದ ಬರಹಗಳಿಂದ ಅವರು ಕನ್ನಡ ಓದುಗರಿಗೆ ಪರಿಚಿತರಾಗಿದ್ದಾರೆ. ಅವರು
ಮಾಡುತ್ತಿರುವದು ಅಂಚೆ ತಂತಿ ಇಲಾಖೆಯಲ್ಲಿ. ಸಂಶೋಧನೆ, ಸಂಶೋಧನೆಯ
ಇವೆಲ್ಲ ಶಾಲೆ, ಕಾಲೇಜು, ವಿಶ್ವವಿದ್ಯಾನಿಲಯಗಳ ಆವರಣದಲ್ಲಿ ಸುತ್ತುತ್ತಿರುವ ದಿ
ಹೊರಗಿನವರೊಬ್ಬರು ಈ ವಿಷಯದಲ್ಲಿ ಆಸಕ್ತಿ ತಾಳಿದ್ದು ಸ್ತುತ್ಯರ್ಹವೆನಿಸಿತು.

ಈ ಪದವಿಯಿಂದ ಡಾ. ಕುಲಕರ್ಣಿಯವರಿಗೆ ಆಗುವ ಲೌಕಿಕ ಲಾಭಗಳೇನೂ ಇ
ಅವರು ಆಗಲೇ ಮಧ್ಯ ವಯಸ್ಸಿಗೆ ಬಂದಿದ್ದರು. ಅವರ ಉದ್ದೇಶಕ್ಕೆ ಆಯ್ಕೆ,
ಮೊದಲಾದ ಯಾವ ಜಿಡ್ಡೂ ಇರಲಿಲ್ಲ. ಸಂಶೋಧನೆಯ ಅವರ ಆಸಕ್ತಿ ಶುದ್ಧವಾ
ಎಷ್ಟೋ ಸಂದರ್ಭಗಳಲ್ಲಿ ಇಂಥವರು ತಮ್ಮದೇ ಆದ ವೃತ್ತಿಜೀವನದ ನಡುವೆ
ಪ್ರಿಯವಾದ ಈ ಬಗೆಯ ಕೆಲಸವನ್ನು ಮುಗಿಸಲಾಗದೆ ಒದ್ದಾಡುತ್ತಿದ್ದುದು ನನಗೆ ಗೊ
ಆದರೆ ಡಾ.ಕುಲಕರ್ಣಿಯವರ ಪ್ರವೃತ್ತಿ ನನಗೆ ಸ್ವಲ್ಪಮಟ್ಟಿಗೆ ತಿಳಿದಿತ್ತು. ಆದುದರಿ
ಅವರಿಗೆ ಪ್ರೋತ್ಸಾಹದಾಯಕವಾದ ಕೆಲವು ಮಾತುಗಳನ್ನು ಹೇಳಿದೆ.

ಅವರು ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ, ಡಾ. ಕೃಷ್ಣವ
ಕಿತ್ತೂರ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಸಂಶೋಧನೆಗೆಂದು ತಮ್ಮ ಹೆ
ನೋಂದಾಯಿಸಿಕೊಂಡರು. ನಾನು ಗುಲುಬರ್ಗಾ ಬಿಟ್ಟು ಮೈಸೂರಿಗೆ ಬಂದ
ತಿಂಗಳುಗಳಲ್ಲಿಯೇ ಡಾ.ಕುಲಕರ್ಣಿಯವರಿಂದ ಕಾಗದ ಬಂತು. ತಮಗೆ
ದೊರೆಯಿತೆಂದು ತಿಳಿಸಿದ್ದರು. ಸುಮಾರು ಎರಡೂವರೆ ಮೂರು ವರ್ಷಗಳ ಕ್ಷಿಪ್ರಾವಧಿ
ಅವರು ತಮ್ಮ ಪ್ರಬಂಧವನ್ನು ಮುಗಿಸಿ ಯಶಸ್ವಿಯಾಗಿದ್ದರು. ನಿಜದಲ್ಲಿ ಪಿಎ
ಪದವಿಗೆ ನೋಂದಾಯಿಸಿಕೊಳ್ಳುವ ಪೂರ್ವದ ಕೆಲವು ವರ್ಷಗಳಲ್ಲಿ ಅವರು
ಸಂಶೋಧನೆಯ ವಿಷಯದಲ್ಲಿ ಸಾಕಷ್ಟು ಕೆಲಸ ಮಾಡಿಕೊಂಡಿದ್ದರು. ಬರವಣಿಗೆ
ಸಹಜವಾಗಿ ಸಾಧಿಸಿತ್ತು. ಈ ಕಾರಣಗಳಿಂದ ಅವರಿಗೆ ಪ್ರಬಂಧವನ್ನು ಸುಲ
ಮುಗಿಸುವದು ಸಾಧ್ಯವಾಗಿತ್ತು.

ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಅವರನ್ನು ಈ ಸಂದರ್ಭದಲ್ಲಿ

ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಪದವಿ ಪಡೆದ ಸ್ವಲ್ಪ ಕಾಲದಲ್ಲಿಯೇ ೀ
ಪ್ರಬಂಧ ಪ್ರಕಟಗೊಳ್ಳುತ್ತಿರುವುದು ಹೆಚ್ಚಿನ ಸಂತೋಷದ ಸಂಗತಿ. ಇಂಥ ಅನೇಕ ಪ್ರ
ಗಳು ಬೆಳಕಿಗೆ ಬರುವುದೇ ಸಾಧ್ಯವಾಗದ ಸಂದರ್ಭದಲ್ಲಿ (ಕೆಲವು ಬೆಳಕಿಗೆ ಬರುವಂ
ಅಲ್ಲ, ಆ ಮಾತು ಬೇರೆ!) ಪ್ರಸ್ತುತ ಪ್ರಕಟಣೆಯನ್ನು ನಾನು ಸ್ವಾಗತಿಸುತ್ತೇನೆ. ಈ ಪ್ರ
'ಕಾಖಂಡಿಕಿ ಶ್ರೀ ಮಹಿಪತಿರಾಯರು' ನಮ್ಮ ಹರಿದಾಸ ಸಾಹಿತ್ಯ ಪರಂಪರೆಯ
ಅರಿತುಕೊಳ್ಳುವ ದಿಕ್ಕಿನಲ್ಲಿ ಸಹಾಯಕವಾಗುವಂಥದು. ದಾಸ ಸಾಹಿತ್ಯವನ್ನು ಸಾಮಾನ್ಯ
ಮಹಿಪತಿರಾಯರನ್ನು ನಿರ್ದಿಷ್ಟವಾಗಿ ತಿಳಿದುಕೊಳ್ಳುವಲ್ಲಿ ಇದು ಹೆಚ್ಚಿನ ನೆರವನ್ನು
ತ್ತದೆ.

ದಾಸ ಸಾಹಿತ್ಯದ ಪ್ರಕಟಣೆಯ ಇತಿಹಾಸ ಹತ್ತಿರ ಹತ್ತಿರ ಒಂದೂವರೆ ಶತಮಾ
(೧೮೫೦) ಆದರೆ ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನಾ ಪದವಿಗೆಂದು ಹರಿ
ಸಾಹಿತ್ಯದ ಅಧ್ಯಯನ ಮಾತ್ರ ಕಳೆದ ನಾಲ್ಕು ದಶಕಗಳಿಂದ ನಡೆದುಕೊಂಡು ಬಂದಿದೆ.
ದಿಸೆಯಲ್ಲಿ ಡಾ.ಎ.ಟಿ.ಪಾಟೀಲ ಅವರು 'ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ೀ
ಕೃತಿಗಳು' ಎಂಬ ಪ್ರಬಂಧವನ್ನು ಪ್ರಕಟಿಸಿ ಮೊದಲಿಗರೆನ್ನಿಸಿದರು (೧೯೫೬). ಮುಂದೆ
ಕೆ.ಎಂ.ಕೃಷ್ಣರಾವ್ ('ಶ್ರೀ ಜಗನ್ನಾಥ ದಾಸರು', ೧೯೫೬), ಡಾ.ವ.ಅ.ದಿವಾ
('ಪ್ರಸಾದ ಯೋಗ',೧೯೭೨), ಡಾ.ಎಚ್.ಕೆ.ವೇದವ್ಯಾಸಾಚಾರ್ಯ ('ಕರ್ನಾಟಕದ ಹ
ಸರು', ೧೯೬೫), ಡಾ.ಕೆ.ಗೋಕುಲನಾಥ ('ಶ್ರೀ ವಿಜಯದಾಸರು ಜೀವನ ಮತ್ತು ಕೃ
ಸಮೀಕ್ಷೆ',೧೯೭೮), ಡಾ.ಟಿ.ಎನ್.ನಾಗರತ್ನ ('ಹರಿದಾಸರ ಭಕ್ತಿ ಸ್ವರೂಪ',೧೯
ಮೊದಲಾದವರು ಈ ಕೆಲಸವನ್ನು ಮುಂದುವರಿಸಿದರು. ಕನಕದಾಸರನ್ನು, ವಾದಿರಾಜ
ಮತ್ತು ಹರಿದಾಸ ಆಂದೋಲನವನ್ನು ಕುರಿತ ಮೂರು ಪ್ರಬಂಧಗಳು ಇನ್ನೂ ಪ್ರಕಟ
ಬೇಕಾಗಿವೆ. ಈ ಮಾಲೆಯಲ್ಲಿ ಡಾ.ಕೃಷ್ಣ ಕೊಲ್ಹಾರಕುಲಕರ್ಣಿ ಅವರ ಪ್ರಸ್ತುತ ಪ್ರ
ಸೇರ ಈಚಿನದು.

ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ, ಶ್ರೀಪಾದರಾಜರಿಂದ ತೊಡಗಿ ಪುರಂದರದ
ವರೆಗಿನ ದಾಸ ಸಾಹಿತ್ಯ ಘಟ್ಟ ಒಂದು; ವಿಜಯದಾಸರಿಂದ ತೊಡಗಿದ ಘಟ್ಟ ಇನ್ನೊ
ಎರಡೂ ಘಟ್ಟಗಳ ನಡುವಿನ ಒಂದು ಒಂದೂವರೆ ಶತಮಾನದ ಅವಧಿಯನ್ನು ಒ
ಬಗೆಯ ಅಜ್ಞಾತ ಕಾಲವೆಂದು ಇತಿಹಾಸಕಾರರು ಭಾವಿಸಿದ್ದಾರೆ. ಮಹಿಪತಿರಾಯರು
ಅವಧಿಗೆ ಸೇರಿದವರಾದರೂ ನಿರ್ಲಕ್ಷ್ಯಕ್ಕೆ ಒಳಗಾದವರು. ಅವರ ಮಗ ಕೃಷ್ಣರಾಯರು
ಬಲದ ಮೇಲೆ ಕೀರ್ತನಕಾರರೆನ್ನಿಸಿದ್ದವರು. ''ಹರಿದಾಸ ಸಾಹಿತ್ಯದ ಸೊಲ್ಲೇ ೀ
ಹೋಗಿದ್ದ ಹದಿನೇಳನೆ ಯ ಶತಮಾನದಲ್ಲಿ ಈ ತಂದೆ ಮಕ್ಕಳ ವಾಣಿ ಕೇಳಿ ಬರುವ
ನಾವು ಕಡೆಗಣಿಸುವಂತಿಲ್ಲ. ಆದರೆ ಅವರ ರೀತಿ ನೀತಿಗಳಲ್ಲಿ ಆದ ಮಾರ್ಪಾಡುಗಳನ್ನು
ಒಪ್ಪದೆಯೋ ಇಲ್ಲವೇ ಅವರ ಕೀರ್ತನೆಗಳು ಹೆಚ್ಚಾಗಿ ಬೆಳಕಿಗೆ ಬಾರದೇ ಇದ್ದುದರಿಂದ
ಏನೋ, ನಮ್ಮ ಹರಿದಾಸ ಪರಂಪರೆಯಲ್ಲಿ ಸಾಂಪ್ರದಾಯಿಕರು ಅವರ ಹೆಸರನ್ನು ಹೇ
ಪದ್ಧತಿ ಕಂಡು ಬರುವುದಿಲ್ಲ. ಮಹಿಪತಿರಾಯರು ಬದುಕಿದ್ದ ಕಾಲದಲ್ಲಿಯೇ ಅವರ
ಪನ ಆಕ್ಷೇಪವೆತ್ತಿರಬಹುದು ಎನ್ನುವುದಕ್ಕೆ ಅವರು ರಚಿಸಿರುವ 'ದ್ವೈತ ಅದ್ವೈತ
ಹೊಡೆದಾಡದಿರೊ ಪ್ರಾಣಿ, ಚೇತಿಸಿ ಬ್ಯಾರಿಹ ವಸ್ತುಗಾಣಿ' ಎಂದು ಮೊದಲಾಗುವ ಒ

ಕೀರ್ತನೆಯೇ ಸಾಕ್ಷಿ'' ಎಂದು ಡಾ.ಜಿ.ವರದಾರಾಜರಾಯರು ಹೇಳಿರುವ ಮಾತುಗ
ನಾವು ಮರೆಯುವಂತಿಲ್ಲ. ಮಹಿಪತಿರಾಯರು ದ್ವೈತ ತತ್ವಾನುಯಾಯಿಯಾಗಿದ್ದ
ಕೆಲವು ವಲಯಗಳಲ್ಲಿ ಅವರಿಗೆ ಅದ್ವೈತವನ್ನು ಆರೋಪಿಸಿರುವುದನ್ನು ಈ ಸಂದರ್ಭ
ನೆನಪಿಸಿಕೊಳ್ಳಬಹುದು. ಇದು ಸತ್ಯಕ್ಕೆ ದೂರವಾದುದೆಂಬುದನ್ನು ವಿದ್ವಾಂಸರು ಪ್ರತಿಪ
ದ್ದಾರೆ.

ಕಾರಣಗಳು ಏನೇ ಇರಲಿ ಮಹಿಪತಿರಾಯರು ನಿರ್ಲಕ್ಷಿತರಾದುದಂತೂ ನಿಜ. ಇ
ದ್ದರೆ ದಾಸ ಪರಂಪರೆಯ ಸಾತತ್ಯವನ್ನು ಅವರು ಕಾಪಾಡಿಕೊಂಡು ಬಂದಿದ್ದರೂ, ‹
ಕಾಲವನ್ನು 'ಅಜ್ಞಾತಕಾಲ' ವೆಂದೂ 'ತಟಸ್ಥಕಾಲ'ವೆಂದೂ ಕರೆಯುವ ಅಗತ್ಯವಿ
ಲ್ಲಿಲ್ಲ. ಅವರ ಸಾಹಿತ್ಯಿಕ, ಆಧ್ಯಾತ್ಮಿಕ ಸಾಧನೆಗಳಾದರೂ ಸಣ್ಣವಲ್ಲ. ''ಅಧಾ
ಕವಿಶ್ರೇಷ್ಠರಲ್ಲಿ ಅವರೂ ಒಬ್ಬರು'' ಎಂಬ ಡಾ.ಆರ್.ಡಿ.ರಾನಡೆ ಅವರ ಮಾತು
ಇದನ್ನು ದೃಢಪಡಿಸುತ್ತವೆ. ಡಾ.ಜಿ.ವರದರಾಜರಾಯರ ಈ ಮಾತುಗಳು ಮನನಯ
ವಾಗಿವೆ: ''ವಾಸ್ತವವಾಗಿ ವಿಚಾರಿಸಿ ನೋಡಿದಲ್ಲಿ ಮಹಿಪತಿರಾಯರು ಈ ಕೃತಿಗ
ರಚಿಸಿದ ಕಾಲವಾದರೋ, ಹರಿದಾಸ ಸಾಹಿತ್ಯದ ಇತಿಹಾಸದಲ್ಲಿ ಅತ್ಯಂತ ಸಂದಿಗ್ಧವಾದ
ಅತ್ತ ಪುರಂದರ ದಾಸರ ಕಾಲ ಮುಗಿದು, ಇತ್ತ ವಿಜಯದಾಸರ ಕಾಲ ಇನ್ನೂ ಆರಂ
ದಿದ್ದ ಅವಧಿಯದು. ಎಂದರೆ ಕ್ರಿ.ಶ. ೧೫೬೪ ರಿಂದ ಕ್ರಿ.ಶ. ೧೬೮೭ ರವರೆಗೆ ಈ ಕ್ಷೇತ್ರ
ಏನು ಕೃಷಿ ನಡೆಯಿತೆಂಬುದರ ಅರಿವು ನಮಗೆ ಆಗಿರಲಿಲ್ಲ. ಇದೀಗ ಶ್ರೀ ಮಹಿಪತಿರಾ
ಅವರ ಮಕ್ಕಳಾದ ಕೃಷ್ಣರಾಯರು ಈ ಅವಧಿಯಲ್ಲಿ ಸಾಕಷ್ಟು ಕೃಷಿ ಮಾಡಿರುವರೆಂಬ
ತುಂಬ ಪ್ರಶಸ್ತವಾದುದು.''

ಈ ಅಭಿಪ್ರಾಯವನ್ನು ದೃಢಪಡಿಸಿರುವುದೇ ಡಾ. ಕುಲಕರ್ಣಿಯವರ ಪ್ರಸ್ತುತ
ಧದ ಮಹತ್ವವಾಗಿದೆ. ಡಾ. ವರದರಾಜರಾಯರ ಮೇಲಿನ ಮಾತುಗಳನ್ನೇ ಡಾ. ಕುಲ
ಯವರೂ ಹೇಳಿ (ಪು.೨೦೩), ''ಈ ಪ್ರಬಂಧದ ಮುಖಾಂತರ ದೊರೆತ ೩೩ ಹ
ಗಳು ಹರಿದಾಸ ಸಾಹಿತ್ಯದಲ್ಲಿ ಅಜ್ಞಾತ ಕಾಲವೊಂದಿದೆಯೆಂಬುದನ್ನು ಸುಳ್ಳುಮಾಡಿ
ಆ ನಿಟ್ಟಿನಲ್ಲಿ ದೊರೆತ ಅಗಾಧ ಪ್ರಮಾಣದ ಸಾಹಿತ್ಯ, ವಿಶೇಷವಾಗಿ ಮಹಿಪತಿರಾ
ವೈವಿಧ್ಯಮಯ ಶೈಲಿಯ ಕೃತಿಗಳು ೧೭ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಉಲ್
ರ್ಹವಾಗಿವೆ. ಮಹಿಪತಿರಾಯರ ಕೃತಿಗಳ ಅವಲೋಕನದಿಂದ ಅವರ ಸಂಪ್ರದಾಯ ಶ
ಕುರಿತು ಇರುವ ಎಲ್ಲ ಸಂದೇಹಗಳೂ ನಿವಾರಣೆಯಾದಂತಾಗಿದೆ'' ಎಂದಿ
(ಪು.೨೦೪). '' ಈ ದಿಶೆಯಲ್ಲಿ ನಡೆಸಿದ ಶೋಧದ ಫಲವಾಗಿ ಈ ಮೊದಲಿನ 'ಅಜ್ಞಾ
ಲ' ಎಂಬ ನಿರ್ಣಯವನ್ನು ಬದಲಿಸುವಷ್ಟು ಆ ಕಾಲದ ಸಾಹಿತ್ಯವು ನನಗೆ ದೊರೆಯ
ಎಂಬ ಮಾತನ್ನೂ ಹೇಳಿದ್ದಾರೆ. ಆದರೆ ಮಹಿಪತಿರಾಯರ ಕೃತಿಗಳು ಗುಣದಲ್ಲಿ ಪು
ದಾಸರ ಕೃತಿಗಳಿಗೆ ಸರಿಸಮನಾದವೆಂದು ಅವರು ಇದೇ ಸಂದರ್ಭದಲ್ಲಿ ಹೇಳಿದ ಮಾತ
(ಪು.೪) ಉತ್ಪ್ರೇಕ್ಷೆ ಎನ್ನಿಸುತ್ತವೆ.

'ಶ್ರೀ ಮಹಿಪತಿರಾಯರು' ಎಂಬ ಈ ಪ್ರಬಂಧದಲ್ಲಿ ಏಳು ಅಧ್ಯಾಯಗಳಿವೆ: ಅ
ನದ ಹಿನ್ನೆಲೆ, ವಿಷಯ ಸಂಗ್ರಹಣ ವಿವರ, ಅಧ್ಯಯನದ ವಿಷಯ ಪರಿಚಯ, ಮಹಿ
ಯರು, ಅವರ ಕೃತಿಗಳು, ಕೃತಿಗಳ ಅವಲೋಕನ ಮತ್ತು ಉಪಸಂಹಾರ-ಇವು ಈ

ಅಧ್ಯಯನಗಳನ್ನು ತುಂಬಿಕೊಂಡಿವೆ. ಅನುಬಂಧಗಳ ವಿಭಾಗದಲ್ಲಿ ಕೆಲವು ಉಪ
ಪತ್ರಗಳನ್ನು ಕೊಡಲಾಗಿದೆ.

ಮೊದಲನೇಯ ಅಧ್ಯಾಯದಲ್ಲಿ ಹರಿದಾಸ ಸಾಹಿತ್ಯ ಪ್ರಕಟಣೆಯ ಸ್ಥೂಲ ಇತಿಹಾ
ಒಂದೆರಡು ಹೆಸರುಗಳು ತಪ್ಪಾಗಿವೆ. ಕೆಲವಾದರೂ ಮಹತ್ವದ ಪ್ರಕಟಣೆಗಳನ್ನು ಉ
ಸಿಲ್ಲ. ಈ ದೃಷ್ಟಿಯಿಂದ ಈ ಭಾಗ ಅಸಮರ್ಪಕವಾಗಿದೆ. ಇಂಥ ಸಮೀಕ್ಷೆಗಳು ಪರಿ
ವಾಗಿರುವುದು ಸಾಧ್ಯವೇ ಇಲ್ಲ. ಆದರೆ ಮುಖ್ಯವಾದ ಉಲ್ಲೇಖಗಳು ತಪ್ಪಿ ಹೋಗಬಾ
ಈ ಅಧ್ಯಾಯದ ರಚನೆಯಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ
ಪ್ರಕಟಿಸಿರುವ 'ಶ್ರೀಪಾದರಾಜರ ಕೃತಿಗಳು' (೧೯೭೩) ಖಂಡಿತವಾಗಿಯೂ ಡಾ.ಕು
ಯವರ ನೆರವಿಗೆ ಬಂದಿರುತ್ತದೆ. ಆದರೆ ಅದರ ಉಲ್ಲೇಖವೇ ಇಲ್ಲಿ ಕಾಣದಿರು
ಆಶ್ಚರ್ಯವೇ ಸರಿ.

ತಮ್ಮ ಅಧ್ಯಯನಕ್ಕಾಗಿ ಡಾ. ಕುಲಕರ್ಣಿಯವರು ಅನೇಕ ಹಸ್ತಪ್ರತಿಗಳನ್ನು ಸಂ
ದ್ದಾರೆ. ಈ ಹಸ್ತಪ್ರತಿಗಳೇ ಅವರ ಅಧ್ಯಯನದ ಬಲ. ಅವರು ಸಂಗ್ರಹಿಸಿರುವ ಹ
ಗಳು ಕೇವಲ ಮಹಿಪತಿರಾಯರ ಕೃತಿಗಳಿಗಷ್ಟೇ ಸಂಬಂಧಿಸಿದವಲ್ಲ; ಅವರ ಮಗ, ಮ
ಕ್ಕಳು, ಮರಿಮಕ್ಕಳು ಮತ್ತು ಇತರ ಹರಿದಾಸರು, ಸಂತರು ರಚಿಸಿದ ಕೃತಿಗಳನ್ನೂ ಒ
ಡಿವೆ. ಈ ಹಸ್ತಪ್ರತಿಗಳು ಕನ್ನಡ, ಮರಾಠಿ, ಹಿಂದಿ ಭಾಷೆಯಲ್ಲೂ ಇವೆ. ಈ
ಹಸ್ತಪ್ರತಿಗಳ ಶಾಸ್ತ್ರೋಕ್ತ ವಿವರಣೆ ಎರಡನೆಯ ಅಧ್ಯಾಯದಲ್ಲಿದೆ.

'ವಿಷಯ ಪ್ರವೇಶ' ಎಂಬ ಮೂರನೇಯ ಅಧ್ಯಾಯದಲ್ಲಿ, ರಾಜಕೀಯ, ಸಾ
ಧಾರ್ಮಿಕ, ಭಾಷಿಕ ಹಾಗೂ ಸಾಹಿತ್ಯಿಕ ಸಮಕಾಲೀನ ಸ್ಥಿತಿಗತಿಗಳ ವಿವರಣೆಯೂ,
ಸಮಕಾಲೀನರು ಕೆಲವರ ಸ್ಥೂಲ ಪರಿಚಯವೂ ಇವೆ. ಅಂದಿನ ಕವಿ ಸಾಹಿತಿಗಳು ಬ
ಗಳನ್ನು ಉಪಯೋಗಿಸಿ ಕೃತಿ ರಚನೆ ಮಾಡಿರುವದು ವಿಶೇಷ ಉಲ್ಲೇಖಕ್ಕೆ ಅರ್ಹವ
ಡಾ.ಕುಲಕರ್ಣಿಯವರು ಅದನ್ನು ಸರಿಯಾಗಿ ಗುರುತಿಸಿದ್ದಾರೆ. ''ವೈಷ್ಣವ-ಬ್ರಾಹ್ಮಣ
ಆಂದೋಲನದಲ್ಲಿ ಅಧಿಕವಾಗಿದ್ದುದರಿಂದ ಬಹುಶಃ ಅದಕ್ಕೆ 'ಹರಿದಾಸಕೂಟ' ಎಂಬ
ಬಂದಿರಬೇಕು'' (ಪು. ೪೧) ಎನ್ನುವದು ಹೊಸದಾದ ಅರ್ಥವಾಗಿದ್ದರೂ, ಸಾಧಾರ
ದೆನಿಸುತ್ತದೆ. ಹೆಚ್ಚಿನ ಚರ್ಚೆಯನ್ನು ಬೇಡುತ್ತದೆ. ಇದೇ ಸಂದರ್ಭದಲ್ಲಿ ಹರಿ
ಯಾರಾಗಿರಬೇಕೆಂಬ ಹಟವನ್ನು ಕುರಿತು ಮಾತು ಸ್ಪಷ್ಟವಾಗಿಲ್ಲ. ಆ ವಿವರಣೆಯ ಅಗ
ವೆಂದೂ ತೋರುತ್ತದೆ. ''ದರ್ಮ ರಕ್ಷಣೆ ಅವರ ಮೂಲ ಉದ್ದೇಶವಾಗಿತ್ತು'' (ಪು.
ಎಂದು ಹೇಳಲಾಗಿದೆ. ಮತ ಪ್ರಚಾರವೂ ಅದರಲ್ಲಿ ಸೇರಿತ್ತು ಎಂಬುದನ್ನು
ಮರೆಯಬಾರದು. ''ಹರಿದಾಸ ಸಾಹಿತ್ಯವು ಒಂದು ತತ್ವದ ಮುಖವಾಣಿಯಾಗಿರ
ಎನ್ನುವುದು (ಪು. ೪೨) ಸರಿಯಲ್ಲ. ಮಧ್ವತತ್ವ ಅದರೆದುರಿಗೇ ಇತ್ತು ಎನ್ನು
ಕಡೆಗಾಣುವುದು ಹೇಗೆ ಸಾಧ್ಯ? ಸಮಕಾಲೀನ ಸ್ಥಿತಿಗಳ ಮತ್ತು ವ್ಯಕ್ತಿಗಳ ಈ ಪರಿ
ಮಹಿಪತಿರಾಯರ ಜೀವನ ಸಾಧನೆಗಳನ್ನು ಅರ್ಥ ಮಾಡಿಕೊಳ್ಳಲು ಸಮರ್ಥ ಪ್ರವೇ
ದಗಿಸುತ್ತದೆ.

ಮುಂದಿನ ಮೂರು ಅಧ್ಯಾಯಗಳು ಈ ಪ್ರಬಂಧದ ತಿರುಳಾಗಿದೆ. ಇಲ್ಲಿ ಡಾ
ಕೊಲ್ಹಾರಕುಲಕರ್ಣಿಯವರು ತಮ್ಮ ಸಂಶೋಧನೆಯ ಮಹತ್ವವನ್ನು ತೋರಿಸಿದ್ದಾರೆ.

ಮ ಈ ಅಧ್ಯಾಯದಲ್ಲಿ ಹರಳುಗಟ್ಟಿದೆ. ಮಹಿಪತಿರಾಯರ ಜೀವನ-ಕೃತಿಗಳ ಸುತ್ತ ಹೆದುಕೊಂಡ ಸಮಸ್ಯೆಗಳನ್ನು ಬಿಡಿಸಲು ಅವರು ಶ್ರಮಿಸಿದ್ದಾರೆ. ವಿಜಾಪುರದ ಆದಿಲಶಾಹಿ ನೆತನದ ಆರನೆಯ ಬಾದಶಹ ಮಹ್ಮದ್ ಆದಿಲಶಹನ (೧೬೨೬-೧೬೫೬) ಆಸ್ಥಾನ ಲ್ಲಿ ಮಹಿಪತಿರಾಯರು ಕೋಶಾಧಿಕಾರಿಯಾಗಿದ್ದರೆಂದೂ, ಮಂತ್ರಿಯಾಗಿದ್ದರೆಂದೂ ಹೇಳಿ ಗಳಿವೆ. "ಆದರೆ ಐತಿಹಾಸಿಕ ದಾಖಲೆಗಳಲ್ಲಿ ಅವರ ಹೆಸರು ಮಾತ್ರ ಈವರೆಗೆ ದೊರೆತಿಲ್ಲ" ಂದು ಕುಲಕರ್ಣಿಯವರು ಖಚಿತಪಡಿಸುತ್ತಾರೆ. ಇದು ಒಂದು ಮುಖ್ಯವಾದ ವಿಚಾರ. ಮಹಿಪತಿರಾಯರ ಮರಿಮಗ 'ಶ್ರೀಪತಿ ತನುಜ' ತನ್ನ ಮುತ್ತಜ್ಜನನ್ನು ಕುರಿತು ಬರೆದಿರುವ ಂಬತ್ತು ಸಾಲುಗಳನ್ನೇ ಕುಲಕರ್ಣಿಯವರು, ರಾಯರ ಬದುಕಿಗೆ ಸಂಬಂಧಿಸಿದ ಮುಖ್ಯ ದಾಖಲೆಯನ್ನಾಗಿ ಗ್ರಹಿಸುತ್ತಾರೆ. ಇಂಥ ಸಾಹಿತ್ಯಿಕ ರಚನೆಗಳು ಎಷ್ಟರಮಟ್ಟಿಗೆ ನಂಬಿಕೆಗೆ ರ್ಹವಾಗಿವೆ ಎಂಬುದನ್ನು ನಾವು ಕೇಳಿಕೊಳ್ಳಬೇಕು. "ಅತಿರಂಜಿತ ಕಲ್ಪನೆಗಳನ್ನು ಅಸಾಧ್ಯ ವಾದ ಪವಾಡಗಳನ್ನು ಆವಾಸ್ತವಿಕ ದೃಷ್ಟಿಯಿಂದ ಬದಿಗೆ ಸರಿಸಬೇಕಾಗುತ್ತದೆ. ಆದರಿಂದಾಗಿ ಮಹಾಪುರುಷರ ಅಲೌಕಿಕತೆಯನ್ನು ಪ್ರಶ್ನಿಸಿದ ಹಾಗೆ ಎಂದು ಯಾರೂ ಭಾವಿಸಬೇಕಾಗಿಲ್ಲ" ಪು. ೬೮) ಎನ್ನುವ ಆರೋಗ್ಯಕರ ದೃಷ್ಟಿಯನ್ನು ಡಾ.ಕುಲಕರ್ಣಿ ಹೊಂದಿದ್ದಾರೆ. ಇದಕ್ಕಾಗಿ ಅವರು ಅಭಿನಂದನೀಯರು.

ಮಹಿಪತಿರಾಯರು ಕ್ರಿ.ಶ. ಸುಮಾರು ೧೬೧೧ರಲ್ಲಿ ಜನಿಸಿ ೧೬೮೧ರಲ್ಲಿ ಮರಣ ಹೊಂದಿದರೆಂದು ಇದುವರೆಗಿನ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದಕ್ಕನುಸಾರವಾ ಯೇ ಜೀವನದ ಕೆಲವು ಮುಖ್ಯ ವರ್ಷಗಳನ್ನೂ ಸೂಚಿಸಿದ್ದಾರೆ. ಡಾ.ಕುಲಕರ್ಣಿಯವರು ಬಂಬ ಶ್ರಮವಹಿಸಿ ಈ ವರ್ಷಗಳನ್ನು ತಿದ್ದಿದ್ದಾರೆ. ಅವರ ಪ್ರಕಾರ ಮಹಿಪತಿರಾಯರು ನನಿಸಿದ್ದು ಕ್ರಿ.ಶ.ಸು. ೧೬೪೦ ರಲ್ಲಿ; ಮರಣ ಹೊಂದಿದ್ದು ೧೭೦೫ ರಲ್ಲಿ, ಡಾ.ಕುಲಕರ್ಣಿ ಯವರು ಒದಗಿಸಿರುವ ದಾಖಲೆಗಳು, ಮಾಡಿರುವ ತರ್ಕ ಇದನ್ನು ಒಪ್ಪಬಹುದೆಂದು ಹೇಳುತ್ತವೆ. "ಕಲಬುರ್ಗಿ ಜಿಲ್ಲೆಯ ತಾಲೂಕಿನ ಸ್ಥಳ ಶಾಹಪುರದಲ್ಲಿ ಇಂದಿಗೂ ಅವರು (ರಾಯರು) ಉಳಿದುಕೊಂಡಿದ್ದ ಕುರುಹುಗಳು ಇವೆ" ಎಂದು ಹೇಳುತ್ತಾರೆ (ಪು. ೭೧) ಆ ಕುರುಹುಗಳು ಏನೆಂದು ಪುಟ ೯೨ರಲ್ಲಿ ಹೇಳಿದೆ. ಇವರೆಡರ ಸಮನ್ವಯ ಒಂದೆಡೆಗಿದ್ದರೆ ಚೆನ್ನಾಗಿತ್ತು. ಮಹಿಪತಿರಾಯರ ಗುರುಗಳೆಂದು ಉಮರ್ಜಿ ಕೃಷ್ಣಾಚಾರ್ಯರ ಹೆಸರನ್ನು ವಿದ್ವಾಂಸರು ಹೇಳಿಕೊಂಡು ಬಂದಿದ್ದಾರೆ. ಆದರೆ ಉಮರ್ಜಿಯವರ ಹೆಸರು ಗ್ರಂಥಸ್ಥವಾಗಿ ಲ್ಲವೆಂದು ಡಾ.ಕುಲಕರ್ಣಿ ಖಚಿತಗೊಳಿಸುತ್ತಾರೆ. ಸಾರವಾಡದ ಭಾಸ್ಕರ ಸ್ವಾಮಿಗಳ ಶಿಷ್ಯ ರಾಗಿ ಅಧ್ಯಾತ್ಮ ಸಾಧನೆ ಮಾಡಿ ಯೋಗ ಸಿದ್ಧಿಪಡೆದ ಮಹಿಪತಿರಾಯರು ಕೊಲ್ಹಾರದಲ್ಲಿ ಕಾಲವಶರಾಗಿ ಕಾಖಂಡಕಿಯಲ್ಲಿ ವೃಂದಾವನಸ್ಥರಾದರು ಎಂಬ ಮಾತು ಚರ್ಚಾತೀತವಾ ದದ್ದು.

ಮಹಿಪತಿರಾಯರ ಕೃತಿಗಳ ವಿವೇಚನೆ ಮಾಡುವಾಗ ದಾಸ ಪರಂಪರೆಯ ಕೆಲಸವನ್ನು "ಪರಮತ ಧರ್ಮದ ಆಕ್ರಮಣದ ವಿರುದ್ಧ ಎದ್ದ ಒಂದು ಕ್ರಾಂತಿ" (ಪು. ೧೦೯) ಎಂದು ಡಾ.ಕುಲಕರ್ಣಿ ಹೇಳುತ್ತಾರೆ. 'ಕ್ರಾಂತಿ' ಎಂಬ ಮಾತು ಬಹಳ ದೊಡ್ಡದಾಯಿತು ಎಂಬುದು ನಮ್ಮ ಅಭಿಪ್ರಾಯ. ಅದು ಏನಿದ್ದರೂ ಸ್ವಮತ ಪ್ರಚಾರದ ಒಂದು ಚಳವಳಿ ಎನ್ನಬಹು ದೆಂದು ತೋರುತ್ತದೆ. ಹರಿದಾಸರಿಗೆ ವಿಜಯದಾಸರು ಒಂದು ಚೌಕಟ್ಟನ್ನು ಕಟ್ಟಿಕೊಟ್ಟು,

ಲಕ್ಷಣಗಳನ್ನು ಹೇಳಿದರು. "ವಿಜಯದಾಸರಿಗಿಂತ ಮೊದಲಿನ ಹರಿದಾಸರಲ್ಲಿ ಈ
ಳನ್ನು ಹುಡುಕುವುದು ಉಚಿತವೆನ್ನಿಸುವದಿಲ್ಲ" (ಪು.೧೧೦) ಎನ್ನುವ ಡಾ.ಕುಲ
ವರು, ಈ "ಎಲ್ಲ ಲಕ್ಷಣಗಳನ್ನು ಅವರ (ಮಹಿಪತಿರಾಯರ) ಚರಿತ್ರೆಯಿಂದ
ಅವರು ರಚಿಸಿದ ಹಲವಾರು ಕೃತಿಗಳಿಂದ ಕಾಣಬಹುದಾಗಿದೆ" (ಪು.೧೧೧) ಎ
ಇದು ಒಂದು ರೀತಿಯಲ್ಲಿ ಅಸ್ಪಷ್ಟವೆನ್ನಿಸುತ್ತದೆ. ವಿಜಯದಾಸರಿಗಿಂತ ಮೊದಲಿನ
ಈ ಲಕ್ಷಣಗಳ ಅಗತ್ಯವಿಲ್ಲವೆನ್ನುವುದಾದರೆ, ಅನಂತರದ ದಾಸರಲ್ಲಿ ಅವುಗಳ
ಏನಿದೆ ?

ಹದಿನಾಲ್ಕು ವಿವಿಧ ಅಂಕಿತಗಳಿಂದ ಕೃತಿ ರಚನೆ ಮಾಡಿರುವ ಮಹಿಪತಿರಾಯರ
ಕೃತಿಗಳನ್ನು ರಚಿಸಿದ್ದಾರೆಂದು ಡಾ.ಕುಲಕರ್ಣಿ ಲೆಕ್ಕ ಹಾಕಿದ್ದಾರೆ. ಇವು ಕನ್ನಡ (
ಮರಾಠಿ (೪೬), ಹಿಂದಿ (೧೮) ಭಾಷೆಗಳಲ್ಲಲ್ಲದೆ ಮಿಶ್ರ ಭಾಷೆ (೫)ಗಳಲ್ಲೂ
ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಮಹಿಪತಿರಾಯರ ಕೃತಿಗಳಲ್ಲಿ ಹಲವಾರು
ಗಳಿವೆ ಎಂಬುದಾಗಿ ಡಾ.ಕುಲಕರ್ಣಿಯವರು ಹೇಳುತ್ತಾರೆ. ಅನೇಕ ಕಾರಣಗಳಿಂ
ನಿಜವಿರಬಹುದು. ದೇವನಾಗರಿಯಿಂದ ಲಿಪ್ಯಂತರಗೊಳಿಸುವಾಗ ತಪ್ಪಾಗಿರಬಹುದು
ನುಡಿ- ಶಿಷ್ಟ ಭಾಷೆಗಳ ಗೊಂದಲದಿಂದ ತಪ್ಪಾಗಿರಬಹುದು; ಮುದ್ರಣ ದೋಷ
ತಪ್ಪಾಗಿರಬಹುದು; ಡಾ. ಜಾನ್ಸನ್ ಹೇಳುವಂತೆ ಸಂಪಾದಕರ 'ಅಜ್ಞಾನ'ದಿಂದಲೂ
ರಬಹುದು. ಈ ಬಗೆಯ ಕೆಲಸಗಳು ಒಂದೇ ಸಲಕ್ಕೆ ಪರಿಪೂರ್ಣವೆನ್ನಿಸಲಾರವು.
ಭಗವಂತನೇ ಪರಿಪೂರ್ಣನಲ್ಲದಿರುವಾಗ, ಅವನ ಸೃಷ್ಟಿಯೇ ಆದ ನಾವೂ ಪರಿಪೂ
ಲ್ಲದಾಗ, ನಮ್ಮ ಕೆಲಸಗಳು ಹೇಗೆ ಪರಿಪೂರ್ಣವಾದಾವು?

ತಮ್ಮ 'ಠ' ಪ್ರತಿಯನ್ನೂ, ಮೈಸೂರು ವಿಶ್ವವಿದ್ಯಾನಿಲಯದ ಪ್ರತಿಯನ್ನೂ ಡ
ರ್ಣಿಯವರು ಹೋಲಿಸಿರುವುದನ್ನು (ಪು.೧೨೬-೧೩೧) ನೋಡಿದ ಮೇಲೆ ನನ್ನಲ್ಲಿ
ಪ್ರಶ್ನೆಗಳೆದ್ದವು. ಎರಡು ಭಿನ್ನ ಪ್ರತಿಗಳಿರುವಾಗ ಅವೆರಡೂ ಒಂದೇ ಆಗಿರಬೆ
ನಿರೀಕ್ಷಿಸುವುದು ಹೇಗೆ? ಇವುಗಳಲ್ಲಿ ಬದಲಾವಣೆಯ ಸಾಧ್ಯತೆಯೇ ಇಲ್ಲವೆ?
ಪ್ರತಿಗಳನ್ನು ಇಟ್ಟುಕೊಂಡು ಯಾವುದು ಸರಿ ಯಾವುದು ತಪ್ಪು ಎಂದು ಕಂಡುಕೊಳ
ಸಾಧ್ಯವೆ?- ಇವೆಲ್ಲ ಹಸ್ತಪ್ರತಿ ಶಾಸ್ತ್ರಕ್ಕೆ, ಗ್ರಂಥ ಸಂಪಾದನೆಗೆ ಸಂಬಂಧಿಸಿದ ವಿಚಾ
'ಠ' ಪ್ರತಿಯಲ್ಲಿ "ಸರ್ವಪಾಪ ಹೋಯಿತು ನೋಡಿ" ಎಂದಿದೆ (ಪು. ೧೨೯). ಮೈ
ಪ್ರತಿಯಲ್ಲಿ "ಸರ್ವ ಪಾಪ ಹೋಯಿತು ಓಡಿ" ಎಂದಿದೆ. ಮೈಸೂರು ಪಾಠ ಅ
ಹೇಗಾಗುತ್ತದೆ? 'ಠ' ಪ್ರತಿಯಲ್ಲಿ "ಗುರು ವಿಂದಧಿಕ ಬ್ಯಾರಿಲ್ಲ ಸುಖ" ಎಂದಿದೆ
೧೨೯) 'ಸುಖ' ಎನ್ನುವದು ಮೈಸೂರುಪ್ರತಿಯಲ್ಲಿ 'ಸಖ' ಎಂದಿದೆ. ಇದು
ದೋಷವಾಗಿರಬಹುದು. ಆಗಿಲ್ಲದಿದ್ದರೂ 'ಸಖ' ಎನ್ನುವದು 'ಸುಖ' ಎನ್ನುವು
ಹೆಚ್ಚು ಉತ್ತಮವಾಗಿಲ್ಲವೆ? 'ಠ' ಪ್ರತಿಯ 'ವಡಮೂಡಿ' ಮೈಸೂರು ಪ್ರತಿಯ 'ವ
ಡಿ' (ಪು. ೧೩೧) ಇವುಗಳ ನಡುವಿನ ವ್ಯತ್ಯಾಸ ಏನೆಂದು ನನಗೆ ತಿಳಿಯಲಿಲ್ಲ. ಯ
ಕೃತಿಯನ್ನು "ಸಾಧ್ಯವಾದಷ್ಟು ಮಟ್ಟಿಗೆ ಮೂಲರೂಪದಲ್ಲಿಯೇ ಪ್ರಕಟಿಸುವ ಅಗತ್ಯ
ಎಂಬುದು ನಿಜ. ಗ್ರಂಥ ಸಂಪಾದನೆಯ ಕೆಲಸವೇ ಅದು. ಡಾ.ಕುಲಕರ್ಣಿಯವರು ವ
ರಾಯರ ಕೃತಿಗಳ ಪರಿಶುದ್ಧ ಆವೃತ್ತಿಯೊಂದನ್ನು ತರಲು ಪ್ರಯತ್ನಿಸಬೇಕೆಂದು ಈ ಸ

ಪ್ರಾರ್ಥಿಸಿಕೊಳ್ಳುತ್ತೇನೆ.

ಹಲವಾರು ವಿದ್ವಾಂಸರು ತಮ್ಮ ತಮ್ಮ ಸಂಪ್ರದಾಯಗಳಂತೆ ತಾವು ನಂಬಿದ ಶ್ರದ್ಧೆಯ ನಲ್ಲಿ ಮಹಿಪತಿರಾಯರಂಥ ಮಹಾತ್ಮರ, ಯೋಗಿಗಳ ತಮಗೆ ಅನುಕೂಲವಾಗುವಂಥ ಕೃತಿಗಳನ್ನು ಆಯ್ದುಕೊಂಡು ಅರ್ಥೈಸಲು ಪ್ರಯತ್ನಿಸಿದ್ದಾರೆ. ಅದು ಅವರವರು ಕೊಂಡ ದೃಷ್ಟಿ. ಅದಕ್ಕೆ ಅವರು ಸ್ವತಂತ್ರರು. ಆದರೆ ಅದುವೆ ನಿರ್ಣಯವಾಗಲಾರದು. ೧೩೫) ಎಂಬುದಾಗಿ ಡಾ. ಕುಲಕರ್ಣಿಯವರು ಸರಿಯಾಗಿಯೇ ಹೇಳುತ್ತಾರೆ. ಇದಕ್ಕೆ ಾ ಹೊರತಲ್ಲ. ಪ್ರತಿಯೊಬ್ಬರೂ ತಮ್ಮ ಅನುಭವ, ಅಧ್ಯಯನ, ಪ್ರತಿಭೆಗಳ ಆಳತೆಗೆ ಣವಾಗಿ ತಮ್ಮ ಕೆಲಸ ಮಾಡುತ್ತಾರೆ. ಅದಕ್ಕೆ ಕೊನೆಯಿಲ್ಲ. ಮಹಿಪತಿರಾಯರ ನ್ನು ಅವಲೋಕಿಸುವ ಸಂದರ್ಭದಲ್ಲಿ ಡಾ.ಕುಲಕರ್ಣಿಯವರು ಆ ಕೃತಿಗಳನ್ನು ಯೇ ಕೆದಕಿದ್ದಾರೆ. ಕ್ಲಿಷ್ಟ ಆಧ್ಯಾತ್ಮಿಕ ಅನುಭವಗಳನ್ನು ಮಹಿಪತಿರಾಯರು ಹೇಗೆ ಸಿದ್ದಾರೆಂಬುದನ್ನು ಪರಿಣಾಮಕಾರಿಯಾಗಿ ಹೇಳಿದ್ದಾರೆ. ''ಬ್ರಹ್ಮ ಸಾಕ್ಷಾತ್ಕಾರವು ಚನೀಯವಾದುದು. ಮಾತಿಗೆ ಮೀರಿದ್ದು. ಮನಸ್ಸಿನ ಆಚೆಯದು. ಅನುಭವವು ವವೇ ಹೊರತು ಹೇಳಲು ಬಾರದು. ಇಂಥ ಅನುಭವಗಳನ್ನೂ ಶಬ್ದಗಳಲ್ಲಿ ಹಿಡಿದಿಟ್ಟ ಸ್ಸು ರಾಯರದು'' (ಪು.೧೯೧) ಎಂಬ ಮಾತು ಸರಿಯೆ. ಆದರೆ ಅದು ರಾಯರಿಗಷ್ಟೇ ಾದ ಶ್ರೇಯಸ್ಸಲ್ಲ. ಎಲ್ಲ ಅನುಭಾವಿಗಳಿಗೂ ಇದು ಸಮನಾಗಿ ಅನ್ವಯವಾಗುತ್ತದೆ ದು ನಮ್ಮ ನೆನಪಿನಲ್ಲಿರಬೇಕು. ''ದೊರೆತ ೬೮೫ ಕೃತಿಗಳಲ್ಲಿ ಅರ್ಧದಷ್ಟು ಕೃತಿಗಳು ವ-ಸ್ವಾನುಭವದ ಉಪದೇಶದವುಗಳಾಗಿವೆ. ಉಳಿದರ್ಧದಲ್ಲಿ ಹರಿ-ಗುರು ಮಹಿಮೆ ಲ್ಲಿಯೂ ಗುರುಮಹಿಮೆಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ಗುರುಮಹಿಮೆಯನ್ನು ಹೇಳುವಾ ಅವರ ಅನುಗ್ರಹದಿಂದ ಪಡೆದ ಬ್ರಹ್ಮ ಸಾಕ್ಷಾತ್ಕಾರದ ಅನುಭವಕ್ಕೆ ಹೆಚ್ಚಿನ ಕೃತಿಗಳು ು. ಹೀಗಾಗಿ ಪುನರುಕ್ತಿ ಕಂಡು ಬರುವದು ಸಹಜವಾಗಿದೆ. ಆದರೆ ಅಭಿವ್ಯಕ್ತಿಯಲ್ಲಿ ತೆಯಿದೆ'' ಎಂಬ ಮಾತುಗಳಲ್ಲಿ (ಪು. ೧೯೨) ಸ್ಥೂಲವಾದ ಆದರೆ ಸರಿಯಾದ ಮಾಪನವಿದೆ. ''ಮಹಿಪತಿರಾಯರು ಶಬ್ದ ಸಾಮ್ರಾಟರು. ಅವರ ಶಬ್ದ ಸಂಗ್ರಹ ಮವಾದುದಾಗಿದೆ. ಆ ಶಬ್ದಗಳ ಸರಿ ಉಪಯೋಗ ಕೃತಿಗಳಿಗೆ ನಾದ ಮಾಧುರ್ಯ ಒದಗಿಸಿದೆ. ಪ್ರಾಸ, ಅನುಪ್ರಾಸ, ಯಮಕಾದಿ ಶಬ್ದಾಲಂಕಾರಗಳು, ಮುಕ್ತಪದ ಲಂಕಾರ, ಅರ್ಥಾನುಕಾರಿ ನಾದವುಳ್ಳ ಶಬ್ದಗಳ ಬಳಕೆ ಸಹಜವಾಗಿ ಹೊರಹೊಮ್ಮಿ ಕೃತಿಗಳ ನಾದಮಾಧುರ್ಯವನ್ನು ಹೆಚ್ಚಿಸಿವೆ'' ಎಂಬುದೂ (ಪು.೧೯೮-೯) ಸಹಜವಾದ ಗಿಯೇ ಆಗಿದೆ.

ಚಕೀಯ ಅವ್ಯವಸ್ಥೆ, ಸಾಮಾಜಿಕ ಅವನತಿ, ಧಾರ್ಮಿಕ ಅಸ್ಥಿರತೆಗಳು ತುಂಬಿದ್ದ ್ಲಿ ಮಹಿಪತಿರಾಯರು ಬಂದರು. ಕೃತಿ ರಚನೆ ಮಾಡಿದರು. ಆ ಕೃತಿಗಳ ಮೂಲಕ ಟ್ಟಿದ್ದ ಸಮಾಜಕ್ಕೆ ಆಸೆ, ಧೈರ್ಯ, ಭರವಸೆಗಳನ್ನು ತಂದರು. ಮೇಲಾಗಿ ಹೃದಯದ ಳನ್ನು ಹೊತ್ತಿಸಿ ಮಾನವೀಯತೆಯ ಬೆಳಕು ಚೆಲ್ಲಿದರು. ಇಂಥ ಸಂತರೊಬ್ಬರ ಸಾಧನೆಗಳನ್ನು ಅಧ್ಯಯನದ ವಿಷಯವನ್ನಾಗಿ ಆಯ್ದುಕೊಂಡು ಡಾ.ಕೃಷ್ಣ ಕೊಲ್ಹಾರ ್ಣಿಯವರು ಒಂದು ಒಳ್ಳೆಯ ಕೆಲಸ ಮಾಡಿದ್ದಾರೆ. ತೌಲನಿಕವಾಗಿ ನಿರ್ಲಕ್ಷಿತರಾಗಿದ್ದ ಬ್ಬರನ್ನು ಕುರಿತು ಮೊದಲನೆಯ ಅಧಿಕೃತ ಗ್ರಂಥವನ್ನು ಪ್ರಕಟಿಸಿದ್ದಾರೆ. ನನಗೆ ಕಂಡ

ಕೆಲವು ಸಣ್ಣ ಪುಟ್ಟ ಕೊರತೆಗಳಿಂದ ಗ್ರಂಥದ ಮಹತ್ವಕ್ಕಾಗಲೀ, ಉಪಯು
ಯಾವುದೇ ಬಗೆಯ ಕುಂದೂ ಇಲ್ಲ. ಡಾ.ಕುಲಕರ್ಣಿಯವರು ಯಾವ ಬಗೆಯ
ಆಸಕ್ತಿ, ಪ್ರೀತಿಗಳಿಂದ ಈ ಕೆಲಸ ಮಾಡಿದ್ದಾರೆಂಬುದನ್ನು ನಾನುಬಲ್ಲೆ. ಅದಕ್ಕೆ
ವಾದ ಪ್ರತಿಫಲ ಅವರಿಗೆ ದೊರೆಯಲೆಂದು ಹಾರೈಸುತ್ತೇನೆ. ಅವರ ಊರು
ಮುಖಾಂತರ ನಾನು ಅನೇಕ ಸಲ ಪ್ರಯಾಣ ಮಾಡಿದ್ದೇನೆ. ಅಲ್ಲಿನ ಸೊಗಸಾ
ಅವಲಕ್ಕಿ ತಿಂದು ಆನಂದಿಸಿದ್ದೇನೆ. ಅವರ ಪ್ರಸ್ತುತ ಸಂಶೋಧನೆ ಬೌದ್ಧಿಕವಾಗಿ
ಅವಲಕ್ಕಿಗಳಿಗೆ ಸಮನಾದದ್ದು. ಅವರಿಗೆ ಎಲ್ಲ ಶುಭಗಳೂ ಒದಗಿ ಬರಲೆಂದು
ರ್ವಕ ಹಾರೈಸುತ್ತೇನೆ.

– ಹಾ.ಮಾ.

''ಗೋಧೂಳಿ''
ಜಯಲಕ್ಷ್ಮೀಪುರಂ,
ಮೈಸೂರು - ೫೭೦ ೦೧೨.
ಜುಲೈ ೨೫, ೧೯೮೯

# ಅಂತರಂಗ

ಸುಮಾರು ಇಪ್ಪತ್ತೈದು ವರುಷಗಳಷ್ಟು ಹಿಂದೆ, ಕಾಖಂಡಕಿಯ ಶ್ರೀ ಮಹಿಪತಿರಾಯರ ಒಂದು ಚಿಕ್ಕ ಲೇಖನದೊಂದಿಗೆ (ಕರ್ಮವೀರ ೧೧-೧೧-೧೯೬೫) ನನ್ನ ಬರವಣಿಗೆಯನ್ನು ಪ್ರಾರಂಭಿಸಿದಾಗ ಮುಂದೆ ಒಂದು ದಿನ ಈ ವಿಷಯದಲ್ಲಿ ಪಿಎಚ್.ಡಿ ಪದವಿಯನ್ನು ಪಡೆಯಬಹುದೆಂಬ ಕಲ್ಪನೆ ನನ್ನಲ್ಲಿ ಇರಲಿಲ್ಲ. ಆದಾಗ ಎಸ್.ಎಸ್.ಸಿ. ಅಂಚೆ-ತಂತಿ ಇಲಾಖೆಯಲ್ಲಿ 'ತಾರ ಮಾಸ್ತರ' ನೆಂದು ನೌಕರಿ ಮಾಡುವ ನನಗೆ ಊಹಿಸುವುದೂ ಸಾಧ್ಯವಿರಲಿಲ್ಲ. ಆದರೆ ಈ ಮಧ್ಯದ ಸುಮಾರು ಕಾಲು ಶತಮಾನದಲ್ಲಿ ನನಗೆ ಅರಿವಿಲ್ಲದೆಯೇ ಬೆಳೆದು ಬಂದ ಬರವಣಿಗೆಯ ಹುಚ್ಚು. ಜೊತೆಗೆ - ಸಂಶೋಧನೆಗಳಲ್ಲಿ ಒಲವು ಈ ಘಟ್ಟಕ್ಕೆ ತಂದು ನಿಲ್ಲಿಸಿದೆ. ಈ ಅವಧಿಯಲ್ಲಿ ...ತಿ ಇಲಾಖೆಯನ್ನು ಬಿಡಲಿಲ್ಲ. ನನ್ನನ್ನು ಬರವಣಿಗೆ ಬಿಡಲಿಲ್ಲ.

...ರಿಯ ಪ್ರಾರಂಭದ ದಿನಗಳಲ್ಲಿ ಮುಂಬಯಿಯಲ್ಲಿದ್ದಾಗ (೧೯೭೦-೧೯೮೧) ...ಷ ಪ್ರಾದೇಶಿಕ ಅಭಿಮಾನ, ಅದರೊಂದಿಗೆ ಒಂದಿಷ್ಟು ಭಾವುಕತನ, ನನ್ನ ಊರು, ...ಗಳ ಕುರಿತಾದ ಅಭಿಮಾನ ಅಂತರಂಗವನ್ನು ಹಸಿಯಾಗಿಸಿತು. ನನ್ನ ಊರ ...ಳ್ಳಿ ಕಾಖಂಡಕಿ ಅಲ್ಲಿಯ ಮಹಿಪತಿರಾಯರ ಕುರಿತು ನಾಡಿನ ಖ್ಯಾತ ತತ್ತ್ವಜ್ಞಾನಿ ...ಡಿ. ರಾನಡೆ ಅವರು ಬರೆಯುತ್ತ 'ಅವರೊಬ್ಬ ವಿಶ್ವದ ಶ್ರೇಷ್ಠ ಅನುಭಾವ ಕವಿ' ...ಸ್ಕರಿಸಿದಾಗ ಎದೆ ಉಬ್ಬಿತು. ಅವರ ಬಗ್ಗೆ ತಿಳಿದುಕೊಳ್ಳಬೇಕು ಅನಿಸಿತು. ಅವರನ್ನು ...ಲು ಹೊರಟ ದಾರಿಯಲ್ಲಿ ವಿಜಾಪುರದ ಅಪೂರ್ವ ಇತಿಹಾಸ ಸಿಕ್ಕಿತು. ಈ ...ಲ್ಲಿ ಇನ್ನುವರೆಗೆ ಯಾರೂ ಹೇಳಿಕೊಳ್ಳುವಂಥ ಕೆಲಸ ಮಾಡಿಲ್ಲ ಎಂದು ತಿಳಿದಾಗ ...ಯ ಹುಮ್ಮಸ್ಸು ಬಂದಿತು. ಆದರೆ ಏನಿದ್ದರೂ ಎಸ್.ಎಸ್.ಸಿ.ಯ ನಾನು ಚಿಕ್ಕ ಪುಟ್ಟ ಲೇಖನಗಳಿಗಷ್ಟೆ ಸೀಮಿತವಾಯಿತು. ವಿಜಾಪುರದ ಕುರಿತು, ...ಯರ ಕುರಿತು ಅಲ್ಲಿ -ಇಲ್ಲಿ ಬಿಡಿ ಲೇಖನಗಳನ್ನು, ಕಾಲ ವಿಚಾರ ...ಗಿ ಬರೆದು ಪತ್ರಿಕೆಗಳಲ್ಲಿ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದೆ. ಆಗಲೂ ನನಗೆ ಈ ... ಕಲ್ಪನೆ ಇರಲಿಲ್ಲ!

...ಯಿಯಿಂದ ಬೆಳಗಾವಿ, ರಾಯಚೂರುಗಳನ್ನು ತಿರುಗಿ ೧೯೮೨ ರಲ್ಲಿ ...ಬಂದೆ. ಅಲ್ಲಿಯ ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯಿಂದ ...ಎ. ಮಾಡಬಹುದು ಎಂದಾಗ ಒಂದು 'ಕೈ' ನೋಡಬೇಕು ಅನಿಸಿತು. ಹಳೆಯ (೧೯೫೭) ಪ್ರಮಾಣ ಪತ್ರವನ್ನು ತೆಗೆದು ಧೂಳು ಜಾಡಿಸಿ ಕಳಿಸಿದೆ. ...ರು ವರುಷಗಳಲ್ಲಿ ನಾನು ಎಂ.ಎ. ಪದವೀಧರನಾಗುವ ಹೊತ್ತಿಗೆ ನನಗೆ ...ಬದಲಿಯಾಯಿತು. ಅಭ್ಯಾಸದ ಕುರಿತು ಒಂದಿಷ್ಟು ಧೈರ್ಯ ಬಂದಿತು. ...ಗಿ ವಿಜಾಪುರಕ್ಕೆ ಬಂದಾಗ ಹತ್ತಿರದ ಮಹಿಪತಿರಾಯರ ಕುರಿತು ಪಿಎಚ್.ಡಿ ...ಬರದು ಅನಿಸಿತು. ಸರಿ, ಸಮೀಪದ ಕಲಬುರ್ಗಿಗೆ ಹೋಗಿ ಹೆಸರು

ೋಂದಾಯಿಸಿದೆ. ಮತ್ತೆ ಎರಡು ವರುಷಗಳಲ್ಲಿ ಪ್ರಬಂಧವನ್ನು ಸಿದ್ಧಪ
ಶ್ವವಿದ್ಯಾಲಯಕ್ಕೆ ಸಾದರ ಪಡಿಸಿದೆ. (೧೯೮೭) ಅವರು ಅದನ್ನು ಮನ್ನಿಸಿ ಪಿಎಚ್
ದವಿಯನ್ನಿತ್ತರು. ಪದವಿಗೆ ನಾನು ಸಾದರಪಡಿಸಿದ ಪ್ರಬಂಧ 'ಶ್ರೀಮಹಿಪತಿರಾ
ತಿಗಳು- ಒಂದು ಅಧ್ಯಯನ' ಅದರ ಆಧಾರದ ಮೇಲೆ – ಚರಿತ್ರೆಗೆ ಒಂದಿಷ್ಟು ಒತ್ತು ಕೊ
ಚಿಸಿದ 'ಕಾಖಂಡಕಿ ಶ್ರೀಮಹಿಪತಿರಾಯರು ಇದೀಗ ಪುಸ್ತಕ ರೂಪದಲ್ಲಿ ಹೊರಬರುತ್ತಿ
ಎಚ್.ಡಿ ಪದವಿ ನೀಡಿದ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ನಾನು ಋಣಿ.

ಹೌದು ಈ ನಡೆದು ಬಂದ ದಾರಿಯನ್ನು ಈಗ ದಾಖಲಿಸಲು ತುಂಬ ಸುಲಭವೆನಿಸುತ್ತ
ದರೆ ನಡೆದ ದಾರಿ ತುಂಬ ಕಷ್ಟದ್ದು. ಅದನ್ನು ಹಗುರುಗೊಳಿಸಿದ ಮಹನೀಯರ ಒಂ
ಉದ್ದ ಪಟ್ಟಿಯೇ ಆಗುತ್ತದೆ. ಅದನ್ನು ಎಲ್ಲಿಂದ ಪ್ರಾರಂಭಿಸಬೇಕು? ಯಾವುದ
ಳಬೇಕು?

ಅಪರಿಚಿತನಾದ ನನ್ನನ್ನು ವಿಶ್ವಾಸದಿಂದ ಬರಮಾಡಿಕೊಂಡು, ತಮ್ಮ ಸಹೋದರನ
ದು ಮಾರ್ಗದರ್ಶನ ಮಾಡಲು ಮುಂದೆ ಬಂದವರು ಕಲಬುರ್ಗಿಯ ಡಾ. ಕೃಷ್ಣಮೂ
ತ್ತಿರರು. ವಾರಗಟ್ಟಲೆ ತಮ್ಮ ಮನೆಯಲ್ಲಿಯೇ ಉಳಿಸಿಕೊಂಡು ಪ್ರಬಂಧದ ಪ್ರ
ರವನ್ನು ಪರಿಶೀಲಿಸಿ ಮಾರ್ಗದರ್ಶನ ಮಾಡಿದರು. ಆದರೆ ಹೆಸರು ನೊಂದಾಯಿಸಿದಾ
ರ್ಗದರ್ಶಿಗಳನ್ನು ಗೊತ್ತುಪಡಿಸಿಕೊಂಡಾಗ ಮಾರ್ಗವೇ ಇರಲಿಲ್ಲ! ದಾರಿಗೆ ಬಂ
ಲೆ ತಾನೆ, ದಾರಿದರ್ಶನ. ಆ ದಾರಿಗೆ ಹಚ್ಚಿದವರು ಮಹಿಪತಿರಾಯರ ಮನೆತನದವರಾ
ಪುರದ ಕೀರ್ತನ ಕೇಸರಿ ಶ್ರೀ ದೇವಪ್ಪಯ್ಯ ಕಾಖಂಡಕಿ ಅವರು. ತಮ್ಮಲ್ಲಿದ್ದ ಒಂ
ಡು ಕಾಗದ ಮೊದಲು ಮಾಡಿಕೊಂಡು ಎಲ್ಲ ಸಾಹಿತ್ಯವನ್ನೂ ಒದಗಿಸಿದರು
ದಾಗಲೆಲ್ಲ ಬೇಸರಿಸದೆ ಹೇಳಿದರು. ಅದರಂತೆ ಸಿಂದಗಿಗೆ ಹೋದಾಗ ಅಲ್ಲಿಯ ಶ್ರಿ
ವರಾವ ಬಿಂದೂರಾವ ಕುಲಕರ್ಣಿ ಅವರು ತಮ್ಮಲ್ಲಿಯ ಸಾಮಗ್ರಿಯನ್ನು ಉದಾರವಾ
ತಿದರಲ್ಲದೆ ತಮ್ಮ ಕಕ್ಕಂದಿರಾದ ಶ್ರೀ ಧೊಂಡೋ ಪಂತರಿಂದ ಆದಿಲಶಾಹಿ ಕಾಲ
ದ ಪತ್ರಗಳನ್ನು ದೊರಕಿಸಿಕೊಟ್ಟರು. ವರುಷಗಟ್ಟಲೆ ತಮ್ಮ ಹಸ್ತಪ್ರತಿಗಳನ್ನು, ಕಾಗ
ಗಳನ್ನು ನನ್ನಲ್ಲಿಯೇ ಉಳಿಸಿಕೊಳ್ಳಲು ಈ ಮಹನೀಯರು ಅನುಮತಿ ನೀಡಿದರು.

ಅಪೂರ್ವವಾದ ಕಚ್ಚಾ ಸಾಮಗ್ರಿ ದೊರೆಯಿತು. ಅಷ್ಟಕ್ಕೆ ನಿಲ್ಲಲಿಲ್ಲ. ಐತಿಹಾಸಿ
ಲೆಗಳನ್ನು ಹುಡುಕಬೇಕಲ್ಲ. ವಿಜಾಪುರದ ಮಧ್ಯಯುಗೀನ ಕಾಲದ ಬಹುತೇ
ಲೆಗಳು ಇರುವುದು ಪುಣೆಯ ಭಾರತ ಇತಿಹಾಸ ಸಂಶೋಧನ ಮಂಡಲದಲ್ಲಿ ಹಾಗ
ತತ್ವ ಇಲಾಖೆಯಲ್ಲಿ. ಅಲ್ಲಿ ಸುಲಭ ಪ್ರವೇಶ ದೊರಕಿಸಿದವರು, ಪುಣೆಯ ಗೋಖಲೆ
ರ್ ಹಾಗು ರಾಜ್ಯಶಾಸ್ತ್ರ ಸಂಸ್ಥೆಯಲ್ಲಿ ಸಹಾಯಕ ಸಂಶೋಧಕರಾದ ಅಥಣಿಯ ಶ್ರೀ
ತ ರಾ. ಕುಲಕರ್ಣಿ ಅವರು. ನಾಲ್ಕಾರುದಿನ ಪುಣೆಯಲ್ಲಿ ನನ್ನ ಜೊತೆ ತಿರುಗಿದರಲ್ಲದೆ,

ಂದಾಗ ಬೇಡಿದ್ದನ್ನು ಜೆರಾಕ್ಸ ಮಾಡಿಸಿ ವಿಜಾಪುರಕ್ಕೆ ಕಳಿಸಿದರು. ತಮ್ಮಲ್ಲಿದ್ದ
ಾತಿಯ ಅಪೂರ್ಣ ಚರಿತ್ರೆಯನ್ನು ನಕಲು ಮಾಡಿಕೊಟ್ಟರು. ಕೆಲವು ಮಿಶ್ರಭಾಷಾ
ಳನ್ನು ಒದಗಿಸಿದರು.

ಇನ್ನು ಪ್ರಬಂಧವನ್ನು ಬರೆಯುವಾಗ ಸಲಹೆ ಸೂಚನೆಗಳನ್ನಿತ್ತು, ಎಲ್ಲಿಗೆ ಬಂತು?
ೆ ಕೇಳುತ್ತ ಬೆನ್ನು ಚಪ್ಪರಿಸಿದವರು, ಬರೆದಾದ ಮೇಲೆ ವಿಶ್ವವಿದ್ಯಾಲಯಕ್ಕೆ
ಂಧವನ್ನು ಸಾದರ ಪಡಿಸುವಲ್ಲಿ, ಅನಂತರ ಇಂದಿನ ಪ್ರಕಟನೆಯವರೆಗೆ ಅನೇಕ
ಾಗಿ ಸಹಾಯ ಸಹಕಾರಗಳನ್ನು ನೀಡಿದವರು ಮತ್ತೆ ಹಲವರು. ಅವರಲ್ಲಿ ನನ್ನ ಮಾವ,
ಸಂಸ್ಕೃತ ವಿದ್ವಾಂಸರಾದ ಶ್ರೀ ದಾ.ಹ. ದಿವಾಣಜಿ. ಶ್ರೀ ಕೃಷ್ಣರಾವ ಸತ್ತೂರ, ಡಾ.
ಂತ ನ. ಗುಮಾಸ್ತೆ, ಶ್ರೀ ಪ್ರಕಾಶ ಮಲ್ಹಾರರಾವ ಸೋಲಾಪುರಕರ, ಡಾ. ಎಂ.ಎಂ.
, ಶ್ರೀ ಬಿ.ವ್ಹಿ.ಕುಲಕರ್ಣಿ, ಶ್ರೀ ಎಂ.ಆರ್. ದೇಶಪಾಂಡೆ, ಶ್ರೀ ಆರ್.ಜಿ. ಹರಿದಾಸ,
ಎಚ್.ಎನ್. ಕುಲಕರ್ಣಿ, ಶ್ರೀ ಆದ್ಯ ರಾಮಾಚಾರ್ಯರು ಮತ್ತು ಹಲವರು.
ಇಂದಿಗೆ ನನ್ನ ತಂತಿ ಇಲಾಖೆಯ ಕರ್ನಾಟಕಾದ್ಯಂತದ ಸಹೋದ್ಯೋಗಿಗಳು ಮತ್ತು
ೃ ಸ್ನೇಹಿತರನ್ನು ನಾನು ನೆನೆಯಬೇಕು.

ೀಗೆ ಹಲವಾರು ಜನರ ಸಹಾಯ -ಸಹಕಾರಗಳಿಂದ ರೂಪುಗೊಂಡ ಪ್ರಬಂಧ ಇದು.
ಕ್ಕೆ ಕಾರಣ ಕರ್ತರಾಗಿ ನಿಂತವರು ಇನ್ನಿಬ್ಬರು. ಅವರ ಹೆಸರನ್ನು
ಶಪೂರ್ವಕವಾಗಿ ಈವರೆಗೆ ಹೇಳಲಿಲ್ಲ. ಅವರಲ್ಲಿ ಒಬ್ಬರು ನನ್ನ ಬಾಲ್ಯ ಸ್ನೇಹಿತ ಶ್ರೀ
. ಕುಲಕರ್ಣಿ ಇನ್ನೊಬ್ಬರು ಡಾ. ಶ್ರೀನಿವಾಸ ಹಾವನೂರರು.

ಮೂರು ದಶಕಗಳ ಹಿಂದೆ ನನಗೆ ಸಾಹಿತ್ಯದ ಹುಚ್ಚು ಹಿಡಿಸಿದವನೇ ಪಿ.ಎನ್.
ಣಿ. ತಾನೊಬ್ಬ ಅಪರೂಪದ ಕವಿಯಾಗಿ, ತಾನು ಶ್ರೀ ಅರವಿಂದರ ಯೋಗ
ಮಲ್ಲಿ ನಿರತನಾಗಿ ನನ್ನನ್ನು ಪುಸ್ತಕ ಓದಲು ಬಿಟ್ಟ. ಈ ಪ್ರಬಂಧದಲ್ಲಿ ಆಧ್ಯಾತ್ಮ,
ಹಾಗು ಅನುಭಾವಗಳ ಕುರಿತು ಕಿಂಚಿತ್ ಬರೆಯಲು ನನಗೆ ಸಾಧ್ಯವಾಗಿದ್ದರೆ ಅದು
ಪ್ರೇರಣೆಯಿಂದ ಹಾಗು ಅವನೊಂದಿಗಿನ ಸತತ ಚರ್ಚೆಯಿಂದ.

ನ್ನು ಡಾ. ಶ್ರೀನಿವಾಸ ಹಾವನೂರರ ಕುರಿತು ಏನು ಹೇಳಬೇಕು- ಏನು
ದದು? ತಾರಮಾಸ್ತರ ಕೆ.ಎಚ್. ಕುಲಕರ್ಣಿಯನ್ನು ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ೂಪಿಸಿದವರು ಅವರು. ಈ ಮಣ್ಣು ಮುದ್ದೆಯಲ್ಲಿ ಕೆಸರು ಉಳಿದಿದ್ದರೆ ನನ್ನದು.
ಅವರದು. ಯಾವ ಜನ್ಮದ ಋಣಾನುಬಂಧವೋ ಏನೋ, ಗುರುವಾಗಿ,
ನಾಗಿ, ಸ್ನೇಹಿತರಾಗಿ ನಿಂತು ಹೆಜ್ಜೆ-ಹೆಜ್ಜೆಗೂ ಕೈ-ಹಿಡಿದು ನಡೆಸಿಕೊಂಡು
. ಪ್ರಾರಂಭದ ಬರವಣಿಗೆಯ ದಿನಗಳಲ್ಲಿ ಒತ್ತಕ್ಷರ ದೀರ್ಘಗಳನ್ನು

ುವುದಲ್ಲದೆ, ಬರವಣಿಗೆ ಅಂದರೆ ಏನು? ಅಭ್ಯಾಸ ಹೇಗೆ ಮಾಡಬೇಕು ಎಂದು ತಿಳಿಸುತ್ತ
ಕಾಶ ದೊರೆತಾಗಲೆಲ್ಲ ಮುಂದೆ ಕರೆದುಕೊಂಡು ನಿಲ್ಲಿಸಿದವರು. ಮುಂಬಯಿಯಲ್ಲ
ರೊಂದಿಗೆ ಕಳೆದ ಒಂದು ದಶಕ, ಆಮೇಲೆ ದೂರ ಇದ್ದುಕೊಂಡು ಕಳೆದ ಎರಡ
ಗಳಲ್ಲಿ ಯಾವುದು ಹೆಚ್ಚು ಉಪಯುಕ್ತ ಎಂಬುದನ್ನು ಆ ದಶಕಗಳೇ ಹೇಳಬೇಕು
ಮೂರಿಗೆ ಬಂದು ನಾನು ಹಾಜರಾಗುವ ಮೊದಲೇ ಮಂಗಳೂರಿನಲ್ಲಿದ್ದ ಅವರು ನನ್ನ
ಎ. ಅರ್ಜಿಯನ್ನು ತುಂಬಿ ಇಟ್ಟಿದ್ದರು. ವಿಜಾಪುರಕ್ಕೆ ಬರುವ ಮೊದಲೇ ತಮ್ಮ
ತರಾದ ಡಾ. ಕಿತ್ತೂರರಿಗೆ ಪತ್ರ ಬರೆದು ಪಿಎಚ್.ಡಿ.ಗೆ ರಜಿಸ್ಟರ ಮಾಡಲು ಹೇಳಿದ್ದರು.
ು ಕೇವಲ 'ಅರ್ಜುನ ವೃತ್ತಿ'! ಅಂತೆಯೇ ಈ ಪ್ರಬಂಧ ಅವರಿಗೆ ಅರ್ಪಿತ. ಅರವತ್ತ
ಲಲ್ಲಿ ನಿಂತ, ವೃತ್ತಿಯಿಂದ ನಿವೃತ್ತರಾದ ಹಿರಿಯಣ್ಣನಿಗೆ ಕಿರಿಯನ ಕಾಣಿಕೆ.

ಇನ್ನು ಖಾಸಗಿಯಾಗಿ ನನ್ನ ಬೆಳವಣಿಗೆಗೆ ಬೆನ್ನೆಲುಬಾಗಿ ನಿಂತವಳು ನನ್ನ ಹೆಂಡತಿ ಸೌ.
ಮಾ. ವಿಶೇಷತಃ ಪ್ರಬಂಧವನ್ನು ಸಿದ್ಧಪಡಿಸುವಾಗಿನ ಅವಳ ಶ್ರದ್ಧೆ ಅನುಪಮವಾದದ್ದು.

ಗೆ ರೂಪುಗೊಂಡ ಈ ಪ್ರಬಂಧವನ್ನು ಪ್ರಕಟನೆಗೆ ಅಳವಡಿಸುವಾಗ ನನ್ನ ಮೇಲಿನ
ವಿಶ್ವಾಸಗಳಿಂದ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಡಲು ಒಪ್ಪಿದವರು
ಶಾ.ಮಾ. ನಾಯಕ ಅವರು. ನಾನು ಪತ್ರ ಬರೆದು ಕೇಳಿದಾಗ, ತಕ್ಷಣ ಉತ್ತರ ಬರೆದು
ಂದು ಗೌರವವೆಂದೇ ನನ್ನ ಭಾವನೆ. ಅವಶ್ಯವಾಗಿ ನಾಲ್ಕು ಮಾತು
ಕೊಡುತ್ತೇನೆ' ಎಂದು ಹೇಳಿದ್ದು ಅವರ ದೊಡ್ಡ ಗುಣ. ಅವರಿಗೆ ನಮನ.

ಜಕೀಯ ಅವ್ಯವಸ್ಥೆ ಸಾಮಾಜಿಕ ಅವನತಿ ಧಾರ್ಮಿಕ ಅಸ್ಥಿರತೆಗಳು ತುಂಬಿದ್ದ
ಲ್ಲಿ ಮಹಿಪತಿರಾಯರು ಬಂದು ತಮ್ಮ ಕೃತಿಗಳ ಮೂಲಕ ಹೃದಯದ ಹಣತೆಗಳನ್ನು
ಸಿ ಮಾನವೀಯತೆಯ ಬೆಳಕು ಚೆಲ್ಲಿದರು. ಪುಣೆಯ ಮರಾಠಿ-ಕನ್ನಡ ಸ್ನೇಹ ವರ್ಧನ
ವು ಅಂಶತಃ ಅದೇ ಕೆಲಸವನ್ನು ಮಾಡಲು ಹುಟ್ಟಿಕೊಂಡದ್ದು. ಅವರು ಈ
ನ್ನು ಪ್ರಕಟಿಸುತ್ತಿರುವುದು ನನಗೆ ಸಂತೋಷದ ವಿಷಯ. ಕೇಂದ್ರದ ಪದಾಧಿಕಾರಿಗ
ನ್ನ ಕೃತಜ್ಞತೆಗಳು.
ಕಟನೆಯ ಹಂತದಲ್ಲಿ ಕೆಲವರು ಪ್ರಕಟನಾಪೂರ್ವ ಬೆಲೆಯನ್ನು ನೀಡಿ ನೆರವಾಗಿದ್ದಾರೆ.
ರುಗಳಾದ ಶ್ರೀ ಲ.ಹ. ದೇಸಾಯಿ ಅವರು ಪದನಾಮಸೂಚಿಯನ್ನು ಸಿದ್ಧಪಡಿಸಿಕೊ
ಆತ್ಮೀಯ ಶ್ರೀ ಕೆ.ಬಿ. ಕುಲಕರ್ಣಿಯವರು ಮುಖಚಿತ್ರವನ್ನು ರಚಿಸಿಕೊಟ್ಟರು.
ಲ್ಲರಿಗೆ ನನ್ನ ನಮನಗಳು.
ದ್ರಣ ವಿಷಯದಲ್ಲಿ ಆಸ್ಥೆವಹಿಸಿ ಸುಂದರವಾಗಿ ಹೊರಬರುವಲ್ಲಿ ಕಾರಣರಾದ
ವಿಯ ನನ್ನ ಸ್ನೇಹಿತರು ಸರ್ವಶ್ರೀ ಭೀಮಸೇನ ತೊರಗಲ್ಲ, ಶರದ ದೇಸಾಯಿ
ರಾಘವೇಂದ್ರ ಜೋಶಿ ಅವರನ್ನು ಇಲ್ಲಿ ನೆನೆಯುತ್ತೇನೆ.

ಲ ಕಾಲನಿ
ರ ೫೮೬೧೦೩
-೧೯೮೯

ಕೃಷ್ಣ ಕೊಲ್ಹಾರಕುಲಕರ್ಣಿ

## ಪರಿವಿಡಿ

# ದಯವಿಟ್ಟು ಗಮನಿಸಿ

★ // //. ಈ ಚಿಹ್ನೆಗಳ ಮಧ್ಯದ ಸಂಖ್ಯೆಗಳು ಅಡಿಟಿಪ್ಪಣಿಯ ಸಂಖ್ಯೆಗಳ ಸೂಚಿಸುತ್ತವೆ.

★ ಅಡಿ ಟಿಪ್ಪಣಿಗಳನ್ನು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಕೊಡಲಾಗಿ

★ ಓದುವ ಮೊದಲು ಈ ಕೆಲವು ಮುಖ್ಯ ಮುದ್ರಣ ದೋಷಗಳನ್ನು ತಿದ್ದಿಕೊಂಡು ಓದಿ.

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೩ | ೧೩ | ಡಾ। ಕೆ.ಗೋಪಿನಾಥರ | ಡಾ। ಕೆ.ಗೋಕುಲನಾಥರ |
| ೩ | ೧೮ | ಡಾ। ಪಾ.ಶಂ.ಶ್ರೀನಿವಾಸ | ಡಾ। ಪಾ.ಶ.ಶ್ರೀನಿವಾಸ |
| ೩ | ೨೦ | ಪ್ರಕಟವಾಗಿವೆ. | ಪ್ರಕಟವಾಗಿದೆ. |
| ೧೧ | ೨೩ | ಸೆಟ್ಟಿ | ಸೆಟ್ಟಿ |
| ೧೩ | ೨೧ | ರದ್ದಿ | ಸಿದ್ದಿ |
| ೧೫ | ೨೩ | ಸೆಟ್ಟಿಕಥೆ | ಸೆಟ್ಟಿಕಥೆ |
| ೧೮ | ೪ | ೧೨ | ೧೭ |
| ೧೮ | ೧೦ | ಪಾರಾಂತರಕ್ಕೆ | ಪಾಠಾಂತರಕ್ಕೆ |
| ೩೨ | ೩೧ | ಕಿತಾಬ-ಇ-ಸೌರಸ | ಕಿತಾಬ-ಇ-ನೌರಸ |
| ೫೪ | ೧೮ | ಮರ್ಣಾಶ್ರಮ | ವರ್ಣಾಶ್ರಮ |
| ೫೫ | ೩೧ | ಅಸ್ಪೃಶ್ಯರ | ಅಸ್ಪೃಶ್ಯರ |
| ೬೨ | ೨೬ | ಅದರ ಆಣತಿಯಂತೆ | ಅವರ ಆಣತಿಯಂತೆ |
| ೮೦ | ೧೧ | ಬಾದಹರ | ಬಾದಶಹರ |
| ೮೨ | ೨೩ | ಕುಳತರು | ಕುಳಿತರು |
| ೯೧ | ೫ | ಶಾಸ್ತ್ರಾವನ್ನು | ಶಾಸ್ತ್ರವನ್ನು |
| ೧೧೨ | ೬ | ಅವಚ್ಛಿನ್ನವಾದ | ಅವಿಚ್ಛಿನ್ನವಾದ |
| ೧೧೪ | ೬ | ಸಂಬಂಧವಾಚರ | ಸಂಬಂಧವಾಚಕ |
| ೧೧೭ | ೨೯ | ಧೀರಕೃಷ್ಣೊಡೆಯ, ಚೆನ್ನಕೃಷ್ಣ | ಧೀರಕೃಷ್ಣೊಡೆಯ ಅಂಕಿತವನ್ನು ಒಳಗೊಂಡಿದೆ. ಗುರುಕೃಷ್ಣ, ಚೆನ್ನಕೃಷ್ಣ ಚೆನ್ನಕೃಷ್ಣೊಡೆಯ ಹಾಗೂ ಧೀರಕೃಷ್ಣೊಡೆ |
| ೧೩೧ | ೧೨ | ವಡಮೂಡಿ | ವಡಮಾಡಿ |
| ೧೮೪ | ೭ | ಮಸಿಪತಿ | ಮಹಿಪತಿ |
| ೨೦೫ | ೧೧ | ಬೆಳೆದು ಬಗೆಯನ್ನು | ಬೆಳೆದು ಬಂದ ಬಗೆಯನ್ನು |

ಧ್ಯಾಯ ಒಂದು

# ಅಧ್ಯಯನದ ಹಿನ್ನೆಲೆ

ಹರಿದಾಸ ಸಾಹಿತ್ಯ ಚರಿತ್ರೆಯನ್ನು ಕುರಿತು ಈವರೆಗೆ ಅನೇಕ ಗ್ರಂಥಗಳ
ಕಟವಾಗಿವೆ. ಹರಿದಾಸರ ಪದಗಳಂತೂ ಕಳೆದ ಶತಮಾನದ ಮಧ್ಯದಲ್ಲಿಯೇ
ಕಟವಾಗಿವೆ. ಕ್ರಿ.ಶ. ೧೮೫೦ ರಲ್ಲಿ ಜರ್ಮನಿಯ ಹರ್ಮನ್ ಮೊಗ್ಲಿಂಗ
ಂಬಾತನು ಹರಿದಾಸರ ಕೆಲವು ಹಾಡುಗಳನ್ನು ಸಂಗ್ರಹಿಸಿ 'ದಾಸರ ಪದಗಳು' ಎಂ
ಸರಿನಿಂದ ಮಂಗಳೂರಿನಲ್ಲಿ ಛಾಪಿಸಿದ ಕಲ್ಲಚ್ಚಿನ ಪುಸ್ತಕವೇ ಪ್ರಕಟ
ೂಟ್ಟಮೊದಲ ಸಂಕಲನವೆಂದು ವಿದ್ವಾಂಸರು ಗುರುತಿಸಿದ್ದಾರೆ. ಅದನ್ನೇ ಮರುವರುಷ
ಂದರೆ ೧೮೫೧ ರಲ್ಲಿ ಮೈಸೂರು ಸರಕಾರದ ವಿದ್ಯಾ ಇಲಾಖೆಯ ನಿರ್ದೇಶಕ ಜೆ
್ಯರೆಟ್ ಎಂಬಾತನು ಪುನ: ಮುದ್ರಣ ಮಾಡಿರುವುದನ್ನು ಗಮನಿಸಿದರೆ ಮೊದ
ಂಕಲನದ ಜನಪ್ರಿಯತೆಯ ಅರಿವಾಗುತ್ತದೆ.

ಅನಂತರ ಈ ಕ್ಷೇತ್ರದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ದಾಸರ ಪದಗ
ಕಟನೆಯ ಕೆಲಸವನ್ನು ಮುಂದುವರಿಸಿದರು. ಕ್ರಿ.ಶ. ೧೮೭೬ ರಲ್ಲಿ ಹಿಂದೂ ಭಾಷ
ಂಜೀವಿನಿ ಮುದ್ರಣ ಶಾಲೆಯಲ್ಲಿ ಅಚ್ಚಾದ 'ಹರಿಭಜನೆ ಕೀರ್ತನೆ', ೧೮೯೦ ರಲ್
ೇವನಾಗರಿ ಲಿಪಿಯಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತರು ಪ್ರಕಟಿಸ
ಾಸರ ಪದಗಳ ಸಂಗ್ರಹವು' ಎಂಬ ಕೃತಿಗಳು ಉಲ್ಲೇಖಾರ್ಹವಾಗಿವೆ.
ಶಕದಲ್ಲಿಯೇ ಮಡಕಶಿರಾ ಬಾಲಕೃಷ್ಣರಾಯರು ೧೮೯೪ ರಲ್ಲಿ 'ಪುರಂದರದಾಸರ
ಾಡಿದ ಕೀರ್ತನಲು' ಹಾಗೂ ೧೮೯೫ ರಲ್ಲಿ 'ಪುರಂದರ ದಾಸರು ಮೊದಲಾ
ಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕಗಳನ್ನು ತೆಲಗು ಲಿಪಿಯಲ್
ುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಈ ಮಹನೀಯರೆ
ನ್ನೊಂದು ಸಂಕಲನವನ್ನು ಪ್ರಕಟಿಸಿದ್ದಾರೆ. ಮುಂದಿನ ದಿನಗಳಲ್ಲಿ ಬೆಂಗಳೂರು
ಡುಪಿ, ಧಾರವಾಡ ಮತ್ತು ಲಿಂಗಸುಗೂರುಗಳಿಂದ ಅನೇಕರು ದಾಸರ ಪದಗಳನ
ಂಗ್ರಹಿಸಿ ಪ್ರಕಟಿಸತೊಡಗಿದರು. ಅವರುಗಳಲ್ಲಿ ಬಹು ಮುಖ್ಯರಾದವ
ಡುಪಿಯ ಶ್ರೀ ಪಾವಂಜೆ ಗುರುರಾಯರು. ಕ್ರಿ.ಶ. ೧೯೦೮ ರಲ್ಲಿ ಶ್ರೀಮನ್ಮ
ದ್ಧಾಂತ ಗ್ರಂಥಾಲಯವನ್ನು ಸ್ಥಾಪಿಸಿ ಅದರ ಮುಖಾಂತರ ಪುರಂದರ ದಾಸ
ದಗಳನ್ನು ಐದು ಸಂಪುಟಗಳಲ್ಲಿ ಹಾಗೂ ಉಳಿದ ಹರಿದಾಸರ ಕೃತಿಗಳನ
ಡಿ-ಬಿಡಿಯಾಗಿಯೂ, ಸಂಗ್ರಹಗಳಲ್ಲೂ ಪ್ರಕಟಿಸಿದರು. ಹರಿದಾಸ ಸಾಹಿ
ಂಗ್ರಹ ಹಾಗೂ ಪ್ರಕಟನ ಕ್ಷೇತ್ರದಲ್ಲಿ ಶ್ರೀ ಪಾವಂಜೆ ಗುರುರಾಯರೊಂದಿ
ೆಂಗಳೂರಿನ ಶ್ರೀ ಸುಬೋಧ ಎಂ. ರಾಮರಾಯರನ್ನು ಲಿಂಗಸುಗೂರಿನ ಶ್ರ
ೀರಾಬಾಳ್ ಹಣಮಂತರಾವ ವಕೀಲರನ್ನು ಹಾಗೂ ಧಾರವಾಡ ಜಿಲ್ಲೆಯ ಶ್ರ
ೆಂಗೇರಿ ಹುಚ್ಚರಾಯರನ್ನು ನೆನೆಯಲೇಬೇಕು. ಇಂದು ದೊರೆಯುವ ಹರಿದಾ

ಸಾಹಿತ್ಯದಲ್ಲಿ ಬಹುಪಾಲು ಸಾಹಿತ್ಯ ಇವರುಗಳ ಸಾಹಸದ ಫಲವಾಗಿದೆ.

ಹೀಗೆ ದಾಸರ ಪದಗಳ ಸಂಗ್ರಹ ೧೮೫೦ರಷ್ಟು ಹಿಂದಿನಿಂದಲೇ ಪ್ರಕಟವಾಗು ಬಂದುದನ್ನು ಕಂಡರೂ, ಅವುಗಳನ್ನು ರಚಿಸಿದ ದಾಸರ ಕುರಿತು ಅಧ್ಯಯ ಆರಂಭವಾದದ್ದು ಈ ಶತಮಾನದ ಮೂರನೇಯ ದಶಕದಿಂದ. ಕ್ರಿ.ಶ. ೧೯೨೧ ರಲ್ಲಿ ಪ್ರಕಟವಾದ ಶ್ರೀ ಬೇಲೂರು ಕೇಶವದಾಸರ 'ಪುರಂದರ ದಾಸರ ಚರಿತ್ರೆ'ಯೆ ಬಹುಶ: ಮೊದಲ ಪುಸ್ತಕವಾಗಿರಬೇಕು. ಮುಂದಿನ ವರುಷ 'ಜಗನ್ನಾಥರಾಯ ಚರಿತ್ರೆ' ಯನ್ನು ಶ್ರೀ ನಾ.ಭಿ. ಕಲಮದಾನಿ ಅವರು ಬರೆದು ಪ್ರಕಟಿಸಿದ್ದಾರೆ. ಅನಂತ ೧೯೨೬ ರಲ್ಲಿ ಶ್ರೀ ಭೀಮಾಚಾರ್ಯ ವಡವಿ ಅವರ 'ಕನಕ ಮಹಿಮಾದರ್ಶ ಬಂದಿತು

ಈ ದಿಶೆಯಲ್ಲಿಯ ಅಭ್ಯಾಸಕ್ಕೆ ಭದ್ರ ತಳಪಾಯವನ್ನು ಹಾಕಿದವರು ಶ್ರಿ ಬೇಲೂರು ಕೇಶವದಾಸರೆಂದೇ ಹೇಳಬೇಕು. ಕ್ರಿ.ಶ. ೧೯೩೨ ರಲ್ಲಿ ಅವರು 'ಶ್ರಿ ಕರ್ಣಾಟಕ ಭಕ್ತ ವಿಜಯ' ವನ್ನು ಎರಡು ಭಾಗಗಳಲ್ಲಿ ಪ್ರಕಟಿಸಿದರು. ಇವುಗಳಲ್ಲಿ ಮೊದಲ ಸಲ ೧೯ ಜನರ ಹರಿದಾಸರ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. 'ಶ್ರಿ ಕರ್ಣಾಟಕ ಭಕ್ತ ವಿಜಯ'ದ ಮುನ್ನುಡಿಯಲ್ಲಿ ಅವರು ಹೇಳಿದ ಮಾತುಗಳು ಅಲ್ಲಿಯವರೆಗೆ ಇಂಥ ಕೆಲಸ ನಡೆದಿರದ್ದನ್ನು ಎತ್ತಿ ತೋರಿಸುತ್ತದೆ.

'... ... ... ಈ ಗ್ರಂಥ ರಚನೆಗೆ ಬಹುಶ: ಭರತಖಂಡದ ಎಲ್ಲ ದೇಶಗಳ -ಎಲ್ಲ ಭಾಷೆಗಳಲ್ಲೂ ಭಕ್ತ ವಿಜಯವೆಂಬ ಹೆಸರಿನಿಂದ ರಚಿತವಾಗಿರುವ ಪುಸ್ತಕವನ ಓದಿದ್ದೇ ಕಾರಣವಾಯಿತು....... ಕರ್ಣಾಟಕದ ದುರ್ದೈವಕ್ಕೆ ತಕ್ಕಂತೆ ಮೊದಲಿನಿಂ ಕಡೆಯತನಕ ನೋಡಿದರೂ ಒಬ್ಬ ಕರ್ಣಾಟಕ ಸಂತನ ಹೆಸರೂ ಯೋಗ್ಯ ರೀತಿಯಿಂ ಆ ಪುಸ್ತಕದಲ್ಲಿರಲಿಲ್ಲ.'//೧// ಎಂದು ಹೇಳಿದ್ದಾರೆ. ೧೯ ಜನರ ಹರಿದಾಸರ ವಿಸ್ತ ಜೀವನ ಚರಿತ್ರೆಯೊಂದಿಗೆ, ತಾವು ಕೇಳಿದ ಇತರ ಹರಿದಾಸರ ಕುರಿತೂ ಪಕ್ಷಿ ನೋಟ ಇಲ್ಲಿ ದೊರೆಯುತ್ತದೆ. ಹರಿದಾಸ ಸಾಹಿತ್ಯದ ಕುರಿತು ಅಭ್ಯಾಸ ಮಾಡುವವರಿಗೆ ಅವ ಗ್ರಂಥ ಮೊದಲ ಆಕರ ಗ್ರಂಥವೆಂದರೆ ತಪ್ಪಲ್ಲ.

ಹರಿದಾಸರ ಚರಿತ್ರೆ ಹಾಗೂ ಸಾಹಿತ್ಯ ಎರಡನ್ನೂ ವಿವೇಚಿಸಿ ಬರೆದ ಇನ್ನೊಂದ ಪ್ರಮುಖ ಗ್ರಂಥ ಶ್ರೀ ರಾ.ಸ್ವಾ.ಪಂಚಮುಖಿ ಅವರ 'ಹರಿದಾಸ ಸಾಹಿತ್ಯ'ವು ೧೯೫ ರಲ್ಲಿ ಪ್ರಕಟವಾಯಿತು. ಇದು ಸಾಮಾನ್ಯರಿಗೂ ರುಚಿಸಿತು. ಸಂಶೋಧಕರಿ ಮುಂದಿನ ದಾರಿ ಕಾಣಲು ಉಪಯುಕ್ತವೆನಿಸಿತು. ಈ ಗ್ರಂಥ ಹೊರಬರುವ ಮೊದ ಶ್ರೀ ಎನ್.ಬಿ. ಕಲಮದಾನಿ ಹಾಗೂ ಶ್ರೀ ಎ.ಪಿ. ಕರಮರಕರ ಅವರುಗಳು ೧೯೪ ರಲ್ಲಿ 'Mystic Teachings of the Dasas of Karnataka' ಎಂಬ ಇಂಗ್ಲೀ

)ಸ್ತಕವನ್ನು ಪ್ರಕಟಿಸಿದ್ದರು. ಪುಸ್ತಕದ ಹೆಸರೇ ಸೂಚಿಸುವಂತೆ ದಾಸರ ಅನುಭಾ:
ಾಹಿತ್ಯದ ವಿವೇಚನೆಗೆ ಇಲ್ಲಿ ಹೆಚ್ಚು ಒತ್ತು ಕೊಟ್ಟಿದ್ದಾರೆ. ಚಾರಿತ್ರಿಕ ಅಂಶಗಳಿ
ಶೇಷ ಸ್ಥಾನವಿರಲಿಲ್ಲ. ಹೀಗಾಗಿ ಶ್ರೀ ಪಂಚಮುಖಿ ಅವರ 'ಹರಿದಾಸ ಸಾಹಿತ್ಯ'ದೀ
ರಿದಾಸರು ಭಕ್ತಿ ಪಂಥ ಹಾಗೂ ಸಾಹಿತ್ಯ ಇವುಗಳ ಕುರಿತು ಒಂದು ಬಗೆ:
ೃವಸ್ಥಿತ ಸಮಗ್ರ ರೂಪ ದೊರೆಯುವಂತಾಯಿತು.

ಈ ಹೊತ್ತಿಗಾಗಲೇ ವೈಯಕ್ತಿಕವಾಗಿ ಒಬ್ಬೊಬ್ಬ ದಾಸರನ್ನು ತೆಗೆದುಕೊಂಡ
ಂಶೋಧನೆ ನಡೆಸಿ, ದಾಸರ ಚರಿತ್ರೆಯನ್ನು ಹಾಗೂ ಅವರು ರಚಿಸಿದ ಸಾಹಿತ್ಯ
ಭ್ಯಾಸ ಹಾಗೂ ವಿಮರ್ಶೆ ಮಾಡುವ ಪ್ರಯತ್ನಗಳೂ ಪ್ರಾರಂಭವಾಗಿದ್ದವು. ಕ್ರಿ.
೯೩೮ರಲ್ಲಿ ಪ್ರಕಟವಾದ ಶ್ರೀ ಕಟ್ಟಿ ಶೇಷಾಚಾರ್ಯರ 'ಕನಕದಾಸರು' ಈ ನಿಟ್ಟಿನ
ಂದು ಮೈಲಿಗಲ್ಲು. ಕ್ರಿ.ಶ. ೧೯೫೬ ರಲ್ಲಿ ಡಾ. ಎ.ಟಿ. ಪಾಟೀಲರ 'ಪ್ರಸ
ಂಕಟದಾಸರು', ಡಾ. ಕೆ.ಎಂ. ಕೃಷ್ಣರಾಯರ 'ಶ್ರೀ ಜಗನ್ನಾಥ ದಾಸರು' ೧೯೬
ಲ್ಲಿ ಡಾ. ವ.ಅ.ದಿವಾಣಜಿ ಅವರ ಪುರಂದರ ದಾಸರ ಕುರಿತಾದ 'ಪ್ರಸಾದ ಯೋ
ಾಗೂ ಡಾ. ಕೆ. ಗೋಪೀನಾಥರ 'ವಿಜಯ ದಾಸರು' ಮೊದಲಾದ ಪಿ ಎಚ್.
ಪ್ರೌಢ ಪ್ರಬಂಧಗಳು, ಹರಿದಾಸರನ್ನು ಕುರಿತು ಪ್ರಕಟಿತ ಕೃತಿಗಳಲ್ಲಿಯ ಕೆಲ
ಪ್ರಮುಖ ಗ್ರಂಥಗಳಾಗಿವೆ. ಈ ದಿನಗಳಲ್ಲಿ ಹರಿದಾಸ ಸಾಹಿತ್ಯ ವಿಪುಲವಾಗಿ ಬೆಳೆದಿ
ನೇಕ ಕೃತಿಗಳು ಪ್ರಕಟವಾಗಿವೆ. ಪುರಂದರ ದಾಸರ ಕುರಿತಂತೂ ಸಾಕಷ
ಂಥಗಳು, ಲೇಖನಗಳು ಪ್ರಕಟವಾಗಿವೆ. ಶರಣರ –ದಾಸರ ತುಲನಾತ್ಮ
ಭ್ಯಾಸವೂ ನಡೆದಿದೆ. ಕ್ರಿ.ಶ. ೧೯೮೧ ರಲ್ಲಿ ಡಾ. ಪಾ.ಶಂ. ಶ್ರೀನಿವಾಸರ '
omparative Study of Sarana and Dasa Literature' ಎಂಬ ಪ್ರೌ
ಪ್ರಬಂಧ ಪ್ರಕಟವಾಗಿವೆ.

ಹೀಗೆ ಹಲವಾರು ದೃಷ್ಟಿಕೋನಗಳಿಂದ ಅಭ್ಯಸಿಸಿದ ಕನ್ನಡ ಹರಿದಾ
ಾಹಿತ್ಯವನ್ನು ಚಾರಿತ್ರಿಕವಾಗಿ ನಾಲ್ಕು ಪ್ರಮುಖ ಕಾಲಗಳಲ್ಲಿ ಶ್ರೀ ರಾ.ಸ್ವಾ
ಂಚಮುಖಿ ಅವರು ನಿರ್ದೇಶಿಸಿದ್ದಾರೆ. ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ಅವ
ಷ್ಯ ಸಂಘವು ಶ್ರೀ ನರಹರಿ ತೀರ್ಥರ ನೇತೃತ್ವದಲ್ಲಿ ಮೊದಲನೆಯದು, ವಿಜಯನಗ
ಾಲದಲ್ಲಿ ಶ್ರೀಪಾದರಾಯರು, ಶ್ರೀ ವ್ಯಾಸರಾಯರು, ಪುರಂದರ –ಕನಕದಾಸರ ಕಾ
ರಡನೆಯದು. ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಬಾಳಿ
ಾಲ ಮೂರನೆಯದಾದರೆ, ನಾಲ್ಕನೆಯದು ಪ್ರಾಣೇಶ ಗುರುಪ್ರಾಣೇಶದಾಸರಿಂ
ಮುಂದುವರಿದ ಕಾಲವೆಂದು. ಶ್ರೀ ಪಂಚಮುಖಿ ಅವರು ಹೇಳುತ್ತಾರೆ.//೨// ಆದ
ದಾಸ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಹನ್ನೆರಡನೆಯ ಶತಮಾನದಿಂ
ಪತ್ತೊಂಬತ್ತನೆಯ ಶತಮಾನದವರೆಗೆ ಬೆಳೆದು ಬಂದ ಸಾಹಿತ್ಯವನ
ಹರಿತೀರ್ಥರಿಂದ ಪುರಂದರ ಕನಕದಾಸರ ಜೀವಿತ ಕಾಲದ ವರೆಗಿನ ಅವಧಿಯ

ಂದೂ, ಮುಂದೆ ವಿಜಯದಾಸರ ಹಾಗೂ ತರುವಾಯದ
ನ್ನೊಂದು ಘಟ್ಟವೆಂದೂ, ಹೀಗೆ ಎರಡೇ ಪ್ರಧಾನ ಘಟ್ಟಗಳಾಗಿ
ಸುಲಭವೂ ಔಚಿತ್ಯವೂ ಇದೆ.' ಎಂದು ಡಾ. ಕೆ.ಜಿ.ಶಾಸ್ತ್ರಿ ಅವರು
// ಹದಿಮೂರನೆಯ ಶತಮಾನದ ನರಹರಿತೀರ್ಥರು
ಮೂಲ ಪುರುಷ' ರಾಗಿದ್ದರೂ ೧೫ ನೆಯ ಶತಮಾನದ
ವರೆಗೆ ಯಾರ ಹೆಸರೂ ಕೇಳಿಬರುವದಿಲ್ಲ. ದಾಸಕೂಟ
ನ್ಯಾನ ಶ್ಲೋಕದಲ್ಲಿಯ,

ಶ್ರೀ ಪಾದರಾಜಾಯ ನಮಸ್ತೇ ವ್ಯಾಸಯೋಗಿನೇ!
ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ!!

ಗಮನಿಸಿದರೆ ಶ್ರೀಪಾದರಾಯರಿಂದಲೇ ದಾಸ - ಸಾಹಿತ್ಯವು
ಹು. ಎನ್ನಬಹುದು. ಶ್ರೀಪಾದರಾಯರಿಂದ ಪುರಂದರ ಕನಕದಾಸರ
ಕ್ರಿ.ಶ. ೧೬೦೦ ರವರೆಗೆ ದಾಸ ಸಾಹಿತ್ಯದ ಪ್ರಥಮ ಘಟ್ಟವೆಂದೂ
. ಕ್ರಿ.ಶ. ೧೫೬೪ ರಲ್ಲಿ ವೈಕುಂಠಕ್ಕೆ ತೆರಳಿದ ಪುರಂದರದಾಸರ
ಜಯದಾಸರ ವರೆಗೆ ಅಂದರೆ ೧೫೦ ವರುಷಗಳಷ್ಟು ಕಾಲ ಈ
' ಎಲ್ಲಿ? ಹೇಗೆ? ಯಾರಿಂದ ಜೀವ ಹಿಡಿದುಕೊಂಡು ಇದ್ದಿತು?'
ಗೇರಿ ಕೃಷ್ಣಶರ್ಮರು ಕೇಳುತ್ತಾರೆ.//೪// ಇದೇ ಅಭಿಪ್ರಾಯವನ್ನು
ಪಂಚಮುಖಿ ಅವರೂ,//೫// ಡಾ. ರಂ. ಶ್ರೀ. ಮುಗಳಿ
ಹಾಗೂ ಶ್ರೀ ಕಪಟರಾಳ ಕೃಷ್ಣರಾಯರೂ//೭// ವ್ಯಕ್ತ
ದ್ದರಿಂದ ಈ ಸುಮಾರು ೧೫೦ ವರುಷಗಳಷ್ಟು ಕಾಲವನ್ನು ದಾಸ
ತ ಕಾಲವೆಂದೇ ಕರೆದರು. ಈ ಅಜ್ಞಾತ ಕಾಲದ ಕಾರಣಗಳನ್ನು
ವೆ?. ಈ ದಿಶೆಯಲ್ಲಿ ನಡೆಸಿದ ಶೋಧದ ಫಲವಾಗಿ ಈ ಮೊದಲಿನ
ಎಂಬ ನಿರ್ಣಯವನ್ನು ಬದಲಿಸುವಷ್ಟು ಆ ಕಾಲದ ಸಾಹಿತ್ಯವು ನನಗೆ
ದರ ಪರಿಚಯವನ್ನು ಹಾಗೂ ಈ ಅವಧಿಯಲ್ಲಿ ಬಾಳಿ- ಬದುಕಿ,
ಟಣದಲ್ಲಿ ಪುರಂದರದಾಸರಿಗೆ ಸರಿ-ಸಮನಾದ ಕೃತಿಗಳನ್ನು ನೀಡಿದ
ಶ್ರೀ ಮಹಿಪತಿರಾಯರ ಬದುಕು ಕೃತಿಗಳ ಬಗ್ಗೆ ವಿವೇಚನೆಯನ್ನು
ಅಗತ್ಯವೂ ಉಂಟಾಯಿತು.

ತಿರಾಯರ ಕುರಿತು ೧೯೨೪ ರಷ್ಟು ಹಿಂದೆಯೇ ಶ್ರೀ ಗುಂಡಾಚಾರ
ರು 'ಮಹೀಪತಿರಾಯರ ಚರಿತ್ರೆ' ಎಂಬ ಪುಸ್ತಕವನ್ನು ಬರೆದುದಾಗಿ
ತಿ.//೮// ಅನಂತರ ದೊರೆಯುವ ಅವರ ಚರಿತ್ರೆ 'ಶ್ರೀ ಕರ್ಣಾಟಕ
ದಲ್ಲಿ. ಶ್ರೀ ಬೇಲೂರು ಕೇಶವದಾಸರು ತಮ್ಮ ಗ್ರಂಥದಲ್ಲಿ,
ರ ಹೆಸರು ಪ್ರಾಯಶಃ ಮರೆತ ಹೆಸರೆಂದು -ಹೇಳಬೇಕು.' ಎಂದು
ರೆ.//೯// 'ರಾಯರು ರಚಿಸಿದ ಸಾವಿರಾರು ದೇವರ ನಾಮಗಳು

ಕಾಖಂಡಿಕೆಯಲ್ಲಿ ಅವರ ವಂಶೀಕರ ಬಳಿಯಲ್ಲಿವೆ. ಅವುಗಳ ಶೋಧ ಮಾಡಿ ಮುದ್
ಪ್ರಚುರಗೊಳಿಸುವ ಕಾಲವಿನ್ನೂ ಬಂದಿಲ್ಲ.' ಎಂದೂ ಹೇಳುತ್ತಾರೆ.//೧೦//

ಸಾವಿರಾರು ದೇವರ ನಾಮುಗಳಲ್ಲಿಯ ಕೆಲವನ್ನು ಆಯ್ದು ಅವರ ವಂಶಿಕರ
ಶ್ರೀ ಅಣ್ಣಪ್ಪಯ್ಯ ಹರಿದಾಸರು ೧೯೫೩ ರಲ್ಲಿ 'ಮಹಿಪತಿರಾಯರ ಕೀರ್ತನೆ
ಸಂಗ್ರಹ'ವನ್ನು ಪ್ರಪ್ರಥಮವಾಗಿ ಪ್ರಕಟಿಸಿದರು. ಸಂಗ್ರಹದ ಪೀಠಿಕೆಯಲ್ಲಿ ರಾಂ
ಸಂಕ್ಷಿಪ್ತ ಚರಿತ್ರೆಯೂ ಇದೆ.

ಮಹಿಪತಿರಾಯರ ಕೃತಿಗಳಲ್ಲಿಯ ಅನುಭಾವ ಕಾವ್ಯ ಸಿದ್ಧಿಯನ್ನು ಮೊದಲ
ಗುರುತಿಸಿದವರು ಖ್ಯಾತ ತತ್ವಜ್ಞಾನಿ ಡಾ. ಗುರುದೇವ ಆರ್.ಡಿ. ರಾನಡೆ ಅವ
ಎಂದು ಹೇಳಬೇಕು. ಅವರು ೧೯೫೯-೬೦ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ
ನೀಡಿದ ಉಪನ್ಯಾಸಗಳು 'Pathway to God in Kannada Literatu
ಎಂದು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಅದನ್ನು ಅಥಣಿಯ ಶ್ರೀ ದೇಶಪಾ
ಮನೋಹರರಾಯರು ಅನುವಾದಿಸಿದ್ದನ್ನು 'ಕನ್ನಡ ಸಂತರ ಪರಮಾರ್ಥಪಥ' ಎ
ಹೆಸರಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ೧೯೬೨ ರಲ್ಲಿ ಪ್ರಕಟಿಸಿದೆ. ಡಾ. ರಾ
ಅವರು ತಮ್ಮ ಗ್ರಂಥದಲ್ಲಿ ಮಹಿಪತಿರಾಯರ ಕುರಿತು ಹೇಳುತ್ತ -

> 'ಈ ಹಿರಿಯ ಅನುಭಾವಿಗಳ ಸಾಹಿತ್ಯದ ಸೂಕ್ಷ್ಮವಾದ
> ಪರಿಪೂರ್ಣವಾದ ಅಧ್ಯಯನವನ್ನು ಬೇಗನೆ ಕೈಕೊಳ್ಳುವದು
> ಅವಶ್ಯವಾದುದು'//೧೧//
>
> 'ಈ ಹಿರಿಯ ಸಂತರ ಪರಿಚಯವು ಕನ್ನಡ ನಾಡಿಗೆ ಇನ್ನೂ ಸಾಕಷ್ಟು
> ಆಗಿರುವದಿಲ್ಲ'//೧೨//
>
> 'ಅವರು ಹಿರಿಯ ಪಾರಮಾರ್ಥಿಕ ಕವಿಗಳಲ್ಲಿ ಒಬ್ಬರು'//೧೩//
>
> 'ಅವರು ಶ್ರೇಷ್ಠತಮ ಕನ್ನಡ ಕವಿಗಳಲ್ಲಿ, ವಿಶೇಷತಃ . ಸಂತ
> ಕವಿಗಳಲ್ಲಿ ಒಬ್ಬರೆಂಬುದು ನನ್ನ ಅಭಿಮತ.//೧೪//

ಎಂದು ಮುಂತಾಗಿ ಹಲವಾರು ಸಲ ತುಂಬು ಹೃದಯದಿಂದ ಹೇಳಿದ್ದಾರೆ. ಅ
ಸಾವಿರಾರು ಕೃತಿಗಳಲ್ಲಿಯ ಎಂಟು ಕೃತಿಗಳನ್ನು ಗುರುದೇವ ರಾನಡೆಯವರು ತ
ಉಪನ್ಯಾಸಗಳಲ್ಲಿ ಉದಾಹರಿಸಿ ಸುದೀರ್ಘವಾಗಿ ಚರ್ಚಿಸಿದ್ದಾರೆ.

ಗುರುಗಳ ಈ ಇಂಗ್ಲೀಷ ಕೃತಿಯ ಅನುವಾದದ ಅನಂತರ ಶ್ರೀ ದೇಶಪಾ
ಮನೋಹರರಾಯರು ಮಹಿಪತಿರಾಯರ ಕುರಿತು ಒಂದು ವಿಸ್ತೃತ ಗ್ರಂಥ 'ಸ್ವಾ
ಸಾಮ್ರಾಜ್ಯ'ವನ್ನು ಬರೆದು ಜೊತೆಗೆ ಅವರ ೧೧೫ ಕೃತಿಗಳನ್ನು ೧೯೬೨ ।
ಪ್ರಕಟಿಸಿದರು. ತಮ್ಮ ಗ್ರಂಥದಲ್ಲಿ ಅವರು 'ಸಾಂಪ್ರದಾಯಕರು ತಿಳಿಯುವ
ರಾಯರು ವಿಷ್ಣುವಿನ ದಾಸರೂ ಅಲ್ಲ ಶಿವನ ದಾಸರೂ ಅಲ್ಲ, ಅವರು ದೇ
ದಾಸರು' ಎಂದು ಹೇಳಿದರು.//೧೫// ವಿಶಾಲ ದೃಷ್ಟಿಯಲ್ಲಿ ಶ್ರೀ ದೇಶಪಾ

ಅವರ ಅಭಿಪ್ರಾಯವು ಗ್ರಾಹ್ಯವಾದರೂ ಮನೆತನದಿಂದ ಮಾಧ್ವರಾ
ಮಹಿಪತಿರಾಯರ ಸಂಪ್ರದಾಯ ಶ್ರದ್ಧೆಗಳ ಕುರಿತು ಚರ್ಚಿಸುವುದು ಸೂಕ್ತ ಎನಿಸಿತು

ರಾಯರ ಮನೆತನದ ಇನ್ನೊಬ್ಬ ಹಿರಿಯರಾದ ಶ್ರೀ ಶ್ರೀಪತಯ್ಯ ಹರಿದಾ
ಅವರು ರಾಯರ ಸಂಕ್ಷಿಪ್ತ ಚರಿತ್ರೆಯೊಂದಿಗೆ ಅವರ ಹಾಗೂ ಮನೆತನದವ
ಕೀರ್ತನೆಗಳ ಸಂಗ್ರಹ 'ಸೇವಾತತ್ವ'ವನ್ನು ೧೯೬೩ ರಲ್ಲಿ ಪ್ರಕಟಿಸಿದ್ದಾರೆ. ಚರಿ
ಹಾಗೂ ಕಾಲವಿಚಾರಗಳಲ್ಲಿ 'ಸ್ವಾನಂದ ಸಾಮ್ರಾಜ್ಯ'ವನ್ನು ಅನುಸರಿಸಿದ್ದಾ
ಸಂಪ್ರದಾಯದಲ್ಲಿ ಅವರು 'ಮಾಧ್ವ'ರು ಎಂದು ಶ್ರೀ ಶ್ರೀಪತಯ್ಯನವ
'ಸೇವಾತತ್ವ'ದಲ್ಲಿ ಹೇಳುತ್ತಾರೆ. 'ಸ್ವಾನಂದ ಸಾಮ್ರಾಜ್ಯ' ಹಾಗೂ 'ಸೇವಾತತ್ವ'
ಎರಡು ಕೃತಿಗಳು ಒಂದೇ ವ್ಯಕ್ತಿಯ ಭಿನ್ನ ಸಂಪ್ರದಾಯಗಳನ್ನು ತೋರಿಸುವ
ಜೊತೆಗೆ ಅವರ ಚರಿತ್ರೆ, ಹಾಗೂ ಕಾಲ ನಿರ್ದೇಶನಗಳನ್ನು ನಿರ್ಣಯಿಸುವಲ್ಲಿ ಗ
ಆಧಾರಗಳನ್ನು ಕೊಡಲಿಲ್ಲ.

ಈ ಮಧ್ಯ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ
ಹರಿದಾಸ ಸಾಹಿತ್ಯ ಮಾಲೆಯನ್ನು ಪ್ರಾರಂಭಿಸಿತು. ನಾಡಿನ ಎಲ್ಲ ಹರಿದಾ
ಕೃತಿಗಳನ್ನು ಶಾಸ್ತ್ರ ಶುದ್ಧವಾಗಿ ಸಂಪಾದಿಸಿ ವಿಸ್ತೃತ ಪೀಠಿಕೆಯೊಂದಿಗೆ ಪ್ರಕಟಿಸುವ
ಮಾಲೆಯಲ್ಲಿ ಅನೇಕ ಕೃತಿಗಳು ಈಗಾಗಲೇ ಹೊರಬಂದಿವೆ. ಅವುಗಳಲ್ಲಿ 'ಶ್ರೀ
ಮಹಿಪತಿರಾಯರ ಕೃತಿಗಳು' ೧೯೭೬ರಲ್ಲಿ ಪ್ರಕಟವಾಯಿತು. ಈ ಸಂಗ್ರಹದ
ಪ್ರ-ಪ್ರಥಮವಾಗಿ ರಾಯರ ೬೮೫ ಕೃತಿಗಳು ಬೆಳಕು ಕಂಡಿವೆ. ಸಂಪಾದಕರಾ
ಡಾ.ಜಿ. ವರದರಾಜರಾವ್ ಅವರ ಶ್ರಮ ಸಾರ್ಥಕವಾಗಿದೆ. ದಾಸ ಸಾಹಿತ್ಯ ಪ್ರಿಯ
ಅವರಿಗೆ ಕೃತಜ್ಞರಾಗಿರಬೇಕು. ಸಂಗ್ರಹದ ಪ್ರಾರಂಭದಲ್ಲಿ ವಿಸ್ತೃತ ಪೀಠಿಕೆಯೂ ಇ
ಆದರೆ ರಾಯರ ಚರಿತ್ರೆ, ಹಾಗೂ ಕಾಲ ವಿಚಾರಗಳಲ್ಲಿ ಈ ಹಿಂದಿನ 'ಸ್ವಾನ
ಸಾಮ್ರಾಜ್ಯ' ಮತ್ತು 'ಸೇವಾತತ್ವ' ಗಳಲ್ಲಿಯ ವಿಷಯಗಳನ್ನೇ ಚರ್ಚೆ ಇಲ್ಲ
ಉಪಯೋಗಿಸಿಕೊಳ್ಳಲಾಗಿದೆ. ಆದ್ದರಿಂದ ರಾಯರ ಚರಿತ್ರೆಯನ್ನು ಸಾಧ
ಪೂರ್ವಕವಾಗಿ, ವಸ್ತುನಿಷ್ಠವಾಗಿ ಬರೆಯುವುದಲ್ಲದೆ, ಐತಿಹಾಸಿಕ ಆಧಾರಗಳೊಂ
ಸಂಭಾವ್ಯ ಕಾಲ ನಿರ್ಣಯವನ್ನು ಮಾಡುವ, ಅದರಂತೆ ರಾಯರ ಕೃತಿ
ಆಧಾರದಿಂದಲೇ ಅವರ ಸಂಪ್ರದಾಯವನ್ನು ಗುರುತಿಸುವ ಪ್ರಯತ್ನ ಆಗಬೇ
ಎನಿಸಿತು.

ಮಹಿಪತಿರಾಯರಂಥ ಒಬ್ಬ ಶ್ರೇಷ್ಠ ಅನುಭಾವ ಕವಿಯು ಹುಟ್ಟಬೇಕಾದ
ಅವರ ಸುತ್ತಲಿನ ಪರಿಸರವು ಕೂಡ ಫಲವತ್ತಾಗಿರಬೇಕು. ಆ ಫಲವತ್ತಾ
ಭೂಮಿಯಲ್ಲಿ ಇವರ ಸರಿ-ಸಮನಾಗಿ ನಿಲ್ಲುವ ಹಲವಾರು ಮಹಾನ್ ವ್ಯಕ್ತಿಗ
ಜನಿಸಿರಬೇಕು. ಅವರು ಕೂಡ ಸಾಹಿತ್ಯವನ್ನು ರಚಿಸಿರಬೇಕು. ಈ ಎಲ್ಲದಕ್ಕೂ ಕ

ಎಂಬಂತೆ ಮುಸಲ್ಮಾನರ ಬಲಿಷ್ಠರಾಜ್ಯ ವಿಜಾಪುರದ ಉತ್ಕಟ ಪ್ರಭಾವಲಯದ
ಇಂಥ ಮೇಲ್ಮಟ್ಟದ ದಾಸ-ಸಾಹಿತ್ಯ ನಿರ್ಮಾಣದ ಸಾಧ್ಯತೆಯನ್ನು ಗಮನಿಸುವ
ಅನಿವಾರ್ಯವೆನಿಸಿತು, ಆದ್ದರಿಂದ ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿ
ಪರಿಸ್ಥಿತಿಗಳನ್ನು ಚರ್ಚಿಸುವುದಲ್ಲದೆ, ಪ್ರಚಲಿತ ಭಾಷೆ ಹಾಗೂ ಸಾಹಿತ್ಯ ನಿರ್ಮಿತಿ
ಕುರಿತೂ ಚಿಂತನೆ ಅಗತ್ಯವೆನಿಸಿತು.

ಪರಂಪರೆಯಿಂದ ಕೇಳಿಬಂದ ಮಹಿಪತಿರಾಯರ ಚರಿತ್ರೆ, ಹಾಗೂ ಅವರ ಪ್ರಕ
ಸಾಹಿತ್ಯದ ಅವಲೋಕನದಿಂದ ಈ ದಿಶೆಯಲ್ಲಿ ಇನ್ನಷ್ಟು ಸಂಶೋಧನೆಯ ಅಗತ್ಯ
ಎನಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು
ಮಹಿಪತಿರಾಯರ ಕೃತಿಗಳು' ಎಂಬ ಪುಸ್ತಕವನ್ನು ಪ್ರಕಟಿಸುವಾಗ ಮೂಲ ಆಕರ
ಒಂದೇ ಒಂದು ಹಸ್ತಪ್ರತಿಯನ್ನು ಇಟ್ಟುಕೊಂಡು ರಾಯರ ೬೮೫ ಕೃ
ಸಂಗ್ರಹವನ್ನು ಪ್ರಕಟಿಸಿರುವುದಾಗಿ ಸಂಪಾದಕರು ಹೇಳುತ್ತಾರೆ.

'ಇಲಕಲ್ಲಿನ ಡಾ. ಕೆ.ಎ.ಕಾಖಂಡಕಿಯವರಲ್ಲಿ ಶ್ರೀ ಮಹಿಪತಿರಾಯರ ವ
ಶ್ರೀ ಕೃಷ್ಣರಾಯರ ಕೃತಿಗಳುಳ್ಳ ಪ್ರಾಚೀನ ಹಸ್ತಪ್ರತಿಯೊಂದು ಇರುವುದಾಗಿ ತಿ
ಬಂದಿತು. ......... ಎರವಲಾಗಿ ನೀಡಿದ ಮೇಲೆ ಈ ಕಾರ್ಯವನ್ನು ಕೈಕೊ
ಸಾಧ್ಯವಾಯಿತು.' ಎಂದು ಸಂಗ್ರಹದ ಪೀಠಿಕೆಯಲ್ಲಿ ಹೇಳಲಾಗಿದೆ.//೧೬// ೬
ವಾಸ್ತವದಲ್ಲಿ ಸಾವಿರದಷ್ಟು ಕೃತಿಗಳನ್ನು ರಚಿಸಿರಬೇಕಾದರೆ, ಇನ್ನು ಹಲವ
ಹಸ್ತಪ್ರತಿಗಳು ಇರುವ ಸಾಧ್ಯತೆ ಇದೆ ಎನಿಸಿತು. ಆಗ ಅವುಗಳನ್ನು ಹುಡು
ಪ್ರಯತ್ನಿಸಲಾಯಿತು. ವಿಜಾಪುರದ ಸುತ್ತಮುತ್ತಲಿನ ಹಳ್ಳಿಗಳಲ್ಲಿ, ಅವರ ವಂಶಿಕ
ವಿಚಾರಿಸಿದಾಗ ಉತ್ತೇಜನಕಾರಿಯಾದ ಫಲ ದೊರೆಯಿತು. ಶ್ರಮಸಾಧ್ಯವಾದ
ರಾಯರು ಹಾಗೂ ಅವರ ಮನೆತನದವರು ರಚಿಸಿದ ಸಾವಿರಾರು ಕೀರ್ತನೆ
ಹತ್ತೆಂಟು ಆಖ್ಯಾನಗಳು ಮತ್ತು ಇತರ ಹರಿದಾಸರು ರಚಿಸಿದ ೮
ಕೃತಿಗಳನ್ನೊಳಗೊಂಡ ೨೫ ಹಸ್ತಪ್ರತಿಗಳು ದೊರಕಿದುವು. ಅವು
ಮಹಿಪತಿರಾಯರ ಮೊಮ್ಮಗ ಯತಿರಾಯರಿಂದ (ಕ್ರಿ.ಶ. ೧೭೩೨) ಹಿಡಿದು
೧೮೯೦ರ ವರೆಗಿನ ಹಸ್ತಪ್ರತಿಗಳು ಇದ್ದುದು ವಿಶೇಷವಾಗಿತ್ತು. ಇ
ಆಧಾರದಿಂದ ಪ್ರಕಟಿತ ಕೃತಿಗಳ ಪಾಠಾಂತರಗಳನ್ನು ಗುರುತಿಸಲು ಸಾಧ್ಯ. ಅದ
ಇನ್ನಷ್ಟು ಹುಡುಕಿದಾಗ ಅವರ ಸಮಕಾಲೀನರು ರಚಿಸಿದ ಮತ್ತೆ ೧೧ ಹಸ್ತಪ್ರ
ದೊರೆತವು. ಹೀಗೆ ಒಟ್ಟು ದೊರೆತ ೩೬ ಹಸ್ತಪ್ರತಿಗಳಲ್ಲಿ ಕನ್ನಡವಲ್ಲದೆ, ಮ
ಹಿಂದಿ ಹಾಗೂ ಬಹುಭಾಷಾ ಮಿಶ್ರಿತ ರಚನೆಗಳು ಇದ್ದುದು ವಿಶೇಷವೆನಿ
ಇವುಗಳ ಪರಿಶೀಲನೆಯಿಂದ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುವು
ಸಂಶಯವಿಲ್ಲ ಎಂಬುದು ಮನದಟ್ಟಾಯಿತು.

'ಸ್ವಾನಂದ ಸಾಮ್ರಾಜ್ಯ'ವನ್ನು ಪ್ರಕಟಿಸುವಾಗ ಶ್ರೀ ದೇಶಪಾಂಡೆ ಅವರು ತ
ದೊರೆತ ಸಂಗ್ರಹದಲ್ಲಿ 'ಒಟ್ಟಾರೆ ೭೨೬ ಪದ ಪದ್ಯಗಳಿರುವವು' ಎ
ಹೇಳುತ್ತಾರೆ.//೧೭//ಡಾ.ಜಿ. ವರದರಾಜರಾವ್ ಅವರು ೬೮೫ ಕೃತಿಗ
ಸಂಗ್ರಹಿಸಿದ್ದಾರೆ. ಈಗ ದೊರೆತ ಹಸ್ತಪ್ರತಿಗಳನ್ನು ಪರಿಶೀಲಿಸಿ ಮಹಿಪತಿರಾ
ಕೃತಿಗಳ ಸಂಖ್ಯೆಯನ್ನು ನಿರ್ಣಯಿಸಬಹುದೆಂದು ತೋರಿತು. ಜೊತೆಗೆ ರಾ
ಅಂಕಿತಗಳು ಮತ್ತು ಅವುಗಳಲ್ಲಿಯ ವಿವಿಧತೆ ಮತ್ತು 'ಮಹಿಪತಿ' ಎಂಬ ಅಂಕಿತ
ಅವರ ಮಗ, ಮೊಮ್ಮಕ್ಕಳು ಬಳಸಿಕೊಂಡು ರಚಿಸಿದ ಕೃತಿಗಳಲ್ಲಿ ರಾಯರ ಅಂ
ಖಚಿತತೆ ಮುಂತಾದವುಗಳ ಸಂಶೋಧನೆಯ ಅಗತ್ಯವೂ ಕಂಡು ಬಂದಿತು.

ಹೀಗೆ ಕಂಡು ಬಂದ ವಿವಿಧ ಸಮಸ್ಯೆಗಳನ್ನು ಬಿಡಿಸುವಾಗ, ಹಸ್ತಪ್ರತಿಗಳ
ಹೊತ್ತಿಗೆಗಳು ದೊರೆತದ್ದರಿಂದ, ಪ್ರಬಂಧದ ವಿಷಯ ಸಂಗ್ರಹ ಹಾಗೂ ಅ
ವಿಕಾಸಕ್ಕಾಗಿಯೇ ಒಂದು ಅಧ್ಯಾಯವನ್ನು ಮೀಸಲಿಡಬೇಕಾಯಿತು. ಅಂತೆ
ದೊರೆತ ಹಸ್ತಪ್ರತಿಗಳ ವಿವರ ಹಾಗೂ ಅವುಗಳ ಸಂಭಾವ್ಯ ಕಾಲಮಾನ
ಗುರುತಿಸುತ್ತ ಅವುಗಳಿಗೆ ಪೂರಕವಾದ, ಈ ವರೆಗೆ ಲಭ್ಯ ಇರುವ ಆಂತರಿಕ ಹಾ
ಬಾಹ್ಯ ಪ್ರಮಾಣಗಳ ವಿವೇಚನೆ, ಮತ್ತು ಪೂರಕ ಪ್ರಕಟಿತ ಚಾರಿತ್ರಿಕ ಅಂ
ಪರಿಚಯವನ್ನು ಮೊದಲು ಮಾಡಿಕೊಂಡು, ಈ ಅಧ್ಯಾಯದ ಆಧಾರದಿಂದ ಉ
ಸಮಸ್ಯೆಗಳನ್ನು ಬಿಡಿಸಲು ಈ ಮುಂದಿನ ಪುಟಗಳಲ್ಲಿ ಪ್ರಯತ್ನಿಸಲಾಗಿದೆ.

★ ★ ★

## ಅಡಿ ಟಿಪ್ಪಣಿಗಳು

೧. ಬೇಲೂರು ಕೇಶವದಾಸರು: ಶ್ರೀ ಕರ್ನಾಟಕ ಭಕ್ತವಿಜಯ ಪುಟ ೧ (೧೯೬೩)
೨. ರಾ.ಸ್ವಾ.ಪಂಚಮುಖಿ: ಹರಿದಾಸ ಸಾಹಿತ್ಯ ಪುಟ ೪೯-೫೦ (೧೯೫೦)
೩. ಕೆ.ಜಿ.ಶಾಸ್ತ್ರಿ: ದಾಸಸಾಹಿತ್ಯ-ದ್ವಿತೀಯ ಘಟ್ಟದ ಸಾಧನೆ:
ಕ.ವಿ.ವಿ. (೧೯೭೦) ಹಿನ್ನೆಲೆ ಪುಟ ii
೪. ಬೆಟಗೇರಿ ಕೃಷ್ಣಶರ್ಮ (ಸಂ): ಪುರಂದರದಾಸರ ಸಾಹಿತ್ಯ-೬, ಪುಟ ೨೩-೨೪ (೧೯೬೪)
೫. ರಾ.ಸ್ವಾ.ಪಂಚಮುಖಿ: ಹರಿದಾಸ ಸಾಹಿತ್ಯ ಪುಟ ೬೭ (೧೯೫೦)
೬. ರಂ.ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ, ಪು. ೨೬೦
೭. ಕಪಟರಾಳ ಕೃಷ್ಣರಾಯ: ಹರಿದಾಸ ಪರಂಪರೆ
-ಪ್ರಬುದ್ಧ ಕರ್ನಾಟಕ ಸಂ.೪೬-೧ ಪುಟ ೧೬೦
೮. ರಂ.ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಅಭ್ಯಾಸ ಸೂಚಿ ಪುಟ ೧೪೯ (೧೯೭(
೯. ಬೇಲೂರು ಕೇಶವದಾಸರು: ಶ್ರೀ ಕರ್ನಾಟಕ ಭಕ್ತ ವಿಜಯ ಪುಟ ೫೪೦.
೧೦. ಅದೇ ಪುಟ ೫೬೩.
೧೧. ಆರ್.ಡಿ.ರಾನಡೆ: ಕನ್ನಡ ಸಂತರ ಪರಮಾರ್ಥಪಥ (ಅನು) ಪುಟ ೮ (೧೯೬೨)
೧೨. ಅದೇ ಪುಟ ೪೨
೧೩. ಅದೇ ಪುಟ ೬೬
೧೪. ಅದೇ ಪುಟ ೧೩೪.
೧೫. ದೇಶಪಾಂಡೆ ಮನೋಹರರಾವ: ಸ್ವಾನಂದ ಸಾಮ್ರಾಜ್ಯ ಪುಟ ೪ (೧೯೬೨)
೧೬. ಜಿ. ವರದರಾಜರಾವ್ (ಸಂ): ಶ್ರೀಮಹಿಪತಿರಾಯರ ಕೃತಿಗಳು ಪೀಠಿಕೆ ಪುಟ lvi (೧೯೭
೧೭. ದೇಶಪಾಂಡೆ ಮನೋಹರರಾವ: ಸ್ವಾನಂದ ಸಾಮ್ರಾಜ್ಯ, ಪುಟ ೩ (೧೯೬೨)

ಅಧ್ಯಾಯ ಎರಡು

# ವಿಷಯ ಸಂಗ್ರಹ

| ಹಸ್ತಪ್ರತಿಗಳು:

ದೊರೆತ ಹಸ್ತಪ್ರತಿಗಳಲ್ಲಿ ಮಹಿಪತಿರಾಯರ ಕೃತಿಗಳಲ್ಲದೆ, ಅವರ ಮ ಮೊಮ್ಮಕ್ಕಳು, ಮರಿಮಕ್ಕಳು ಮತ್ತು ಇತರ ಹರಿದಾಸರುಗಳು, ಸಂತರು ರಚಿ ಕನ್ನಡ, ಮರಾಠಿ, ಹಿಂದಿ ಕೃತಿಗಳೂ ಸೇರಿಕೊಂಡಿವೆ. ಆದ್ದರಿಂದ ಮಹಿಪತಿರಾಯ ಮತ್ತು ಅವರ ಮನೆತನದವರು ರಚಿಸಿದ ಕೃತಿಗಳು ಅಧಿಕವಾಗಿದ್ದ ಸಂಗ್ರಹಗಳ ಹಾಗೂ ಇತರ ಸಂತರ ಕೃತಿ ಸಂಗ್ರಹಗಳನ್ನು ಬೇರ್ಪಡಿಸಿ ಅವುಗಳಿಗೆ 'ಅ' ಕಾರ ಹೆಸರುಗಳನ್ನು ಸೂಚಿಸಲಾಗಿದೆ. ಅವುಗಳ ವಿವರ ಹೀಗಿದೆ.

೧. ಮಹಿಪತಿರಾಯರು ಹಾಗೂ ಅವರ ಮನೆತನದವರು ರಚಿಸಿದ ಕೃತಿ ಅಧಿಕವಾಗಿದ್ದ ಹಸ್ತಪ್ರತಿಗಳು:

೧. ಪ್ರತಿ ಅ:- ೨೦ ಸೆಂ.ಮಿ. ಉದ್ದ, ೧೪ ಸೆಂ.ಮಿ. ಅಗಲದ ಕಾಗದಗಳು, ಪುಟ ಸಂಖ್ಯೆ ಇದೆ. ಒಂದು ಪಾನಿಗೆ ಒಂದರಂತೆ ಪುಟಸಂಖ್ಯೆ. ಮೊದಲಿನ ೫೨ ಪುಟ ಇಲ್ಲ. ಪುಟ ೫೪ ರಿಂದ ಪ್ರಾರಂಭವಾಗಿ ಪುಟ ೨೬೧ ಕ್ಕೆ ಕೊನೆಗೊಂಡಿದೆ. ಕೊನೆ ಕೆಲವು ಪುಟಗಳೂ ಹರಿದಿರುವ ಸಂಭವವಿದೆ. ಲಿಪಿ ದೇವನಾಗರಿ. ಮಸಿ-ಕರಿಬಣ್ಣ ಸ್ಪಷ್ಟ ಅಕ್ಷರಗಳು.

ದೊರೆತ ಹಸ್ತಪ್ರತಿಗಳಲ್ಲಿ ಇದು ತುಂಬ ಹಳೆಯದಾದ ಪ್ರತಿ. ಇದ ಬರೆದವರು ಮಹಿಪತಿರಾಯರ ಮೊಮ್ಮಗ ಯತಿರಾಯ. ಅವರು ತಮ್ಮ ತ ಕೃಷ್ಣರಾಯರ ಕೃತಿಗಳನ್ನು ಸಂಗ್ರಹಿಸುವಾಗ ಅಜ್ಜ ಮಹಿಪತಿರಾಯರ ( ಕೃತಿಗಳನ್ನೂ ಇದರಲ್ಲಿ ಸಂಗ್ರಹಿಸಿದ್ದಾರೆ. ತಂದೆ ಬರೆದ 'ಭಾವಾರ್ಥ ರಾಮಾಯ ಕಾವ್ಯದ ನಕಲಿನ ಕೊನೆಗೆ,

> 'ಇತಿ ಶ್ರೀ ಭಾವಾರ್ಥ ರಾಮಾಯಣೇ ಸೀತಾ ಸ್ವಯಂವರ ಕಥಾ
> ಶ್ರೀ ಗುರು ಆತ್ಮಾರ್ಪಣಮಸ್ತು।। ಶುಭಮಸ್ತು।। ಶ್ರೀರಸ್ತು
> ಯಾದೃಶೀ ಪುಸ್ತಕಂ ದೃಷ್ಟ್ವಾ ತಾದೃಶೀ ಲಿಖಿತಂ ಮಯಾ।
> ಅಬಧೋ ವಾ ಸುಬಧೋ ವಾ ಮಮ ದೋಷೇನ ಲಿಪ್ಯತೆ।।೧।
> ಭಗ್ನ ಪೃಷ್ಟ ಕಟಿ ಗ್ರೀವ ಬಧ್ಧ ಮುಷ್ಟಿರಧೋ ......
> ಕಷ್ಟೇನ ಲಿಖಿತಂ ಗ್ರಂಥಂ ಯತ್ನೇನ ಪ್ರತಿಪಾಲಯೇತ್ ।।೨।।
> ಕೃಷ್ಣರಾಜ ತನೂಜೇನ ಕಾಖಂಡಕಿ ಗ್ರಾಮವಾಸಿನಂ
> ಯತಿರಾಜೇನ ಲಿಖಿತಂ ರಾಮಾಯಣೇ ಸಂಪೂರ್ಣಂ ।।೩।

ಎಂದು ೭೫ನೆಯ ಪುಟದಲ್ಲಿ ಹೇಳಲಾಗಿದೆ. ಮುಂದೆ ೮೦ ನೆಯ ಪುಟದಲ್ಲಿ
ಮಗುವಿನ ಜನನ ವಿವರವೂ ಇದೆ. 'ಶಕೆ ೧೬೫೪, ಪರಿಧಾವಿನಾಮ ಸಂ
ಆಷಾಢ, ಶುದ್ಧ ದಶಮಿ ಬುಧವಾರ ಸ್ವಾತಿ ನಕ್ಷತ್ರ ದ್ವಿತೀಯ ಚರಣೆ ...
ಹೀಗೆ ನಮೂದಿಸ ಲಾಗಿದೆ. ಇದು ದಿನಾಂಕ ೨೧-೬-೧೭೩೨ (ಕ್ರಿ.ಶ.)ಕ್ಕೆ ಸರಿ
ಹೊಂದುತ್ತದೆ.

ದೊರೆತ ೫೪ ರಿಂದ ೨೩೧ ಪುಟಗಳಲ್ಲಿ ಭಾವಾರ್ಥ ರಾಮಾಂ
ಸೀತಾಸ್ವಯಂವರ ಭಾಗವಲ್ಲದೆ, ಸುದಾಮ ಚರಿತ್ರೆ, ಗಜೇಂದ್ರ ಮೋಕ್ಷ, ಪ್ರ
ಚರಿತ್ರೆ (ಎಲ್ಲವೂ ಕೃಷ್ಣರಾಯ ವಿರಚಿತ)- ಆಖ್ಯಾನಗಳು, ಮತ್ತು
ಕೀರ್ತನೆಗಳು ಇರುತ್ತವೆ. ಅವುಗಳಲ್ಲಿ ೧೮ ಮಹಿಪತಿರಾಯರ ಕೃ
ಉಳಿದವುಗಳಲ್ಲಿ ಕೃಷ್ಣರಾಯರಿಂದ ರಚಿತವಾದವುಗಳು ಅಧಿಕವಾಗಿವೆ. ಎರಡು
ಕೃತಿಗಳಲ್ಲಿ ಒಂದಕ್ಕೆ 'ಭಾನು ಸಂದೇಶ್ವರ' ಎಂಬ ಅಂಕಿತವಿದೆ. 'ಗುರುಕೃಷ್ಣ'
ಕೃಷ್ಣ' 'ಶ್ರೀಕೃಷ್ಣನ ಪುತ್ರ' (ಯತಿರಾಯರ ಅಂಕಿತಗಳು) 'ರಾಜಗೋ
'ಮಹಿಪತಿ ಚಿನ್ನಪ್ರಭು' 'ಪುರಂದರ ವಿಠಲ' ಅಂಕಿತದ ಹಾಗೂ ಅಂಕಿತ ಇಲ್ಲದ
ಕನ್ನಡ-ಮರಾಠಿ ಪದಗಳೂ ಇವೆ.

ಮಹಿಪತಿರಾಯರ 'ಕಾಲ ನಿರ್ಣಯ' ದಲ್ಲಿ ಹಿಂದಿನ ಎಲ್ಲ ವಿದ್ವಾ
ಬಳಸಿಕೊಂಡ 'ನೆನೆದು ನಮಿಸುವೆನು ವಾರಂ ವಾರ' ಕೀರ್ತನೆಯ ಮೂಲಪಾ
ಹಸ್ತಪ್ರತಿಯ ವಿಶೇಷವಾಗಿದೆ.

ಈ ಹಸ್ತಪ್ರತಿಯು ೨೫೦ ವರ್ಷಗಳಷ್ಟು ಹಳೆಯದು.

೨. ಪ್ರತಿ 'ಆ':- ೨೦x೧೪ ಸೆಂ.ಮಿ. ಅಳತೆಯ ಕಾಗದ, ಪುಟ ಸಂಖ್ಯೆ
ಮೊದಲಿನ ಹಾಗೂ ಕೊನೆಯ ಕೆಲವು ಪುಟಗಳು ಹರಿದಿವೆ. ಲಿಪಿ ದೇವನಾಗರಿ
ಅಕ್ಷರಗಳು.

ಹಸ್ತಪ್ರತಿಯಲ್ಲಿ ಕನ್ನಡ, ಮರಾಠಿ, ಹಿಂದಿ ಭಾಷೆಗಳ ಒಟ್ಟು ೧೨೯ ಪದ
ಅಲ್ಲದೆ 'ತಂದೆ ಮಹಿಪತಿ' ಕೃತ ಸಿರಿಯಾಳ ಸೆಟ್ಟಿ ಕಥಾದ ಹತ್ತು ಪದಗಳು,
ಕೃಷ್ಣ' ಅಂಕಿತದ ಲವಕುಶ ಕಥಾ, ಬಬ್ರುವಾಹನ ಕಥಾ ಮತ್ತು ದಾನ ವ್ರತ
ಆಖ್ಯಾನಗಳಿವೆ. ಮುದ್ರಿಕೆ ಸ್ಪಷ್ಟವಾಗಿ ಇಲ್ಲದ ಬಹುಶಃ 'ಕೃಷ್ಣ' ಎಂಬುವನು
ಮರಾಠಿ ಕೃಷ್ಣ ಕಥಾಮೃತ ಇದೆ.

ಕೀರ್ತನೆಗಳಲ್ಲಿ 'ಮಹಿಪತಿ' 'ಮಹಿಪತಿಸುತ' 'ಗುರು ಮಹಿಪತಿ'

ಮಹಿಪತಿ ಪ್ರಭು' 'ಗುರುಕೃಷ್ಣ' 'ಗಿರಿಧರ' 'ಚಿನ್ನ ಕೃಷ್ಣ' ಹಾಗೂ 'ಭೂದೇವ ಅಂಕಿತದ ಕನ್ನಡ ಕೃತಿಗಳು ಮತ್ತು ವಾಮನ, ಚಿಂತಾಮಣಿ, ಉದ್ಧವ ಗೋವಿಂದ, ನೀಲಕಂಠ ಮತ್ತು ಶಿವರಾಮ ಅಂಕಿತದ ಮರಾಠಿ ಪದಗಳು ಗುರುವರ ಕೃಷ್ಣಪ್ರಭು, ಅಮೃತರಾಯ ಪ್ರಭು ಅಂಕಿತದ ಹಿಂದಿ ಕೃ 'ಗೋವಿಂದಸೂನು' ಅಂಕಿತದ ಒಂದು ಸಂಸ್ಕೃತ ಕೃತಿಯೂ ಇದೆ.

ಹಸ್ತಪ್ರತಿಯಲ್ಲಿ ಕಾಲ ನಿರ್ದೇಶನದ ಉಲ್ಲೇಖವಿಲ್ಲ. ಬರವಣಿಗೆಯ ಹಾಗೂ ಅಕ್ಷರಗಳು 'ಅ' ಪ್ರತಿಗೆ ಹೋಲುವದರಿಂದ ಇದು ಕೂಡ ಯತಿರಾಯರ ಸಂಗ್ರಹ ಇರಬೇಕು. ಸುಮಾರು ೨೫೦ ವರುಷಗಳಷ್ಟು ಹಸ್ತಪ್ರತಿ.

೩. ಪ್ರತಿ 'ಇ':- ೩೦x೨೪ ಸೆಂ.ಮಿ. ಉದ್ದಳತೆಯ ಕಾಗದಗಳ ದಪ್ಪ ಪುಟಗಳ ಸಂಖ್ಯೆ ಇಲ್ಲ. ಒಟ್ಟು ೨೨೦ ಪುಟಗಳು (ಪಾನಿಗೆ ಒಂದರಂತೆ) ಮೊದಲಿನ, ಕೊನೆಯ ಹಾಗೂ ಮಧ್ಯದ ಕೆಲವು ಪುಟಗಳು ಹರಿದಿವೆ. ದೇವನಾಗರಿ, ಕರಿ ಹಾಗೂ ಜಾಂಭಳಿ ಬಣ್ಣದ ಮಸಿಯ ಸ್ಪಷ್ಟ ಅಕ್ಷರಗಳು, ನಾ ಜನರ ಕೈಬರಹ.

ಮಹಿಪತಿರಾಯರ ೮ ಆರತಿ ಪದಗಳು, ಮಹಿಪತಿ ನಂದನ, ಗಿರಿಧರಜ, ಕೃತಿಗಳೂ ಇವೆ. ಕನಕದಾಸರ ಹರಿಭಕ್ತಿ ಸಾರ, ವಿಜಯ ವಿಠಲರ ಒಂದು ಜಗನ್ನಾಥದಾಸರ ನವರತ್ನ ಮಾಲಿಕಾಸ್ತೋತ್ರ, ವೈಕುಂಠ ಪತಿ ವಿಠಲರ ಗ ಮೋಕ್ಷ, ಕಟ್ಟಿ ವೆಂಕಟೇಶರ ಅಜಮಿಳೋದ್ಧಾರಗಳೂ ಇವೆ. ಭಗವದ್ಗಿ ಮೊದಲ ಅಧ್ಯಾಯದ ೭ ಶ್ಲೋಕಗಳಿಗೆ ಕನ್ನಡ ಟೀಕು ಇದೆ.

ಹಸ್ತಪ್ರತಿಯ ವಿಶೇಷವೆಂದರೆ, ಕೃಷ್ಣರಾಯರು ಬರೆದ ಭಾವಾರ್ಥರಾಮಾ ಕಾವ್ಯವು ಸಂಪೂರ್ಣವಾಗಿ ೯ ಕಾಂಡಗಳಲ್ಲಿ ದೊರೆಯುತ್ತದೆ. ಬಾಲ ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರ ಯುದ್ಧಕಾಂಡ, ಅಹಿರಾವಣ -ಮಹಿರಾವಣ ಕಥಾ, ಶ್ರೀರಾಮ ಪಟ್ಟಾಭಿಷೇಕ ಸೀತಾ ಅಗ್ನಿ ಪ್ರವೇಶ ಇವುಗಳು ೯ ಕಾಂಡಗಳು. ಈವರೆಗೆ ಅಪ್ರಕಟಿತ ಜೊತೆಗೆ, ಅವರೇ ಬರೆದ ಪ್ರಲ್ಹಾದ ಚರಿತ್ರೆ, ಶ್ರವಣಕುಮಾರಕಥೆ, ವಾಮನ ಕಾಳಿಯಾವುರದ ಚರಿತ್ರೆ, ಸುದಾಮ ಚರಿತ್ರೆ ಮತ್ತು ಗಜೇಂದ್ರಮೋಕ್ಷ ಆಖ್ಯಾ ಇವೆ. 'ಗುರುವರ ಗಿರಿಧರತರಳ' ವಿರಚಿತ ಮಹಿಷಾಸುರ ಮರ್ದಿನಿ ಕಥಾ, ನಿಶುಂಭ ಕಥಾ ಮತ್ತು ಕಾರ್ತ್ಯವೀರ್ಯಾರ್ಜುನ ಕಥಾ ಆಖ್ಯಾನಗಳೂ ಇ

ಮಹಿಪತಿಸುತ' ಅಂಕಿತ ಕೃಷ್ಣ ಚರಿತ್ರೆ, ಭಾಗವತ ದಶಮಸ್ಕಂದದ ಶ್ರೀಕೃಷ್ಣನ ಲೀಲೆಯವರೆಗಿನ (ಕಂಸಮರ್ದನ ವರೆಗೆ) ಕಥೆ ಪದ್ಯರೂಪದಲ್ಲಿದೆ.

ಽಲ್ಲಲ್ಲಿ ಕಾಣುವ 'ಶ್ರೀದತ್ತ ಭಾಸ್ಕರ ಮಹೀಪತಿ ಕೃಷ್ಣಮೂರ್ತಿ ರಾಮೇಭ್ಯೋ ' ಎಂಬ ಸ್ವಸ್ತಿ ಲೇಖನ, ಹಾಗೂ ಕೃಷ್ಣ ಚರಿತ್ರೆಯ ಮೊದಲು ಬರುವ ಐದು ಶ್ಲೋಕಗಳು ರಾಯರ ಮನೆತನದ ಗುರು ಪರಂಪರೆ ಹಾಗೂ ಸಂಪ್ರದಾಯವನ್ನು ಶಿಸುವಲ್ಲಿ ಸಹಕಾರಿಯಾಗುತ್ತದೆ.

'ದತ್ತಾತ್ರೆಯ ಮಹಂ ವಂದೇ ಅನಸೂಯಾ ಕರೋದ್ಭವಂ।
ಸ್ಮರಣಾನ್ಮುಕ್ತಿದಾತಾರಂ ಮಾಹುರ್ಯಗನಿವಾಸಿನಂ ॥೧॥
ಅಜ್ಞಾನಾಂಧಶ್ಚಂ ...... ಪ್ರಭಾಕರ ವಿವೋಜ್ವಲಂ ।
ಭಕ್ತಾರ್ಣವ ರೋಷಧೀಶಂ ವಂದೇಹಂ ಭಾಸ್ಕರಗುರುಂ ॥೨॥
ಭಾಸ್ಕರಾಖ್ಯ ಗುರುಕರೋದ್ಭವಂ ಯೋಗೇಶ್ವರಂ ಪರಂ ।
ಅರ್ಥಾನಾಮರ್ಥ ಫಲದಂ ಪ್ರಣಮಾಮಿ ಮಹೀಪತಿಂ ॥೩॥
ಭಜಾಮಿ ಕೃಷ್ಣರಾಜಾನಂ ಭೂಪತೇಸ್ತನೂಜಂ ವಿಭು।
ಜ್ಞಾನೋಪದೇಶ ಕರ್ತಾರಂ ಸರ್ವದಾನರ್ರೂಪಿಣಂ ॥೪॥
ಏತೇ ದಿವಾಕರ ಮಹಿಪತಿ ಕೃಷ್ಣಾಶ್ಚ ಸಾಧವಃ !
ಅವಂತು ಸ್ಮರಣಾದಸ್ಮಾನ್ಭವ ಸಾಗರ ತಾರಕಾಃ ॥೫॥

ರ ಸ್ವಾಮಿ; ಮಹಿಪತಿರಾಯರು ಹಾಗೂ ಕೃಷ್ಣರಾಯರನ್ನು 'ಸಾಧವಃ' ಎಂದು ೧ೀಧಿಸಿ, ಅವರ ಸ್ಮರಣೆ 'ಭವಸಾಗರ ತಾರಕ' ಎಂಬುದು ವಿಶೇಷವಾಗಿದೆ.

ಕೃಷ್ಣ ಚರಿತ್ರೆಯ ಐದನೆಯ ನುಡಿಯು ಮಹಿಪತಿರಾಯರ ರಾಜಯೋಗದ ನನ್ನು ವರ್ಣಿಸಿದರೆ, ಭಾವಾರ್ಥರಾಮಾಯಣದ ಐದನೆಯ ನುಡಿಯು ಅವರ ನನ್ನು ಚಿತ್ರಿಸುತ್ತದೆ. ಇವೆರಡೂ ಕೃತಿಗಳಲ್ಲಿ ನಾಲ್ಕನೆಯ ನುಡಿಗಳು ಮಂತನ (ಪ್ರಾಣದೇವರ) ಸ್ಮರಣೆಗೆ ಮೀಸಲಾಗಿವೆ!

ಅಲ್ಲಲ್ಲಿ ಕಾಲ ನಿರ್ದೇಶನದ ಗುರುತುಗಳು ದೊರೆಯುತ್ತವೆ. ಭಾವಾರ್ಥ ರಾಯಣದ ಸೀತಾ ಸ್ವಯಂವರ ಕಥಾಸಮಾಪ್ತಿಯನ್ನು 'ಪಿಂಗಳ ನಾಮ ಸಂವತ್ಸರ , ಶುದ್ಧ ರಾಮನವಮಿ, ಸೌಮ್ಯವಾಸರೆ ವ್ರತಸಮಾಪ್ತಿ' ಎಂದು ಉಲ್ಲೇಖಿಸಿದೆ. ನ್ನೊಂದು ಪುಟದಲ್ಲಿ 'ಗೋವಿಂದಾಚಾರ್ಯರ ಕೈಯಲ್ಲಿ ಭಾಗವತ ದಶಮಸ್ಕಂದ ಟ್ಟಿ ಸಂಖ್ಯಾಯಷ್ಟು ಅಧ್ಯಾ(ಯ)ಯಂದರೆ ಸ್ಮರಣಾರ್ಥ ವಾಲಿ ೩೮, ಅಧ್ಯಾಯ ತಿಥಿ ಅಶ್ವೀನ ವದ್ಯ ಪಂಚಮಿ ರೋಜ ಶುಕ್ರವಾರ ಕೊಟ್ಟದೆ' ಎಂದು ಬರೆದಿದೆ. ಗಳು -ಸಂಗ್ರಹಕಾರನು ಬರೆದ ಕಾಲಮಿತಿಗಳಾಗಿದ್ದು ಕ್ರಮವಾಗಿ ಕ್ರಿ.ಶ. ೨-೧೭೭೨ ಹಾಗೂ ೨೧-೧೦-೧೭೭೬ ನೆಯ ದಿನಗಳಿಗೆ ಸರಿಹೊಂದುತ್ತವೆ.

ಹಸ್ತಪ್ರತಿಯು ಸುಮಾರು ೨೦೦ ವರ್ಷಗಳಷ್ಟು ಹಳೆಯದು.

೪. ಪ್ರತಿ 'ಈ':- ೨೮x ೨೬ ಸೆಂ.ಮಿ. ಉದ್ದಳತೆಯ ಕಾಗದದ ಪುಸ್ತಕ. ಉ
ಬಟ್ಟೆಯ ಮೇಲು ಹೊದಿಕೆ. ಮೊದಲಿನ ಹಾಗೂ ಕೊನೆಯ ಅನೇಕ ಪುಟಗಳು ಹ
ಹೋಗಿವೆ. ಉಳಿದದ್ದು ೧೫೦ ಪುಟಗಳು. ಲಿಪಿ ದೇವನಾಗರಿ ಅಕ್ಷ
ಸುಂದರವಾಗಿಲ್ಲದಿದ್ದರೂ ಸ್ಪಷ್ಟವಾಗಿವೆ.

ಸಂಗ್ರಹದಲ್ಲಿ ದೊರೆಯುವ ಒಟ್ಟು ೨೦೬ ಪದಗಳಲ್ಲಿ ಮಹಿಪತಿರಾಯರ
ಕೃತಿಗಳಿವೆ. ಅವರ ಅಪ್ರಕಟಿತ ಒಂದು ವಚನವೂ ಇದೆ. ಉಳಿದವುಗಳಲ್ಲಿ
ಮಹಪತಿ, ಗುರುಮಹಿಪತಿಸ್ವಾಮಿ ರಾಮಚಂದ್ರಪ್ರಿಯ, ಗಿರಿಧರಸುತ, ಗುರು
ಪುರಂದರ ವಿಠಲ, ವಿಜಯವಿಠಲ, ಗೋಪಾಲ ವಿಠಲ, ರಘುಪತಿವಿಠಲ ಅಂಕಿ
ಹಾಗೂ ಅಂಕಿತವಿಲ್ಲದ ಕೀರ್ತನೆಗಳಿವೆ.

ಮಹಿಪತಿರಾಯರ 'ಕೊರವಂಜಿ ಪದ' ದ ನಕಲಿನ ಅನಂತರ 'ರಾಕ್ಷಸಾಖ್ಯ ವ
ಅಶ್ವೀಜ ದಕ್ಷಿಣಾಯನೇ ತೃತೀಯ ಕುಜವಾಸರೆ ಕೊರವಂಜಿ ಪದ ಸಮಾಪ್ತ' ಎ
ಅದರ ಅಡಿಯಲ್ಲಿ 'ಇದಂ ಪುಸ್ತಕಂ ಜಾಲವಾದಿ ಗ್ರಾಮದಲ್ಲಿ ಶ್ರೀ ಗುರುಮಹಿ
ವಂಶ ಉದ್ಭವೀಕರಾದ ಗುರುರಾವ ಶ್ರೀನಿವಾಸ ನಾಯಕ ಚೌಧರಿ ಇವರು ೭
ಹಣಮಂತ ಶ್ರೀನಿವಾಸ ಹತ್ತರಕಿಹಾಳ ಇವರಿಂದ ಶುದ್ಧಿಲ್ಪಟ್ಟ ಮಿತಿ ಶಾ
ಶುದ್ಧ।। ೭ ರವಿವಾರ ಅಂಗೀರಸ ಸಂವತ್ಸರ' ಎಂದು ನಮೂದಿಸಲಾಗಿದೆ.
ದಿನಗಳು ಕ್ರಮವಾಗಿ ಕ್ರಿ.ಶ. ೧೭೭೫ ಹಾಗೂ ೧೮೧೨ಕ್ಕೆ ಸರಿಹೊಂದು
ಬರೆಯುವದಕ್ಕೂ, ಶುದ್ಧೀಕರಿಸುವುದಕ್ಕೂ ಮಧ್ಯ ಸುಮಾರು ೧೭ ವರುಷಗಳಿರು
ಗಮನಾರ್ಹವಾಗಿದೆ.

ಹಸ್ತಪ್ರತಿಯು ಸುಮಾರು ೨೦೦ ವರುಷಗಳಷ್ಟು ಹಳೆಯದು.

೫ ಪ್ರತಿ 'ಉ':- ೫೦x೧೫ ಸೆಂ.ಮಿ. ಉದ್ದಳತೆಯ ಉದ್ದನ್ನ ಪುಸ್ತಕ
ದುಸ್ಥಿತಿಯಲ್ಲಿದೆ. ಪುಟ ಸಂಖ್ಯೆ ಇದೆ. ಪಾನಿಗೆ ಒಂದರಂತೆ ೫೦ ಪುಟಗಳು ಲಭ್ಯ
ಮೊದಲನೆಯ ಪುಟ ಅರ್ಧ ಹರಿದಿದೆ. ದೇವನಾಗರಿ ಲಿಪಿ ಸುಂದರ ಸ್ಪಷ್ಟ ಅಕ್ಷರ

ಇದರಲ್ಲಿ ಕೀರ್ತನೆಗಳಿಲ್ಲ. ಮಹಿಪತಿರಾಯರ ಮಕ್ಕಳು ಮೊಮ್ಮಕ್ಕಳು
ಈ ಮೊದಲು ಹೇಳಿದ ಕಾವ್ಯಗಳು -ಆಖ್ಯಾನಗಳು ಇವೆ. ದೊರೆಯುವ ಅಂಕಿ
ಗಿರಿಧರತನಯ, ಗುರುಕೃಷ್ಣಪ್ರಭು, ಶ್ರೀಪತಿಪ್ರಭು, ಗುರುಕೃಷ್ಣಕಂದ, ಗುರುಮ
ಇತ್ಯಾದಿ. ಆಖ್ಯಾನಗಳು - ಅಶ್ವಮೇಧ ಕಥಾ, ಸಪ್ತಸತಿ ಕಥಾ, ಬಬ್ರುವಾಹನ

ತಾಮ್ರಧ್ವಜನ ಕಥೆ, ಭಾಗವತ ಕೃಷ್ಣ ಕಥಾ ಮತ್ತು ಭಾವಾರ್ಥ ರಾಮಾಯಣ ಕಾಂಡಗಳು.

ಬಭ್ರುವಾಹನ ಕಥೆಯ ಕೊನೆಯಲ್ಲಿ ಕಾಲ ಸೂಚಿ ಇದೆ ಹಸ್ತಪ್ರತಿಯು ೧೮೫೮ರದ್ದು.

೬. ಪ್ರತಿ 'ಊ':- ೧೫x ೨೦ ಸೆಂ.ಮಿ. ಉದ್ದಳತೆಯ ಕಾಗದದ ಪುಸ್ತ ಹರಿದಿದೆ. ಮೊದಲಿನ ಕೆಲವು ಪುಟಗಳಿಲ್ಲ. ದೇವನಾಗರಿ ಲಿಪಿ. ಮಹಿಪತಿಸುತ ಗುರುಕೃಷ್ಣರ ಕೆಲವು ಆಖ್ಯಾನಗಳಿವೆ. ಕಾಲ ನಿರ್ದೇಶನವಿಲ್ಲ. ಸುಮಾರು ವರುಷಗಳಷ್ಟು ಹಳೆಯದಾದ ಹಸ್ತಪ್ರತಿ.

೭. ಪ್ರತಿ 'ಎ':- ೨೬x ೨೦ ಸೆಂ.ಮಿ.ಉದ್ದಳತೆಯ ಕಾಗದದ ಸುಸ್ಥಿತಿಯಲ್ಲಿದೆ. ಪುಟ ಸಂಖ್ಯೆ ಇಲ್ಲ. ಮೊದಲಿನ ಕೆಲವು ಪುಟಗಳು ಉಳಿದದ್ದು ೪೦ ಪುಟಗಳು. ದೇವನಾಗರಿ ಲಿಪಿ. ಒಟ್ಟು ದೊರೆಯುವ ೬೨ ಪ ೧೦ ಮಹಿಪತಿರಾಯರು ರಚಿಸಿದವುಗಳು. ಕಾಲಸೂಚಿ ನಿರ್ದೇಶನವಿಲ್ಲ. ವರುಷ ಹಳೆಯ ಹಸ್ತಪ್ರತಿ.

೮. ಪ್ರತಿ 'ಏ':-೩೦x೧೪ ಸೆಂ.ಮಿ. ಉದ್ದಳತೆಯ ಕಾಗದದ ಪುಸ್ತಕ ಹರಿದಿದೆ. ೫೬ ಪುಟಗಳು ಲಭ್ಯ. ದೇವನಾಗರಿ ಲಿಪಿ. ಅಕ್ಷರಗಳು ಸಂದಿಗ್ಧ, ಅಶುದ್ಧ. ಗುರುಮಹಿಪತಿ ಕೃತ ರಾಮಾಯಣ (ಅಪೂರ್ಣ) ಹಾಗು ಗು ರಚಿತ ಬಭ್ರುವಾಹನ ಕಥೆಗಳು ಇವೆ. ಕಾಲ ನಿರ್ದೇಶನ ಇಲ್ಲ. ಹಸ್ತಪ್ರತಿ ಒಂದು ನೂರು ವರುಷಕ್ಕಿಂತ ಹಳೆಯದು.

೯. ಪ್ರತಿ 'ಐ':- ೪೬x೧೫ಸೆಂ.ಮಿ. ಉದ್ದಳತೆಯ ಅತಿ ಜೀರ್ಣಾವಸ್ಥೆಯ ವಹಿ. ಪುಟ ಸಂಖ್ಯೆ ಇಲ್ಲ. ೫೦ ಪಾನುಗಳು ಇವೆ. ದೇವನಾಗರಿ ಲಿ ಅಕ್ಷರಗಳು.

ಮಹಿಪತಿರಾಯರ ೫ ಕನ್ನಡ -ಮರಾಠಿ ಪದಗಳಿವೆ. ಉಳಿದದ್ದು, ಅ ಚರಿತ್ರೆ, ಸೀತಾ ಸ್ವಯಂವರ, ಸಿರಿಯಾಳ ಸೆಟ್ಟಿಕಥೆ, ಬಭ್ರುವಾಹ ಮಾರ್ಕಂಡೇಯ ಚರಿತ್ರೆಗಳು. ಇವುಗಳಲ್ಲಿ ಕೆಲವು ಅಪೂರ್ಣ ಗುರುಕೃಷ್ಣ ಪದಗಳು. ಅಪೂರ್ಣ ರಾಮಾಯಣ ಗಮನಾರ್ಹ. ಚಿದಾನಂದನ 'ಮಾ ಫಕೀರ' ಒಂದು ಪದ. ಮುಕ್ತೇಶ್ವರನ ಮರಾಠಿ ರಾಮಾಯಣದ ೨೫ ವಿಶೇಷ. ಕಾಲಸೂಚಿಯ ಸ್ಪಷ್ಟ ಉಲ್ಲೇಖವಿಲ್ಲ. ಅಹಿರಾವಣ ಕಥೆಯ

ರಾಜ ಸುತ ಲಕ್ಷ್ಮೀ ಪತಿ ನಾಮಕಾನೆ ಇದಂ ಚರಿತ್ರಂ ... ಲಿಖಿತಂ....' ಇತ್ಯಾದಿ
ಖ ಹಸ್ತಪ್ರತಿಯು ಸುಮಾರು ಎರಡುನೂರು ವರುಷಗಳಷ್ಟು ಹಳೆಯದು.

ಪ್ರತಿ 'ಒ':- ೨೨x೧೬ ಸೆಂ.ಮಿ. ಉದ್ದಳತೆಯ ತೀರ ಇತ್ತೀಚಿನ ಕಾಗದದ
ಕ ನೀರು ಬಿದ್ದು ಓದಲಾಗದಷ್ಟು ದುರವಸ್ಥೆ. ದೇವನಾಗರಿ ಲಿಪಿ. ಸ್ವಚ್ಛ ಸುಂದರ
ಗಳು. ಮಹಿಪತಿರಾಯರ ಸುಮಾರು ಹತ್ತು ಕೃತಿಗಳನ್ನು ಗುರುತಿಸಬಹುದು.
ನಿರ್ದೇಶನವಿಲ್ಲ.

ಪ್ರತಿ 'ಓ':- ೨೦x ೧೪ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಪುಸ್ತಕ.
ಸಂಖ್ಯೆ ಇದೆ. ಪಾನಿಗೆ ಒಂದರಂತೆ ೧ ರಿಂದ ೪೦ ಪುಟಗಳು, ದೇವನಾಗರಿ ಲಿಪಿ.
, ಸ್ಪಷ್ಟ ಅಕ್ಷರಗಳು.

ಗುರುಮಹಿಪತಿ ಕೃತ ಭಾವಾರ್ಥ ರಾಮಾಯಣದ ಏಳು ಕಾಂಡಗಳು ಉಪಲಬ್ಧ.
ಕೃಷ್ಣರ ಕೆಲವು ಪದಗಳು. 'ಭೀಮಸೇನ ವಿಲಾಸ'ದ ೫ ಪದಗಳು ಅಲ್ಲದೆ
ದರ ವಿಠಲ, ಹಯವದನ, ವಿಜಯವಿಠಲ, ಜಗನ್ನಾಥ ವಿಠಲ, ಗೋಪಾಲ
, 'ಪ್ರಸನ್ನೆಂಕಟ ಹಾಗೂ ಪ್ರಾಣೇಶ ವಿಠಲರ ಕೆಲವು ಕೃತಿಗಳು. ವಾಲ್ಮೀಕಿ
ಮಾಯಣದ ಕೆಲವು ಶ್ಲೋಕಗಳು. ಸಂಸ್ಕೃತದ ಕೆಲವು ಸುಭಾಷಿತಗಳೂ ಉಂಟು.
ರ್ಥ ರಾಮಾಯಣದ ಮೊದಲಿನ ಏಳು ಸ್ತುತಿ ಪದ್ಯಗಳು - ಗಣಪತಿ, ಶಾರದೆ,
ದಾನಂದ, ಹಣಮಂತ ಹಾಗೂ ಮಹಿಪತಿಗಳ ಕುರಿತು ವಿಶೇಷ
ೀಖಾರ್ಹವಾಗಿದೆ. ಕಾಲಸೂಚಿ ನಿರ್ದೇಶನವಿಲ್ಲ. ೧೫೦ ಕ್ಕೂ ಹೆಚ್ಚು
ಷಗಳ ಹಳೆಯ ಪ್ರತಿ.

. ಪ್ರತಿ 'ಔ':- ೨೬x೧೬ ಸೆಂ.ಮಿ. ಉದ್ದಳತೆಯ ತೀರ ಇತ್ತೀಚಿನ ವಹಿ.
ು ಬಿದ್ದು ಹಾಳಾಗಿದೆ. ಮಹಿಪತಿ, ಗುರುಮಹಿಪತಿ ಕೃತ ಕೆಲವು ರಚನೆಗಳನ್ನು
ಬಹುದು.

. ಪ್ರತಿ 'ಕ':- ೧೬x ೧೪ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಹಸ್ತಪ್ರತಿ
ಸಂಖ್ಯೆ ಇಲ್ಲ. ೨೦ ಪುಟಗಳು ಲಭ್ಯ. ದೇವನಾಗರಿ ಲಿಪಿ, ಭಿನ್ನ ಅಕ್ಷರಗಳು,
ಪತಿ, ಮಹಿಪತಿನಂದನರ ಕೆಲವು ಕೃತಿಗಳು.

. ಪ್ರತಿ 'ಖ':- ಡೆಮಿ ಅಷ್ಟಪತ್ರ, ಇತ್ತೀಚಿನ ಕಾಗದ ೪೦ ಪುಟಗಳಲ್ಲಿ ಅರ್ಧ
ವನಾಗರಿ ಅರ್ಧ ಕನ್ನಡ ಲಿಪಿ. ಹೆಳವನಕಟ್ಟೆ ರಂಗ ಅಂಕಿತದ ಕೊರವಂಜಿ ಪದ
ಗೂ ಉಳಿದ ದಾಸರ ಕೃತಿಗಳು.

೩. ಪ್ರತಿ 'ಗ':- ೨೦x ೧೬ ಸೆಂ.ಮಿ. ಉದ್ದಳತೆಯ ಹಳೆಯ ಕಾಗದ
ಪ್ರತಿ. ಪುಟಸಂಖ್ಯೆ ಇಲ್ಲ. ೨೦ ಪಾನುಗಳು ಲಭ್ಯ. ದೇವನಾಗರಿ ಲಿಪಿ. ಅಸ್ಪ
ರಗಳು. ಮಹಿಪತಿರಾಯರ ಅವರ ಮಕ್ಕಳ ಹಾಗೂ ಪುರಂದರದಾಸರ ಕೆಲ
ನಗಳು. ಕಾಲಸೂಚಿ ನಿರ್ದೇಶನವಿಲ್ಲ. ಕೊನೆಯ ಪುಟದಲ್ಲಿ ಮೋಡಿ ಅಕ್ಷರಗಳ
ದಾಸ ವೆಂಕಪ್ಪಯ್ಯ ಎಂದು ಹೆಸರು. ಅಲ್ಲದೆ ಮಹಿಪತಿರಾಯರ ವೃಂದಾವ
ಖ, ಚಕ್ರಗಳ ಚಿತ್ರ. ೧೫೦ ವರುಷಗಳಷ್ಟು ಹಳೆಯದು.

೬. ಪ್ರತಿ 'ಚ':- ೨೦x೧೬ ಸೆಂ.ಮಿ. ಉದ್ದಳತೆಯ ಇತ್ತೀಚಿನ ಕಾಗದಗಳ ವ
ರು ಬಿದ್ದು ಹಾಳಾಗಿದೆ. ಮಹಿಪತಿ, ಗುರುಮಹಿಪತಿ, ಗುರುಕೃಷ್ಣ ಮುದ್ರಿಕೆಂ
ಡ, ಮರಾಠಿ ಭಾಷೆಯ ಕೆಲವು ಕೀರ್ತನೆಗಳನ್ನು ಗುರುತಿಸಬಹುದು.

೭. ಪ್ರತಿ 'ಛ':- ೨೦x೧೪ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಕಟ
ಟ ಸಂಖ್ಯೆ ಇಲ್ಲ. ದೇವನಾಗರಿ ಲಿಪಿ. ಸ್ವಚ್ಛ ಅಕ್ಷರಗಳು, ಮಹಿಪ
ರುಮಹಿಪತಿ, ಗೋಪಾಲ ವಿಠಲರ ಕೃತಿಗಳು. ಗುರುಮಹಿಪತಿಕೃತ ಕಂಸಮರ್ದ
ಖ್ಯಾನ ಪೂರ್ತಿ ಇದೆ. ಸುಮಾರು ೧೨೦ ವರುಷಗಳಷ್ಟು ಹಳೆಯ ಹಸ್ತಪ್ರತಿ

೮. ಪ್ರತಿ 'ಜ':- ೨೦x ೧೩ ಸೆಂ.ಮಿ. ಉದ್ದಳತೆಯ ಹಳೆಯ ಕಾಗದ
ಸ್ತಪ್ರತಿ. ೨೦ ಪುಟಗಳವರೆಗೆ ಪಾನಿಗೆ ಒಂದರಂತೆ ಪುಟಸಂಖ್ಯೆ ಇದೆ. ದೇವನಾ
ಪಿ ಸ್ಪಷ್ಟ ಅಕ್ಷರ. 'ಮಹಿಪತಿ' ಅಂಕಿತದ ೪ ಕೀರ್ತನೆಗಳು. ಉಳಿದವುಗಳ
ುರುಮಹಿಪತಿ' 'ಗುರುಕೃಷ್ಣ' ಅಭಿನವಜನಾರ್ಧನ ವಿಠಲ ಹಾಗೂ 'ಹಳ್ಳೂರೇ
ುದ್ರಿಕೆಯ ೨೦ ಕೀರ್ತನೆಗಳು, ಕೃಷ್ಣರಾಯರ ೩೩ ಷಟ್ಪದಿಗಳು ವಿಶೇಷ. ೧
ುಷಗಳಷ್ಟು ಹಳೆಯ ಹಸ್ತಪ್ರತಿ.

೯. ಪ್ರತಿ 'ಝ':- ೨೦x೧೦ ಸೆಂ.ಮಿ. ಅಳತೆಯ ಚಿಕ್ಕ ಹಸ್ತಪ್ರತಿ. ಪ
ಂಖ್ಯೆಗಳಿಲ್ಲ. ೪೦ ಪುಟಗಳು. ದೇವನಾಗರಿ ಲಿಪಿ. ಇಬ್ಬರು ಮೂವರ ಕೈ ಬ
ಕಾರಾಮನ ಅಭಂಗಗಳು ಕೆಲವು 'ಮಹಿಪತಿ' 'ಗುರುಮಹಿಪತಿ' ಅಂಕಿ
ರ್ತನೆಗಳು. ಕಾಲಸೂಚಿ ನಿರ್ದೇಶನವಿಲ್ಲ. ಸುಮಾರು ೧೫೦ ವರುಷಗಳ
ಳೆಯ ಹಸ್ತಪ್ರತಿ.

೦. ಪ್ರತಿ 'ಟ':- ೨೫x೨೦ ಸೆಂ.ಮಿ. ಉದ್ದಳತೆಯ ಹಳೆಯ ಕಾಗದ
ಸ್ತಪ್ರತಿ. ಮೇಲು ಹೊದಿಕೆ ಕೃಷ್ಣಾಜಿನದಿಂದ ಗಟ್ಟಿಮುಟ್ಟಾಗಿ ಕಟ್ಟಿದೆ. ಪಾ
ಂದರಂತೆ ೧೩೦ ಪುಟಗಳ ಸಂಖ್ಯೆ ದೇವನಾಗರಿ ಲಿಪಿ. ಸುಂದರ ಅಕ್ಷರಗಳು

, ದೊರೆಯುವ ೨೭೮ ಕೀರ್ತನೆಗಳಲ್ಲಿ ಸಿಂಹಪಾಲು ಕೃಷ್ಣರಾಯರ (ಗುರು
) ಕೃತಿಗಳು. ಮಹಿಪತಿರಾಯರ ೫೮ ಕೃತಿಗಳು ಉಂಟು. ಅಲ್ಲದೆ ಗುರುಕೃಷ್ಣ,
ತ, ಪುರಂದರದಾಸ ಪ್ರಸನ್ವೆಂಕಟ, ವಿಜಯ ವಿಠಲ, ಗೋಪಾಲ ವಿಠಲ,
ವಿಠಲರ ಕೃತಿಗಳಿವೆ. ಜೊತೆಗೆ ೧೨ ಉಗಾಭೋಗಗಳಿವೆ. ಅಚಲಾನಂದ
ರಂದರ (೧೦), ವೈಕುಂಠ (೧), ವಿಜಯ (೨) ಯೋಗೀಂದ್ರ (೧),
ಮುದ್ದು ವಿಠಲ (೧) ರ ಉಗಾಭೋಗಗಳು.

ಪ್ರತಿಯ ಅರ್ಧಕ್ಕಿಂತ ಹೆಚ್ಚುಭಾಗ ರಾಯಚೂರಿನ ಅಪರಾಳ ತಮ್ಮಣ್ಣನ
ಷ್ಣ ಪಾರಿಜಾತದಿಂದ ತುಂಬಿದೆ. ಅಲ್ಲಲ್ಲಿ ಬರುವ ಕಾಲಸೂಚಿ
ನಗಳಿಂದ ಮತ್ತು ಶ್ರೀ ಕೃಷ್ಣ ಪಾರಿಜಾತದ ಪೂರ್ತಿ ಪಾಠದಿಂದ ಅಪರಾಳ
ನ ಕಾಲ ನಿರ್ಣಯ ಹಾಗೂ ಶ್ರೀ ಕೃಷ್ಣ ಪಾರಿಜಾತದ ಪಾಠಾಂತರಕ್ಕೆ
ಕ್ತವಾದ ಹಸ್ತಪ್ರತಿ.

ನೇ ಪುಟದಲ್ಲಿ 'ನೆನೆದು ನಮಿಸುವೆನು ವಾರಂ ವಾರ' ಕೀರ್ತನೆಯ (ಮಹಿಪತಿ
ಂಕಿತ) ಇನ್ನೊಂದು ಪಾಠವಿದೆ. ಕ್ರಿ.ಶ. ೧೮೨೮ರಲ್ಲಿ ಕಾಖಂಡಕಿ ವೆಂಕಟೇಶ
ರು ಹರಿಕಥೆ ಮಾಡುತ್ತ ಅಡ್ಡಾಡುವಾಗ ಸಂಗ್ರಹಿಸಿದ ಹಸ್ತಪ್ರತಿ.

ತಿ 'ಠ':- ೩೦x೨೦ ಸೆಂ:ಮಿ. ಉದ್ದಳತೆಯ ಹಳೆಯ ಕಾಗದದ ಹಸ್ತಪ್ರತಿ.
ಹೊದಿಕೆ ಕೃಷ್ಣಾಜಿನದ್ದು, ಗಟ್ಟಿಮುಟ್ಟಾಗಿ ಕಟ್ಟಲಾಗಿದೆ. ಪುಟ ಸಂಖ್ಯೆ ಇದೆ.
ನೆಯ ಪುಟ ಇಲ್ಲ. ಎರಡನೆಯ ಪುಟದಿಂದ ೬೬ನೆಯ ಪುಟದವರೆಗೆ ಪುಟ
ಇದೆ. ಮುಂದಿನ ೯ ಪುಟಗಳಿಗೆ ಪುಟಸಂಖ್ಯೆ ಇಲ್ಲ. ಇನ್ನು ಕೆಲವು ಪುಟಗಳು
ಹೋಗಿರುವ ಸಂಭವ ಇದೆ. ದೇವನಾಗರಿ ಲಿಪಿ. ಕರಿ ಮಸಿಯಲ್ಲಿ ಬರೆದ
ದ ಅಕ್ಷರಗಳು.

ಈ ಸಂಗ್ರಹದಲ್ಲಿ ಮಹಿಪತಿರಾಯರ ೫೦೬ ಪದಗಳು ಒಂದೆಡೆಯಲ್ಲಿ
ಮುತ್ತವೆ. ಇಲ್ಲಿಯ ಬಹುತೇಕ ಪದಗಳೆಲ್ಲ ಮೈಸೂರು ವಿಶ್ವವಿದ್ಯಾಲಯದ
ದಲ್ಲಿ ಪ್ರಕಟವಾಗಿವೆ. ಕೆಲವು ಕೃತಿಗಳು ಎಲ್ಲಿಯೂ ಉದ್ಧೃತವಾಗಿಲ್ಲ.
ತರ ಹಾಗೂ ಹೆಚ್ಚಿನ ಅಭ್ಯಾಸಕ್ಕೆ ಉಪಯುಕ್ತವಾದ ಹಸ್ತಪ್ರತಿ.

ಲನಿರ್ದೇಶನದ ಸೂಚಿ ಇಲ್ಲ. ಸುಮಾರು ೨೦೦ ವರುಷಗಳಷ್ಟು ಹಳೆಯದಾದ
ತಿ.

ಪ್ರತಿ 'ಡ':- ೩೦x ೨೦ ಸೆಂ.ಮಿ. ಉದ್ದಳತೆಯ ಹಳೆಯ ಕಾಗದಗಳ

ಪ್ರತಿ. ಮೇಲು ಹೊದಿಕೆ ಇಲ್ಲ. ಹಾನಿಗೆ ಒಂದರಂತೆ ೩.೨ ಪುಟಗಳ ಸಂಖ್ಯೆ ಇದೆ.
ರಲ್ಲಿ ೨೧೦ ಕೃಷ್ಣರಾಯರ (ಮಹಿಪತಿಸುತ) ಪದಗಳಿವೆ. ೩೬ನೆಯ
ಟಸಂಖ್ಯೆ ಇಲ್ಲ) ಪುಟದ ಬೆನ್ನುಮೇಲೆ ಕ್ರಿ.ಶ. ೧೭೮೫ರಲ್ಲಿ ಜನಿಸಿದ ಆವಳಿಮಕ್ಕಳ
ತಕ ಇದೆ. ಕೈಬರಹ 'ಠ' ಪ್ರತಿಯಂತಿದೆ. ಸುಮಾರು ೨೦೦ ವರುಷಗಳಷ್ಟು
ಯ ಹಸ್ತಪ್ರತಿ.

.. ಪ್ರತಿ 'ಪ':- ೨೦x ೧೬ ಸೆಂ.ಮಿ. ಉದ್ದಳತೆಯ ಹಸ್ತಪ್ರತಿ. ಪುಟ ಸಂಖ
.. ಮೊದಲಿನ ಕೆಲವು ಪುಟಗಳು ಹರಿದಿರುವ ಸಂಭವವಿದೆ. ದೇವನಾಗರಿ ಲಿಪಿ
ಷ್ಟ ಅಕ್ಷರಗಳು. ಮಹಿಪತಿ, ಮಹಿಪತಿಸುತ, ಕೃಷ್ಣ ಅಂಕಿತದ ಕನ್ನಡ, ಮರಾಠಿ
ದಿ ಭಾಷೆಯ ಕೃತಿಗಳ ಸಂಗ್ರಹ. ಕಾಲಸೂಚಿ ನಿರ್ದೇಶನವಿಲ್ಲ. ಸುಮಾರು ೧೫೦
ುಷದ ಪ್ರತಿ.

. ಪ್ರತಿ 'ಫ':-೧೬x೧೪ ಸೆಂ. ಮಿ. ಉದ್ದಳತೆಯ ಚಿಕ್ಕ ಹಸ್ತಪ್ರತಿ. ಪುಟಸಂಖ
.. ೪೦ ಪುಟಗಳಿವೆ. ದೇವನಾಗರಿ ಲಿಪಿ ಸ್ವಚ್ಛ ಅಕ್ಷರಗಳು. ಮಹಿಪತಿ
ುಮಹಿಪತಿ ಅಂಕಿತದ ಕೃತಿಗಳ ಸಂಗ್ರಹ ಸುಮಾರು ೧೫೦ ವರುಷಗಳಷ್ಟು ಹಳೆಯ
ತ್ರಪ್ರತಿ.

೫. ಪ್ರತಿ 'ಬ':-೧೬ x೧೧ ಸೆಂ.ಮಿ. ಅಳತೆಯ ಕಿರುಪುಸ್ತಕ, ಪುಟ ಸಂಖ್ಯೆ ಇಲ್ಲ
) ಪುಟಗಳು. ದೇವನಾಗರಿ ಲಿಪಿ. ಸ್ಪಷ್ಟ ಅಕ್ಷರಗಳು. 'ಗುರುಕೃಷ್ಣ' ವಿರಚಿ
ನಾವರ್ತ ಕಥಾ' ಪೂರ್ತಿ ಇದೆ. ಕಾಲಸೂಚಿ ನಿರ್ದೇಶನವಿಲ್ಲ. ಹಸ್ತಪ್ರ
ಮಾರು ೨೦೦ ವರುಷಗಳಷ್ಟು ಹಳೆಯದು.

ಹೀಗೆ ಈ ೨೫ ಹಸ್ತಪ್ರತಿಗಳೊಂದಿಗೆ ಸುಮಾರು ೫೦೦ ಬಿಡಿ ಕಾಗದಗಳ
ಾರೆತಿದ್ದು ಅವುಗಳಲ್ಲೂ ಹರಿದಾಸರ ಕೃತಿಗಳು ಉಂಟು.

.೨ ಇತರ ಹಸ್ತಪ್ರತಿಗಳು

ಈ ಹಸ್ತಪ್ರತಿಗಳ ವಿವರಗಳನ್ನು ಕೊಡುವ ಮುಖ್ಯ ಉದ್ದೇಶವೆಂದ
ಹಿಪತಿರಾಯರ ಹಾಗೂ ಅವರ ಸಮಕಾಲಿನರ ಹಸ್ತಪ್ರತಿಗಳನ್ನು ಹುಡುಕುವಾ
ವುಗಳು ದೊರೆತವು. ವಿಜಾಪುರ ಹಾಗೂ ಸುತ್ತಲಿನ ಪರಿಸರದಲ್ಲಿ ಮಹಿಪತಿರಾಯ
ಮಕಾಲೀನರು ರಚಿಸಿದ ಕೃತಿಗಳಲ್ಲದೆ ಇನ್ನು ಅನೇಕ ಹಳೆಯ ಹೊಸ ಸಾಹಿ
ವುಗಳಲ್ಲಿ ದೊರೆಯುವುದು ವಿಶೇಷವಾಗಿದೆ. ಈ ಮೊದಲೆ (ಹಸ್ತಪ್ರತಿ 'ಟ
ಳಿದಂತೆ ಶ್ರೀಕೃಷ್ಣ ಪಾರಿಜಾತದ ಪೂರ್ತಿಪಾಠ ಅಭ್ಯಾಸಕ್ಕೆ ಅನುಕೂಲವಾಗುವಂ

ಕೆಲವು ಹಸ್ತಪ್ರತಿಗಳಲ್ಲಿ ಸಾವಿರಕ್ಕೂ ಮಿಕ್ಕಿ ಸರ್ವಜ್ಞನ ತ್ರಿಪದಿಗಳು, ಶರ
ವಚನಗಳು ಇರುವುದೂ ವಿಶೇಷವಾಗಿದೆ. ಆದ್ದರಿಂದ ದೊರೆತ ಎಲ್ಲ ಹಸ್ತಪ್ರತಿ
ವಿವರವನ್ನು ಇಲ್ಲಿ ಕೊಡಲಾಗಿದೆ.

೨೬. ಪ್ರತಿ 'ಯ':-ಡೆಮಿ ಅಷ್ಟಪತ್ರ ಆಕಾರದ ಹಳೆಯ ಕಾಗದದ ಪುಸ್ತಕದ
ಪುಟಸಂಖ್ಯೆಗಳಿಲ್ಲ. ೧೦೦ ಪಾನುಗಳು ಲಭ್ಯ. ದೇವನಾಗರಿ ಲಿಪಿ.

ಈ ಸಂಗ್ರಹದಲ್ಲಿ ಮಹಿಪತಿರಾಯರ ಒಂದು ಕೃತಿ ಇದೆ. ಸರ್ವಜ್ಞನ ಸುಮಾ
ಒಂದು ಸಾವಿರದಷ್ಟು ತ್ರಿಪದಿಗಳಿವೆ. ಅಲ್ಲದೆ ಪ್ರಭುದೇವರು ಬಸವ
ಚೆನ್ನಬಸವಣ್ಣನವರ ವಚನಗಳೂ ಉಂಟು.

'ಶಿವರಾಮ' ಕೃತ 'ಸೋಮವಾರ ಶಿವಪೂಜಾ' ಮರಾಠಿಯಲ್ಲಿದೆ. 'ಬೋ
ಪ್ರಭು' ಅಂಕಿತದ ಸುಮಾರು ೨೦ ಪದಗಳು. ಅಲ್ಲದೆ ವಿವಿಧ ಸಂತರ ಮರ
ಆಧ್ಯಾತ್ಮ ಗೀತೆಗಳಿವೆ. ಸುಮಾರು ೨೦೦ ವರುಷಗಳ ಹಳೆಯ ಹಸ್ತಪ್ರತಿ.

೨೭. ಪ್ರತಿ 'ರ':- ಡೆಮಿ ಅಷ್ಟಪತ್ರದ ಕೋರಿ ಕಾಗದದ ಪುಸ್ತಕ ಮೊದಲಿನ ಹಾ
ಕೊನೆಯ ಪುಟಗಳು ಇಲ್ಲ. ೧೦೦ ಪುಟಗಳು ಲಭ್ಯ. ದೇವನಾಗರಿ ಲಿಪಿ.

ಸಿಂದಗಿಯ ಜಕ್ಕಪ್ಪಯ್ಯ (ಶಂಕರ -ಅಂಕಿತ) ವಿರಚಿತ 'ರಾಮಚಂ
ಅನುಸಂಧಾನ' ದ್ವಿಭಾಷಾ ಕಾವ್ಯ ಕನ್ನಡ -ಮರಾಠಿ ಭಾಷೆಗಳಲ್ಲಿ ರಚಿತವಾಗಿ
ಸಿಂದಗಿಯ ಸಂಗಮನಾಥನ ಶರಣು ಪದವೂ ಇದೆ.

ಇವುಗಳ ಹೊರತಾಗಿ, ಹೆಳವನಕಟ್ಟೆ ಗಿರಿಯಮ್ಮನ ಕೃಷ್ಣ ಕೊರವಂಜಿ ಪದ ರ
ವಿಠಲ, ಪ್ರಸನ್ನ ವೆಂಕಟ, ಹಾಗೂ ಮಧ್ವೇಶ ವಿಠಲರ ಕೃತಿಗಳು ದೊರೆಯುತ್ತ

ಮರಾಠಿಯಲ್ಲಿ ಏಕಾಜನಾರ್ದನಿ ಅಂಕಿತದ 'ಕೃಷ್ಣದಾನವ್ರತ', ಅಕ್ಷರ ಮಾ
ಆರತಿ ಪದಗಳು ಉಂಟು. ಮರಾಠಿ ಭಾಷೆಯಲ್ಲಿ ಪಾರಿಜಾತ ಕಥೆ ಇ
ಶಂಕರಾಚಾರ್ಯರ ಸಂಸ್ಕೃತ ಶಿವಾಷ್ಟಕ, ಹರನಾಮಾವಳಿ, ಗುರುತಿಸಬೇಕಾದ ಕೆಲ
ಕನ್ನಡ ಮರಾಠಿ ಪದಗಳು.

ಸುಮಾರು ೨೦೦ ವರುಷಗಳಷ್ಟು ಹಳೆಯದಾದ ಹಸ್ತಪ್ರತಿ.

೨೮. ಪ್ರತಿ '[illegible]' ...

'ಶಂಕರ' ರಚಿತ ಕನ್ನಡ -ಮರಾಠಿ ಪದಗಳು, ಸುಮಾರು ೪೦ ಪುಟಗಳು

೨೯. ಪ್ರತಿ 'ವ':- ಡೆಮಿ ಅಷ್ಟಪತ್ರ, ಕೋರಿ ಕಾಗದ ಅತ್ಯಂತ ಶಿಥಿಲ ಸುಮಾರು ೩೦-೩೫ ಪುಟಗಳು ಲಭ್ಯ. 'ಶಂಕರ' ಅಂಕಿತದ ಕನ್ನಡ, ಮರಾಠಿ, ಭಾಷೆಯ ಕೃತಿಗಳು ಅಲ್ಲಲ್ಲಿ ಸ್ವರ ಪ್ರಸ್ತಾರ, ಸುಮಾರು ೨೦೦ ವರುಷ ಹಳೆಯ

೩೦. ಪ್ರತಿ 'ಶ':-ಡೆಮಿ ಅಷ್ಟಪತ್ರ - ಕೋರಿಕಾಗದ ಸುಮಾರು ೧೦೦ ಪು ಲಭ್ಯ. ದೇವನಾಗರಿ ಹಾಗೂ ಕನ್ನಡ ಲಿಪಿ. ಶಂಕರ, ಶಿವರಾಮ ರಚಿತ ಕನ್ನಡ, ಮ ಕೃತಿಗಳು. ಸುಮಾರು ೨೦೦ ವರುಷದ ಪ್ರತಿ.

೩೧. ಪ್ರತಿ 'ಷ':- ೧೧x ೧೨ ಸೆಂ. ಮಿ. ಅಳತೆಯ ಇತ್ತೀಚಿನ ಕಾಗದಗಳ ಮರಾಠಿ ಪದಗಳು.

೩೨. ಪ್ರತಿ 'ಸ':-೨೧x೯ ಸೆಂ.ಮಿ. ಅಳತೆಯ ಕಾಗದದ ಹಸ್ತಪ್ರತಿ. ದೇವ ಸ್ಪಷ್ಟ ಅಕ್ಷರಗಳು ಕನ್ನಡ ಮರಾಠಿ ಹಿಂದಿ ಕೃತಿಗಳು.

೩೩/೩೪ ಪ್ರತಿ 'ಹ' ಮತ್ತು 'ಳ':- ೨೨x೧೨ ಸೆಂ.ಮಿ. ಅಳತೆಯ ಕಾ ಎರಡು ಹಸ್ತಪ್ರತಿಗಳು. ದೇವನಾಗರಿ ಲಿಪಿ. ಸಿಂದಗಿಯ ಭೀಮಾಶಂಕರ ಚರಿತ್ರೆ, ಕನ್ನಡ -ಗದ್ಯ ರೂಪದಲ್ಲಿದೆ. ಸುಮಾರು ೧೫೦ ವರುಷಗಳಷ್ಟು ಹಸ್ತಪ್ರತಿ.

**೩೫. ಪ್ರತಿ 'ಕ್ಷ':-** ೨೧x೧೨ ಸೆಂ.ಮಿ. ಅಳತೆಯ ಕೋರಿ ಕಾಗದದ ಹಸ ಶಿಥಿಲಾವಸ್ಥೆ ದೇವನಾಗರಿ ಲಿಪಿ. ಪಾನಿಗೆ ಒಂದರಂತೆ ಪುಟ ಸಂಖ್ಯೆ -೪ ರಿಂ ಪುಟಗಳು ಲಭ್ಯ. ವಿಜಾಪುರದ ರುಕ್ಮಾಂಗದ ಪಂಡಿತರ ಕನ್ನಡ -ಮರಾಠಿ ಸಂಗ್ರಹ. ಜೊತೆಗೆ ಅಚಲಾನಂದ ವಿಠಲ, ಹಯವದನಾಂಕಿತ ಕನ್ನಡ ಕೃತಿಗಳು ಕೆಲವು ಮರಾಠಿ ಅಭಂಗಗಳು. ಹಸ್ತಪ್ರತಿ ಸುಮಾರು ೨೫೦ ವರುಷ ಹಳೆಯದು.

ಹೀಗೆ ದೊರೆತ ೩೫ ಹಸ್ತಪ್ರತಿಗಳಲ್ಲಿ ಮೊದಲಿನ ೨೫ ಹಸ್ತಪ್ರ ವಿಜಾಪುರದ ಶ್ರೀ ದೇವಪ್ಪಯ್ಯ ಅಪ್ಪಯ್ಯ ಕಾಖಂಡಕಿ ಅವರಲ್ಲಿ, ಉಳಿದವ ೯ ಹಸ್ತಪ್ರತಿಗಳು ಸಿಂದಗಿಯ ಶ್ರೀ ಕೇಶವರಾವ ಬಿಂದೂರಾವ ಕುಲಕರ್ಣಿ ಕೊನೆಯ ಒಂದು ಹಸ್ತಪ್ರತಿ ವಿಜಾಪುರದ ಶ್ರೀ ನಾ.ಬ.ಜೋಶಿ ಅವರ ದೊರೆತವು.

ಅಪ್ರಕಟಿತ ಚಾರಿತ್ರಿಕ ಸಾಹಿತ್ಯ

೧. ಗುರುಮಾಲಿಕಾ:- ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ ಮರಾಠಿ ರ ಚರಿತ್ರೆಯನ್ನು 'ಹರಿಭಕ್ತಿ ವಿಜಯ' ಎಂಬ ಹೆಸರಿನಲ್ಲಿ ಮಹಿಪತಿ ರಾಬಾದಕರ ಎಂಬ ಕವಿ ಮರಾಠಿಯಲ್ಲಿ ಬರೆದು ಇಟ್ಟಿದ್ದಾನೆ. ಅದೇ ಜಾಡಿನಲ್ಲಿ ಪುರ ಜಿಲ್ಲೆಯ ಸಂತರ ಚರಿತ್ರೆಯನ್ನು 'ರುಕ್ಮಜದಾಸ' ಎಂಬ ಕವಿ ಬರೆದನೆಂದು ತ್ತದೆ. ದೊರೆತ ಹಸ್ತಪ್ರತಿಗಳಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರ ಚರಿತ್ರೆ ಹಾಗೂ ಮಹಿಪತಿರಾಯರ ಕುರಿತು ಬರೆದ ಒಂದು ಅಧ್ಯಾಯ ದೊರೆತಿದೆ. ಕೃತಿಯ ಮೊದಲ ಉಲ್ಲೇಖ ಬರುವದು ಡಾ. ಆವಳೀಕರ ಅವರು ಬರೆದ 'A pter on Mahipati dasa' ಎಂಬ ಲೇಖನದಲ್ಲಿ ಅದು 'The Journal of the nataka University Voi III No. 2 June 1959 ದ ಸಂಚಿಕೆಯಲ್ಲಿ ಟವಾಗಿದೆ. ಡಾ. ಆವಳೀಕರ ಅವರು ಹೇಳುವಂತೆ, ಅವರಿಗೆ ಶ್ರೀ ಬೆಟಗೇರಿ ಶರ್ಮರ ಮುಖಾಂತರ ದೊರೆತ ಹಸ್ತಪ್ರತಿಯಲ್ಲಿ ೨೨೧ ಓವಿಗಳಿವೆ. ಇತ್ತೀಚಿನ ದಗಳಲ್ಲಿ ಬರೆದದ್ದು ಎಂದು ಹೇಳುತ್ತಾರೆ. ತಮ್ಮ ಲೇಖನದಲ್ಲಿ ಕೆಲವು ಗಳನ್ನು ಉಲ್ಲೇಖಿಸಿದ್ದಾರೆ. ಆದ್ದರಿಂದ ಕೃತಿಯ ಪೂರ್ತಿ ಪಾಠವನ್ನು ಹುಡುಕುವ ಯತ್ನ ಮಾಡಿದಾಗ ಪುಣೆಯ ಗೋಖಲೆ ಸಂಸ್ಥೆಯಲ್ಲಿ ಸಂಶೋಧಕರಾದ ಶ್ರೀ. ಆರ್. ಕುಲಕರ್ಣಿ ಅವರ ಹತ್ತಿರ ದೊರೆಯಿತು. ಅವರು ಅಥಣಿಯ ಶ್ರೀ ಹೋಹರರಾವ ದೇಶಪಾಂಡೆ ಅವರ ಹತ್ತಿರದ ಹಸ್ತಪ್ರತಿಯಿಂದ ನಕಲು ಡಿಕೊಂಡಿದ್ದರು. ಅದರಲ್ಲೂ ೨೨೧ ಓವಿಗಳಿವೆ.//೧//

'ಶ್ರೀ ಪರಮಹಂಸ ಪರಿವ್ರಾಜಕಾಚಾರ್ಯ ಸದ್‌ಗುರು ರುಚಿರಾನಂದ ಶಿಷ್ಯೆ
ರಚಿತ ಮಹಿಪತಿಗುರು ಪರಮಹಂಸ ಭಾಸ್ಕರ ಮುದ್ರಾಧಾರಣಿ
ಬಾಥಾ ವಿಜಯಪುರ ಗಮನೋನ್ನಾಮ ಪ್ರಥಮೋಧ್ಯಾಯಾರಿತೇ।।
ಶುಭಂ ಭವತು।। ರಾಜಾಧಿರಾಜ ಸದ್‌ಗುರು ಮಹಿಪತಿರಾಜ ಸಮರ್ಥಾರಿತೇ।।
ಅಥ ದ್ವಿತೀಯೋಧ್ಯಾಯ ಪ್ರಾರಂಭ।। ಎಂದು ಕೊನೆಯಲ್ಲಿ ಹೇಳಿದೆ.

ರೆ ದ್ವಿತೀಯ ಅಥವಾ ಮುಂದಿನ ಅಧ್ಯಾಯಗಳು ದೊರೆತಿಲ್ಲ. ೨೨೧ ಓವಿಗಳಲ್ಲಿ ಹಿಪತಿರಾಯರ ಜನನ ವೃತ್ತಾಂತ, ಬಾಲ್ಯ, ಯೌವನ ಹಾಗೂ ಭಾಸ್ಕರ ಸ್ವಾಮಿಗಳ ತ್ತಿರದ ಉಪದೇಶದ ವರೆಗಿನ ಕಥೆ ಹೇಳಲಾಗಿದೆ.

ಕವಿ ತನ್ನ ಹೆಸರನ್ನು 'ರುಕ್ಮಜದಾಸ' ಎಂದು ಹೇಳಿಕೊಳ್ಳುತ್ತಾನೆ.//೨// ನೆಯಲ್ಲಿ ರುಚಿರಾನಂದ ಶಿಷ್ಯ ಎಂದೂ ಹೇಳಿಕೊಂಡಿದ್ದಾನೆ. ರುಕ್ಮ ಹಾಗೂ ಚಿರಾನಂದ ಎಂಬ ಹೆಸರುಗಳು ವಿಜಾಪುರದ ಸಮಕಾಲಿನ ಸಂತ ಕವಿ ರುಕ್ಮಾಂಗದ ಂಡಿತರನ್ನು ಕರೆಯುವ ಹೆಸರುಗಳು. ಇವರೇ ಬರೆದ ರುಕ್ಮಾಂಗದ ಪಂಡಿತ ರಿತ್ರೆಯಲ್ಲಿ ಕವಿಯ ಕಾಲವನ್ನು ಕ್ರಿ.ಶ. ೧೭೫೦ ಎಂದು ಗುರುತಿಸಬಹುದಾಗಿದೆ.

ಮಹಿಪತಿ ಸ್ತೋತ್ರ:-

ಸಂಸ್ಕೃತದಲ್ಲಿ ರಚಿಸಿದ 'ಮಹಿಪತಿ ಸ್ತೋತ್ರ'ದ ಕರ್ತೃ ಸವದತ್ತಿ ರಾಮ ಎಂ
. ಇದರ ಮೊದಲ ಉಲ್ಲೇಖ ದೊರೆಯುವುದು ಶ್ರೀ ಮ.ಶ್ರೀ. ದೇಶಪಾಂಡೆ ಅವ
ನಂದ ಸಾಮ್ರಾಜ್ಯದಲ್ಲಿ. ಸ್ತೋತ್ರ ಅಪ್ರಕಟಿತವಾಗಿದ್ದು, ಪ್ರಚಲಿತದಲ್ಲೂ ಇಲ್ಲ
ಖಂಡಕಿಯ ವಯೋವೃದ್ಧ ಡಾ. ವೆಂಕಪ್ಪಯ್ಯ ಯಾದಪ್ಪಯ್ಯ ಹರಿದಾಸ ಇವ
ನೆಯಲ್ಲಿ ಒಂದು ಪ್ರತಿ ಇದೆ. ಸ್ತೋತ್ರದ ಕೊನೆಯಲ್ಲಿ 'ಶಕೆ ೧೮೫೫ ಶ್ರಿ
ಖನಾದ ಸಂವತ್ಸರ ಜೇಷ್ಠ ಶುಕ್ಲ ೩ ಮಂದವಾಸರೇ ಸಮಾಪ್ತಂ' ಎಂದು ಬರೆದಿದ
ು ಬಹುಶ: ನಕಲು ಮಾಡಿಕೊಂಡ ದಿನವಾಗಿರಬೇಕು. ಕವಿಯ ಕಾಲವನ್ನು ಕ್ರಿ.ಶ
೧೮೮೬ ಎಂದು ಶ್ರೀ ಮ.ಶ್ರೀ ದೇಶಪಾಂಡೆ ಅವರು ಹೇಳುತ್ತಾರೆ.//೩// ನಿ
ಾಯಣಕ್ಕೆ ಅನುಕೂಲವಾಗುವಂತೆ ಸ್ತೋತ್ರವು ರಾಯರ ಸಂಕ್ಷಿಪ್ತ ಚರಿತ್ರೆ
ಾಡಗಳನ್ನು ಒಳಗೊಂಡಿದೆ.//೪//

## ೪ ಚಾರಿತ್ರಿಕ ಅಂಶಗಳನ್ನೊಳಗೊಂಡ ಪ್ರಕಟಿತ ಸಾಹಿತ್ಯ

೧. ಮಹಿಪತಿರಾಯರ ಮರಿಮಕ್ಕಳಾದ 'ಶ್ರೀಪತಿ ತನುಜ'ರು ಬರೆದ ೨೧ ನುಡಿಗ
ುಣಸಯ್ಯ ದಯ ವಾರಿಧಿ ಮಹಾರಾಯ' ಎಂಬ ಕೃತಿಯು 'ಆದಿ ಕಿರುಚರಿತ
ದು ಪರಿಗಣಿತವಾಗಿದೆ. ಅವರ ಕೀರ್ತನೆಗಳ ಸಂಗ್ರಹದಲ್ಲಿ ಪ್ರಕಟವ
ಿದೆ.//೫// 'ಶ್ರೀಪತಿ ತನುಜ'ರ ಕಾಲವನ್ನು ಕ್ರಿ.ಶ. ಸು. ೧೭೫೦ ಎಂದ
ುತಿಸಲಾಗಿದೆ.

೨. ಮುಂಬಯಿ ಇಲಾಖೆಯ ಗ್ಯಾಝಿಟಿಯರ್ ಸಂಪುಟ XXIII ರಲ್ಲಿ ಪು
೩೭ರಲ್ಲಿ ಕಾಖಂಡಕಿ ಗ್ರಾಮದ ಕುರಿತು ಸ್ಥಳ ಮಹಾತ್ಮೆಯನ್ನು ಉಲ್ಲೇಖಿಸುವಾ
ಹಿಪತಿರಾಯರ ಕುರಿತು ಸಂಕ್ಷಿಪ್ತ ಚರಿತ್ರೆ ಇದೆ.//೬// ಸಂಪುಟದ ಪ್ರಕಟ
ುಷ ಕ್ರಿ.ಶ. ೧೮೮೪.

ಮಹಿಪತಿರಾಯರ ಕುರಿತು ಪ್ರಕಟಿತ ಉಳಿದ ಸಾಹಿತ್ಯದ ವಿವರವ
ಾರಗ್ರಂಥದ ಪಟ್ಟಿಯಲ್ಲಿ ಕೊಡಲಾಗಿದೆ.

ಇಂತು ಸಂಗ್ರಹಿಸಿದ ವಿಷಯಗಳ ಆಧಾರದಿಂದ ಈಗ ವಿಷಯವ
ವೇಶಿಸುತ್ತ ಪ್ರಬಂಧದ ಮೂಲ ಅಧ್ಯಯನವನ್ನು ಮುಂದಿನ ಪುಟಗಳಲ್ಲಿ ಮಾಡ
ಯತ್ನಿಸಲಾಗಿದೆ.

★ ★ ★

## ಅಡಿ ಟಿಪ್ಪಣಿಗಳು

೧. ಅನುಬಂಧದಲ್ಲಿ ಪೂರ್ತಿ ಪಾಠವನ್ನು ಕೊಟ್ಟಿದೆ.

೨. ಗುರುಮಾಲಿಕೆ ಓದಿ ೨೨೧.

೩. ದೇಶಪಾಂಡೆ ಮನೋಹರರಾಯ: ಸ್ವಾನಂದ ಸಾಮ್ರಾಜ್ಯ ಪುಟ ೨೦-೨೧.

೪. ಅನುಬಂಧದಲ್ಲಿ ಸ್ತೋತ್ರದ ಪೂರ್ತಿಪಾಠವನ್ನು ಕೊಟ್ಟಿದೆ.

೫. ಅನುಬಂಧದಲ್ಲಿ ಆಧಿಕರುಚರಿತೆಯ ಪೂರ್ತಿ ಪಾಠವನ್ನು ಕೊಟ್ಟಿದೆ.

೬. ಅನುಬಂಧದಲ್ಲಿ ಗ್ಯಾಝಿಟಿಯರ್ ಉಲ್ಲೇಖಿದ ಪೂರ್ತಿ ಪಾಠವನ್ನು ಕೊಟ್ಟಿದೆ.

ಧ್ಯಾಯ ಮೂರು

# ವಿಷಯ ಪ್ರವೇಶ

೧ . ಸಮಕಾಲೀನ ಸ್ಥಿತಿ:-

ಮಹಿಪತಿರಾಯರು ವಿಜಾಪುರ ಜಿಲ್ಹೆಯ ಕಾಖಂಡಕಿ ಗ್ರಾಮದಲ್ಲಿ ನೆಲೆಸಿದವರು. ಧ್ಯಯುಗೀನ ಕಾಲದ ಮುಸಲ್ಮಾನರ ಆರಸೊತ್ತಿಗೆಯಲ್ಲಿ ಬಾಳಿದವರು. ಅವರ ಸುಕು ಹಾಗೂ ಕೃತಿಗಳ ಅವಲೋಕನದ ಮೊದಲು ಅವರು ಬಾಳಿ ಬದುಕಿದ ಅಂದಿನ ೀಶ -ಕಾಲದ ಪರಿಸ್ಥಿತಿಯನ್ನು ಪರಿಶೀಲಿಸುವದು ಉಚಿತವೆನಿಸುತ್ತದೆ. ಯಾಕೆಂದರೆ, ಾಹಿತಿ ಪರಿಸರದ ಕೂಸು. ಕಾಲ, ದೇಶಗಳಿಗನುಗುಣವಾಗಿಯೇ ಸಾಹಿತ್ಯ ರ್ಮಾಣಗೊಳ್ಳುತ್ತದೆ. ಕಾಲಿದಾಸನ ಪ್ರತಿಭೆಯ ಲೇಖಕ ಈ ಶತಮಾನದಲ್ಲಿ ನಿಸಿದರೂ ಆತ ಮತ್ತೆ 'ಶಾಕುಂತಲ' 'ಮೇಘದೂತ'ಗಳನ್ನು ಬರೆಯಲಾರ. ಗಾರ್ಕಿ, ಾಲಸ್ಟಾಯ್, ಪಾಸ್ಟರನಾಕ್ ಅವರು ರಶಿಯಾದಲ್ಲಿ ಹುಟ್ಟದೆ. ಇಂಗ್ಲಂಡ್, ಮೇರಿಕೆಗಳಲ್ಲಿ ಜನಿಸಿದ್ದರೆ, ಅವರಿಂದ ಈಗ ಬಂದಂಥ ಸಾಹಿತ್ಯ ಷ್ಟಿಯಾಗುತ್ತಿರಲಿಲ್ಲ. ಹರಿಹರನೇ ಹತ್ತನೆಯ ಶತಮಾನದಲ್ಲಿದ್ದರೆ ಅಂಥ ಗಳೆಯನ್ನು ಬರೆಯುತ್ತಿದ್ದನೆ? ಕವಿ ಜನಿಸಿದ ದೇಶ, ಆತ ಬಾಳಿದ ಕಾಲ - ಇವು ವನ ಸಾಹಿತ್ಯದ ವಸ್ತು ಮತ್ತು ಅದರ ಸ್ವರೂಪವನ್ನು ನಿರ್ಧರಿಸುವಲ್ಲಿ ಮುಖ್ಯ ಾರಣವಾಗುತ್ತದೆ''//೧// ಎಂದು ಡಾ. ಕೆ.ಎ. ಕಿತ್ತೂರ ಅವರು ಹೇಳುವ ಾತುಗಳನ್ನು ಗಮನಿಸಬೇಕು. ಮಹಿಪತಿರಾಯರು ಕನ್ನಡದಲ್ಲಿ ಬರೆದ 'ದ್ವೈತ ಅದ್ವೈತ ಎಂದು ಹೊಡೆದಾಡದಿರೋ ಪ್ರಾಣಿ' ಎಂಬ ಪದ, ಹಾಗೂ ಶ್ರಭಾಷೆಯಲ್ಲಿ ಬರೆದ 'ಸಮಜೋ ಭಾಯಿ ಸಕುನಾಚಾರೋ ಖುದಾಕಾ। ತೆಲಗು ನ್ನಡ ತುರುಕಾರೆ ವಂದೇ ಸುಖ।। ಎಂದು ನಾಲ್ಕು ಭಾಷೆಗಳನ್ನು ಬಳಸಿ ಪದ್ಯಗಳನ್ನು ರೆಯಬೇಕಾದರೆ, ಅವರು ಬಾಳಿ -ಬದುಕಿದ ದೇಶದ ಪರಿಸ್ಥಿತಿಯನ್ನು ತಿಳಿಯಬೇಕು. ಾಜಕೀಯ ಪರಿಸ್ಥಿತಿ ಹೇಗಿತ್ತು? ಸಾಮಾಜಿಕ ಬದುಕು ಹೇಗಿತ್ತು? ಧಾರ್ಮಿಕ ಆಚಾರ ವಿಚಾರಗಳು ಹೇಗಿದ್ದವು? ಭಾಷೆ ಯಾವುದಿತ್ತು? ಸಾಹಿತ್ಯ ನಿರ್ಮಿತಿಯ ರಿಚಯವೂ ಅಗತ್ಯವಾಗುತ್ತದೆ. ಒಂದೊಂದನ್ನಾಗಿ ಇಲ್ಲಿ ಸಂಕ್ಷಿಪ್ತವಾ ೋಡಬಹುದು.

.೧.೧. ರಾಜಕೀಯ:

೧೪ನೆಯ ಶತಮಾನದ ಪ್ರಾರಂಭದಲ್ಲಿ ದಕ್ಷಿಣಭಾರತದಲ್ಲಿಯ ದೇವಗಿರಿಯ ಯಾದವರನ್ನು ಮುಸಲ್ಮಾನರು ಸೋಲಿಸಿ, ರಾಜ್ಯವನ್ನು ದೆಹಲಿಯ ಸಾಮ್ರಾಜ್ಯ ೀರಿಸಿದರು. ಈ ಯಾದವರ ರಾಜ್ಯದಲ್ಲಿದ್ದ ತರ್ದವಾಡಿ-೧೦೦೦ ದ ವಿಜಾಪುರ ಪ್ರದೇಶಕ್ಕೆ ಮಲಿಕ -ಕಾಫಿರನ ಮಗ ಕರೀಮುದ್ದೀನನು ಪ್ರಥಮ ರಾಜ್ಯಪಾಲನಾ ಎಂದು ಕ್ರಿ.ಶ. ೧೩೧೨ ರಲ್ಲಿ ಅಧಿಕಾರ ವಹಿಸಿಕೊಂಡನು. ಮುಂದಿನ ದಿನಗಳ

ದಕ್ಷಿಣ ಭಾರತದ ತುಂಬ ಮುಸಲ್ಮಾನರ ಪ್ರವೇಶವಾಗಿ ಮಹ್ಮದ ತುಘಲಕ
ಹೊತ್ತಿಗೆ ಇಡೀ ದಕ್ಷಿಣ ಭಾರತವೆಲ್ಲ ಮುಸ್ಲಿಮರ ಆಧಿಪತ್ಯಕ್ಕೆ ಒಳಪಟ್ಟಿತು. ಕೆಲವ
ದಿನಗಳಲ್ಲಿ ಆವನ ಅರಾಜಕತೆಯಿಂದ ಸರದಾರರು ಬಂಡೆದ್ದು ತಂತಮ್ಮ
ಸ್ವಾತಂತ್ರ್ಯವನ್ನು ಸಾರಹತ್ತಿದರು. ದಕ್ಷಿಣದಲ್ಲಿ ಹೀಗೆ ಪ್ರಥಮವಾಗಿ ತನ್ನ
ಸ್ವಾತಂತ್ರ್ಯವನ್ನು ಸಾರಿ ಕ್ರಿ.ಶ. ೧೩೩೫ ರಲ್ಲಿ ಜಲಾಲುದ್ದೀನ ಅಶನಖಾನನ
ಮಧುರೆಯಲ್ಲಿ ತನ್ನ ಸ್ವತಂತ್ರ ಮುಸ್ಲೀಮ ರಾಜ್ಯವನ್ನು ಸ್ಥಾಪಿಸಿದನು. ಅದುವೆ ದಕ್ಷಿಣ
ಭಾರತದ ಪ್ರಥಮ ಮುಸ್ಲಿಮ ರಾಜ್ಯ. ಈ ಹೊಸ ರಾಜ್ಯವು ಘಟ್ಟದಲ್ಲಿಯ
ಹಿಂದುಗಳಿಗೆ ತಮ್ಮ ಅಸ್ತಿತ್ವವನ್ನು ಯೋಚಿಸಲು ಒಂದು ಹೊಸ ಸೂಚನೆಯಾಯಿತು
ಈಗ ಹಿಂದುಗಳು ಕೊನೆಯವರೆಗೂ ಮುಸಲ್ಮಾನರ ಅಧೀನದಲ್ಲಿರಬೇಕು, ಇಲ್ಲವೆ
ಅವರ ಅಧಿಕಾರವನ್ನು ಕಿತ್ತೊಗೆದು ಸ್ವತಂತ್ರ ಹಿಂದೂ ರಾಜ್ಯವನ್ನು ಕಟ್ಟಬೇಕು.
ಇವೆರಡರಲ್ಲಿಯ ಒಂದರ ನಿರ್ಣಯ ಆಗಲೇಬೇಕಾಯಿತು. ಅದರ ಪರಿಣಾಮವಾಗಿಯೇ
ಒಂದು ವರುಷ ಅಂದರೆ ಕ್ರಿ.ಶ. ೧೩೩೬ ರಲ್ಲಿ ಕಂಪಲಿಯ ರಾಜ್ಯಪಾಲ ಸಂಗಮ
ವಂಶದ ಹರಿಹರನು ತನ್ನ ಸ್ವಾತಂತ್ರ್ಯವನ್ನು ಘೋಷಿಸಿ ತುಂಗಭದ್ರೆಯ ತಟದಲ್ಲಿ
ಒಂದು ಹೊಸ ಹಿಂದೂ ರಾಜ್ಯವನ್ನು ಸ್ಥಾಪಿಸಿದನು. ಅದುವೆ ವಿಜಯನಗರ
ರಾಜ್ಯವೆನಿಸಿತು. ಹೀಗೆ ದಕ್ಷಿಣದಲ್ಲಿಯ ಮಾಬಾರದಲ್ಲಿಯ ಮುಸಲ್ಮಾನರ ರಾಜ್ಯ,
ಮಧ್ಯದಲ್ಲಿಯ ಹಿಂದುಗಳ ವಿಜಯನಗರ ರಾಜ್ಯ, ದೇವಗಿರಿಯಲ್ಲಿ ಇನ್ನೊಂದು
ಹೊಸ ರಾಜ್ಯಕ್ಕೆ ನಾಂದಿಯಾಯಿತು. ಮುಂದಿನ ಹತ್ತು ವರುಷಗಳಲ್ಲಿ ಕ್ರಿ.ಶ. ೧೩೪೭
ರಲ್ಲಿ ದೇವಗಿರಿಯೂ ಸ್ವತಂತ್ರವಾಗಿ ತನ್ನ ಹೊಸ ರಾಜಧಾನಿ ಕಲಬುರ್ಗಿಯಲ್ಲಿ
ಬಹಮನಿ ರಾಜ್ಯವೆಂದು ಕರೆಸಿಕೊಂಡಿತು. ಈ ಬಹಮನಿ ರಾಜ್ಯದಲ್ಲಿ ವಿಜಾಪೂರವೂ
ಒಂದು ಸುಬೆಯಾಗಿ ವಿಭಾಗಮಟ್ಟದ ರಾಜಧಾನಿಯಾಯಿತು. ನೂರೈವತ್ತು
ವರುಷಗಳ ಆಡಳಿತದಲ್ಲಿ ಬಹಮನಿ ರಾಜ್ಯವು ಅನೇಕ ಏರಿಳಿತಗಳನ್ನು ಕಂಡಿತು.

೧೫ನೆಯ ಶತಮಾನದ ಉತ್ತರಾರ್ಧದಲ್ಲಿ ಬಹಮನಿ ರಾಜ್ಯವು 'ಬೀದರ'
ರಾಜಧಾನಿಯಿಂದ ನಡೆಯುತ್ತಿತ್ತು. ಧೀರ-ಶೂರ-ಮುತ್ಸದ್ಧಿ ಮಹಮೂದ ಗವಾನ
ಪ್ರಧಾನಮಂತ್ರಿಯಾಗಿದ್ದನು. ಆಂತರಿಕ ತಿಕ್ಕಾಟದಲ್ಲಿ ಆತನನ್ನು ಕ್ರಿ.ಶ. ೧೪೮೧ರಲ್ಲಿ
ಕೊಂದರು. ಈ ವಧೆಯ ನಂತರ ಬಹಮನಿಯ ರಾಜ್ಯದಲ್ಲಿ ತುಂಬ ಗಲಭೆಯಾಯಿತು.
ವಿಕೋಪಕ್ಕೆ ಹೋಗಿ ಅಹ್ಮದನಗರದ ಭೈರಿ ನಿಜಾಮಶಹನು ಬಂಡೆದ್ದು,
ಬಹಮನಿ ರಾಜ್ಯದಿಂದ ಹೊರಬಿದ್ದು ಅಹ್ಮದನಗರದಲ್ಲಿ ತನ್ನ ಸ್ವಾತಂತ್ರ್ಯವನ್ನು
ಘೋಷಿಸಿದನು. ಅಂದು ವಿಜಾಪುರದಲ್ಲಿ ರಾಜ್ಯಪಾಲನಾಗಿದ್ದ ತುರ್ಕ ವಂಶದ
ಯೂಸುಫಖಾನನು ಕೂಡ, ನಿಜಾಮಶಾಹನ ದಾರಿಯಲ್ಲಿ ನಡೆದು ಕ್ರಿ.ಶ. ೧೪೮೯ರಲ್ಲಿ
ಸ್ವಾತಂತ್ರ್ಯವನ್ನು ಸಾರಿದನು. ವಿಜಾಪುರದಲ್ಲಿ ಹೊಸ ಆದಿಲಶಾಹಿ ರಾಜ್ಯವನ್ನು
ಸ್ಥಾಪಿಸಿದನು.

ರಾಜ್ಯಪಾಲ ಯುಸುಫಖಾನನು ರಾಜನಾಗಿ ಯುಸುಫ ಆದಿಲಖಾನನಾದ ಮೇ
ಹ್ಯಾದ್ರಿ ಪರ್ವತದ ಒಂದು ಕೋಟೆಯಲ್ಲಿ ಸ್ವತಂತ್ರವಾಗಿ ರಾಜ್ಯ ನಿರ್ವಹಿಸು
ಮುಕುಂದರಾವ ಎಂಬ ಮರಾಠಾ ಸರದಾರನನ್ನು ಸೋಲಿಸಿ, ಅವನ ತಂಗಿಯ
ಮದುವೆಯಾದನೆಂದು ಖ್ಯಾತ ಇತಿಹಾಸಕಾರ 'ಫಿರಿಶ್ತಾ' ಹೇಳುತ್ತಾನೆ. ಆತ ೧೬
ತಮಾನದ ಅಂತ್ಯದಲ್ಲಿದ್ದ ವಿಜಾಪುರ ಆಸ್ಥಾನದ ಇತಿಹಾಸಕಾರ. ಯುಸುಫ ಹಾ
ಮುಕುಂದರಾಯನ ತಂಗಿ, ಇವರಿಬ್ಬರ ಸಂತತಿ ಮುಂದಿನ ದಿನಗಳಲ್ಲಿ ಸುಮ
ರಡು ಶತಕಗಳಷ್ಟು ಕಾಲ ವಿಜಾಪುರ ರಾಜಧಾನಿಯಿಂದ ಆದಿಲ್‌ಶಾಹಿ ರಾಜ್ಯ
ಳಿತು.

ಯುಸುಫಖಾನನು ವಿಜಾಪುರದಲ್ಲಿ ತನ್ನ ಸ್ವತಂತ್ರ ರಾಜ್ಯವನ್ನು ಪ್ರಾರಂಭಿ
ಹೊತ್ತಿಗೆ ತುಂಗಭದ್ರೆಯ ದಡದಲ್ಲಿಯ ವಿಜಯನಗರ ಸಾಮ್ರಾಜ್ಯವು
ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಿತು. ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿ
ಂಗಗಳಲ್ಲಿ ತನ್ನದೇ ಆದ ವೈಶಿಷ್ಟ್ಯಗಳೊಂದಿಗೆ ಮೆರೆಯುತ್ತಿತ್ತು. ಸಾಹಿತ್ಯ, ಸಂಗಿ
ಲ್ಪಕಲೆಗಳು ಕೂಡ ಅಭಿವೃದ್ಧಿ ಹೊಂದಿದ್ದವು. ವಿಜಾಪುರ ರಾಜ್ಯವು ಸ್ವತ
ಜ್ಯವಾಗಿದ್ದರೂ ಸಾಮ್ರಾಜ್ಯವಾಗಿರಲಿಲ್ಲ. ಅದೊಂದು ಪುಟ್ಟ ಸಂಸ್ಥಾನದಷ್ಟಿ
ಯುಸುಫ, ಆತನ ಮಗ ಇಬ್ರಾಹಿಮ, ಮೊಮ್ಮಗ ಇಸ್ಮಾಯಿಲರು ಆಗೀಗ ಪರ
ಹೀ ರಾಜರುಗಳೊಂದಿಗೆ ಹತ್ತೆಂಟು ಹಳ್ಳಿಗಳಿಗಾಗಿ ಬಡಿದಾಡುವ
ವಾಗಲಾದರೊಮ್ಮೆ ವಿಜಯನಗರದವರೊಡನೆ ಕಾಲು- ಕೆದರಿ ಯುದ್ಧಮಾ
ಂದು ಕೋಟೆಯನ್ನು ಗೆಲ್ಲುವಲ್ಲಿ ಅಥವಾ ಸೋಲುವಲ್ಲಿ ತೃಪ್ತಿ ಪಡುತ್ತಿದ್ದ
ಾಗ ಸಿಕ್ಕಷ್ಟನ್ನು ದೋಚಿಕೊಂಡು ಬಂದು ವಿಜಾಪುರದ ಭಂಡಾರವ
ಂಬಿಕೊಳ್ಳುತ್ತಿದ್ದರು.

ಮುಕ್ಕಾಲು ಶತಮಾನ ಹೀಗೆ ಕಂಟುತ್ತ ಸಾಗಿದ್ದ ಆದಿಲಶಾಹಿ ರಾಜ್ಯದ ದೆ
ದದ್ದು ಕ್ರಿ.ಶ. ೧೫೬೫ರ ರಕ್ಕಸಗಿ -ತಂಗಡಗಿ ಕಾಳಗದಲ್ಲಿ! ವಿಜಾಪು
ಲ್ಕನೆಯ (ವಾಸ್ತವದಲ್ಲಿ ಐದನೆಯ) ಸುಲ್ತಾನ ಮೊದಲನೆಯ ಅಲಿ ಆದಿಲಶ
ಲದಲ್ಲಿ ಎಲ್ಲ ಶಾಹಿ ಮುಸಲ್ಮಾನ ರಾಜರುಗಳು ಒಂದಾಗಿ ವಿಜಯನ
ಜ್ಯವನ್ನು ಸೋಲಿಸಿದರು. ಅಗಣಿತ ಸಂಪತ್ತು, ಅಪಾರ ಪ್ರದೇಶ ದೊರೆತಮೇ
ಜಾಪುರದ ಆದಿಲಶಾಹಿ ರಾಜ್ಯದ ಉಚ್ಛ್ರಾಯಕಾಲ ಪ್ರಾರಂಭವಾಯಿ
ಜಾಪುರ ನಗರ ಹಾಗೂ ರಾಜ್ಯವು ಅದ್ಭುತ ರೀತಿಯಲ್ಲಿ ಪ್ರಗತಿಯನ್ನು ಹೊಂದಿ
ಜಧಾನಿ ವಿಜಾಪುರ ಪಟ್ಟಣವು ಜಗತ್ತಿನ ಕೆಲವೇ ಪ್ರೇಕ್ಷಣೀಯ ನಗರಗಳ
ದಾಯಿತು.

ಮುಂದಿನ ನೂರಾಇಪ್ಪತ್ತು ವರುಷಗಳಲ್ಲಿ ವಿಜಾಪುರವನ್ನು ಆಳಿದವರು ನಾಲ್ವ

ಸುಲ್ತಾನರು. ಅವರಲ್ಲಿ ಮೊದಲನೆಯ ಅಲಿ ಆದಿಲಶಹನ ಮಗ ಎರಡನೇ ಇಬ್ರಾಹಿಮ ಆದಿಲಶಹ (೧೫೮೦-೧೬೨೫), ಅವನ ಮಗ ಮಹ್ಮದ ಆದಿಲಶ (೧೬೨೬-೧೬೫೫). ಇವರಿಬ್ಬರ ಕಾಲದಲ್ಲಿ ಆದಿಲಶಾಹಿ ವೈಭ ತುತ್ತತುದಿಯನ್ನು ಮುಟ್ಟಿತು. ಕ್ರಿ.ಶ. ೧೬೫೬ ರಲ್ಲಿ ಮಹ್ಮದ ಆದಿಲ್‌ಶಹ ತೀರಿಕೊಂಡಾಗ ದಕ್ಷಿಣೋತ್ತರ ತಂಜಾವೂರದಿಂದ ಮುಂಬಯಿ, ಹಾಗ ಪಶ್ಚಿಮದಿಂದ ಪೂರ್ವಕ್ಕೆ ಗೋವೆಯಿಂದ ಕೃಷ್ಣೆ ತುಂಗೆಯರ ಸಂಗಮದವರೆಗ ಆದಿಲಶಾಹಿ ರಾಜ್ಯ ಹಬ್ಬಿಕೊಂಡಿತ್ತು. ಮಹ್ಮದನ ಮಗ ಎರಡನೆಯ ಅ ಆದಿಲಶಹನ ಕಾಲದಲ್ಲಿ ರಾಜ್ಯವು ಅವನತಿಗೆ ಪ್ರಾರಂಭವಾಗಿ ಅವನ ಮಗ ಸಿಕಂದ ಆದಿಲಶಹನ ಕಾಲದಲ್ಲಿ ಕ್ರಿ.ಶ. ೧೬೮೬ರಲ್ಲಿ ವಿಜಾಪುರವು ಔರಂಗಜೇಬ ಕೈವಶವಾಯಿತು. ಮೊಗಲ ರಾಜ್ಯಕ್ಕೆ ಸೇರಿಕೊಂಡಿತು. ಹೀಗೆ ಪ್ರಸ್ತುತ ಅಧ್ಯಯನದ ಪೂರ್ತಿಕಾಲ, ವಿಜಾಪುರ ಹಾಗೂ ಸುತ್ತಲಿನ ಪ್ರದೇಶವು ರಾಜಕೀಯವಾಗಿ ಆದಿಲಶಾಹಿ ಹಾಗೂ ಮೊಗಲ ಸಾಮ್ರಾಜ್ಯಗಳಲ್ಲಿ ಸೇರಿತ್ತು.

.೧.೨:- ಸಾಮಾಜಿಕ:-

ದೇವಗಿರಿಯ ಯಾದವರ ರಾಜ್ಯವು ಮುಸಲ್ಮಾನರ ರಾಜ್ಯಕ್ಕೆ ಅಧೀನವಾದಾಗ ಶ್ಚಿಮ ಘಟ್ಟಗಳಲ್ಲಿಯ ಕೆಲವು ಮರಾಠಾ ಸರದಾರರು ತಮ್ಮಷ್ಟಕ್ಕೆ ತಾವು ಸ್ವತಂತ್ರ್ಯವನ್ನು ಸಾರಿಕೊಂಡು ಸೀಮಿತ ಪ್ರದೇಶಗಳ ಅಧಿಪತಿಗಳಾಗಿದ್ದರು. ಮುಂದೆ ಹಮನಿ ಹಾಗೂ ಶಾಹಿ ರಾಜ್ಯಗಳು ಹುಟ್ಟಿಕೊಂಡಾಗ ಅವರಿಗೆ ಸ್ವಾತಂತ್ರ್ಯ ಳಿಯಲಿಲ್ಲ. ಈ ಮರಾಠಿ ಸರದಾರರು ಅಲ್ಲಿ ಇಲ್ಲಿ ಆಶ್ರಯ ಪಡೆಯಬೇಕಾಯಿತು. ತ್ತರದ ದಾಳಿಗಳನ್ನು ಎದುರಿಸಲು ದಕ್ಷಿಣದ ಮುಸಲ್ಮಾನರಿಗೆ ಈ ಮರಾಠಿ ದಾರರ ಸಹಾಯದ ಅಗತ್ಯವೂ ಇದ್ದಿತು. ಅಂತೆಯೇ ಆದಿಲಶಾಹಿ ರಾಜ್ಯದಲ್ಲಿ ರಾಠಿ ಸರದಾರರು ರಾಜ್ಯದ ವಿವಿಧ ಆಡಳಿತಗಳಲ್ಲಿ ಸಂಬಂಧಪಟ್ಟವರಾಗಿದ್ದರು. ಗೆ ನಿಖರವಾಗಿ ಹೇಳುವದಾದರೆ ಉತ್ತರದಲ್ಲಿ ಮೊಗಲರಿಗೆ ರಜಪೂತರು ಇದ್ದಂತೆ ಷ್ಟು ಕಾಲ ಆದಿಲಶಾಹಿಗಳಿಗೆ ಮರಾಠಿಗರು ಬೆನ್ನೆಲುಬಾಗಿದ್ದರು. ಶಿವಾಜಿಯ ಕ್ಯಾಯ ಕಾಲದವರೆಗೂ ಮರಾಠಿಗರ ಈ ನಂಬಿಗಸ್ಥ ಸಹಾಯ ಆದಿಲಶಾಹಿಗಳಿಗೆ ದನ್ನು ಕಾಣುತ್ತೇವೆ. ತಮ್ಮ ರಾಜ್ಯದ ಅಸ್ತಿತ್ವಕ್ಕಾಗಿ ಈ ಸಹಾಯ ಶ್ಯವೆಂಬುದನ್ನು ಆದಿಲಶಾಹಿಗಳೂ ಕಂಡುಕೊಂಡಿದ್ದರು. ಆದಿಲಶಾಹಿ ರಾಜ್ಯದ ಕ ಯುಸುಫಖಾನನು ಮರಾಠಿ ಸರದಾರ ಮುಕುಂದರಾಯನ ತಂಗಿಯನ್ನು ವೆಯಾಗಿದ್ದನಷ್ಟೆ. ಉತ್ತರದಲ್ಲಿ ಮೊಗಲರ ಸಾಮ್ರಾಜ್ಯ ಸ್ಥಾಪನೆಯ ದಲ್ಲಿಯೇ ಇಂಥ ಶರೀರ ಸಂಬಂಧವು ಬೆಳೆದಿತ್ತು ಎಂಬುದು ರ್ಹವಾಗಿದೆ. ಆಮೇಲಿನ ವರುಷಗಳಲ್ಲಿ ಮೊಗಲರ ಅಕಬರ ಬಾದಶಹನು ಸಂಪ್ರದಾಯವನ್ನು ಮುಂದುವರೆಸಿ ರಜಪೂತ ಕನ್ಯೆಗಳನ್ನು

ವೆಯಾದುದನ್ನು ಇಲ್ಲಿ ನೆನೆಯಬಹುದು. ಈ ದೇಶದಲ್ಲಿ ತಮ್ಮ ಅಸ್ತಿತ್ವವನ್ನು
ಕೊಳ್ಳಲು ಇಂಥ ಮದುವೆಗಳು ತುಂಬ ಸಹಾಯವಾಗುತ್ತವೆಂಬುದನ್ನು
ಘಖಾನನು ಎಲ್ಲರಿಗಿಂತ ಮೊದಲಿಗೆಯೇ ಕಂಡುಕೊಂಡಿದ್ದನು. ಹೀಗಾಗಿ
ನ ದಿನಗಳಲ್ಲಿ ಮರಾಠಿಗರು ಸ್ವ-ಇಚ್ಛೆಯಿಂದ ರಾಜ್ಯಾಡಳಿತದಲ್ಲಿ
ಗೊಂಡರು. ರಾಜ್ಯವು ಸುವ್ಯವಸ್ಥಿತವಾಗಿ ನಡೆವಲ್ಲಿ ಸಹಾಯರಾದರು. ಅದಕ್ಕೆ
ಪೂರ್ವದ 'ನಾ ವಿಷ್ಣು: ಪೃಥ್ವೀಪತಿ' ಎಂಬ ನಂಬಿಕೆಯೂ
ವಾಗಿರಬೇಕು. ರಾಜನು ಯಾವನೇ ಆಗಿರಲಿ ಸಿಂಹಾಸನವೇರಿದರೆ ಸಾಕು
ಲ್ಲಿ ವಿಷ್ಣುವಿನ ಅಂಶವಿರುತ್ತದೆಂಬ ನಂಬಿಗೆಯು ಹಿಂದುಗಳು ಮುಸ್ಲೀಮ
ಹರನ್ನು ಒಪ್ಪಿಕೊಳ್ಳಲು ಹಾಗೂ ರಾಜ್ಯಕ್ಕೆ ವಿಶ್ವಾಸದಿಂದ ಇರಲು
ವಾಗಿರಬೇಕು. ಇದು ಮರಾಠಾ ಸರದಾರರ ಹಾಗೂ ಮುಗ್ಧ ಜನಸಾಮಾನ್ಯರ
ವಾದರೆ, ಆಳಲು ಬಂದವರಿಗೆ ಸ್ಥಳೀಯರ ಸಹಕಾರವು ತಮ್ಮ ರಾಜ್ಯ
ಕೊಂಡು ಬರಲು ಅವಶ್ಯವಾಗಿತ್ತು. ಅಂತೆಯೇ ಅನ್ಯ ಭಾಷೆಯ ಧರ್ಮದ
ಜನಾಂಗ ಇಲ್ಲಿ ಕಾಲಿಟ್ಟಾಗ ಇಲ್ಲಿಯ ಭಾಷೆ ಹಾಗೂ ಧರ್ಮದೊಂದಿಗೆ
ಕೊಂಡು ಹೋಗುವುದನ್ನು ಅವರು ಕಲಿಯಬೇಕಾಯಿತು. ಚಾಣಾಕ್ಷ
ಘಖಾನನು ಮುಕುಂದರಾಯನ ತಂಗಿಯನ್ನು ಮದುವೆಯಾದನಲ್ಲದೆ ತನ್ನ
ದಲ್ಲಿ ಹಾಗೂ ಆಯಕಟ್ಟಿನ ಸ್ಥಳಗಳಲ್ಲಿ ಹಿಂದುಗಳಿಗೆ ಅನೇಕ ಮಹತ್ವದ
ನನ್ನು ಕೊಟ್ಟಿದ್ದನ್ನು ಕಾಣುತ್ತೇವೆ. ಅನೇಕ ಮರಾಠಿ ಮನೆತನಗಳು
ಹಿ ರಾಜ್ಯದಲ್ಲಿ ಅಧಿಕಾರ ಹಾಗೂ ಪ್ರಭಾವಗಳನ್ನು ಹೊಂದಿದವರಾಗಿದ್ದರು.
ಳಲ್ಲಿ ಹೆಸರಾಂತ ಮರಾಠಿ ಸರದಾರ, ಶಿವಾಜಿಯ ತಂದೆ, ಶಹಾಜಿ ಭೋಸಲೆ
ಬ್ಬನಾಗಿದ್ದಾನೆ. ಮಹ್ಮದ ಆದಿಲಶಹನ ಕಾಲದಲ್ಲಿ ವಿಜಾಪುರಕ್ಕೆ ಬಂದ ಈತ
ಗನೇ ಮೇಲಕ್ಕೇರಿದನಲ್ಲದೆ, ದಕ್ಷಿಣದ ವಿಜಯಗಳಲ್ಲಿ ಈತನ ಪಾತ್ರವು
ಮುಖ್ಯವಾಗಿತ್ತು. ಕೊನೆಯಲ್ಲಿ ದಕ್ಷಿಣದ ಸುಬೇದಾರನಾಗಿಯೂ ಇದ್ದನು.
ಫಲ್ಟನದ ನಿಂಬಾಳಕರ, ಮುಧೋಳದ ಘೋರಪಡೆ, ಮೋರೆ, ಮಾನೆ,
ರಾಸ್ತೆ, ದಫ್ತರೀ, ಸಾವಂತ ಹಾಗೂ ದೇಶಮುಖರ ಹೆಸರುಗಳು ಆದಿಲಶಾಹಿ
ಪ್ರಾರಂಭದಿಂದಲೇ ಕೇಳಿಬರುತ್ತವೆ.

ಗೆ ಅಧಿಕಾರದಲ್ಲಿ ಒಂದೆಡೆ ಮರಾಠಿ ಸರದಾರರು ಸಹಾಯರಾಗಿದ್ದರೆ
ದಲ್ಲಿ ಸ್ಥಳೀಯ ಕನ್ನಡ, ಮರಾಠಿ ಹಾಗೂ ತೆಲಗು ಭಾಷೆಯ ಹಿಂದುಗಳು
ಖ್ಯ ಪಾತ್ರಗಳನ್ನು ವಹಿಸಿದ್ದರು. ಗ್ರಾಮಾಂತರ ಜನತೆಯ ಸಂಪರ್ಕ
ು ಸ್ಥಳೀಯ ಭಾಷೆಯ ಜನರ ಸಹಕಾರವೂ ಆಳುವವರಿಗೆ ಅವಶ್ಯವಾಗಿದ್ದಿತು.
ವಸೂಲಿಯಲ್ಲಿ ಸಹಾಯಕರಾಗಿದ್ದರು. ಇವರುಗಳಲ್ಲಿ ಜಾಣರಾದವರು

ರಾಜಧಾನಿಗೆ ಬಂದು ವಕೀಲರಾಗಿಯೋ, ಇಲ್ಲವೆ ರಾಯಭಾರಿಗಳಾಗಿಯೋ ಕಾಂ
ನಿರ್ವಹಿಸಿದ್ದನ್ನು ಕಾಣುತ್ತೇವೆ. ವಿಶೇಷತ: ವಸೂಲಿಯ ಲೆಕ್ಕ ಪತ್ರಗಳನ್ನು ಇಡುಃ
ಹಾಗೂ ತಪಶೀಲುಗಳನ್ನು ಬರೆಯುವಲ್ಲಿ ನುರಿತವರಾದದ್ದರಿಂದ ಇವರಲ್ಲಿಯ ಅ
ಜನರು ರಾಜ್ಯಮಟ್ಟದ, ಪ್ರಾಂತ, ವಿಭಾಗ ಮಟ್ಟದ ಖಜಾನೆಗಳಲ್ಲಿ ಹಾ
ಕಂದಾಯ ಇಲಾಖೆಗಳಲ್ಲಿ ಮೇಲಿನ ಸ್ಥಾನವನ್ನು ಹೊಂದಿದವರಾಗಿದ್ದರು. ಇ
ಉನ್ನತ ಮಟ್ಟದ ಸ್ಥಾನವನ್ನು ಪಡೆದವರಲ್ಲಿ, ಮೂಲತ: ಐಗಳಿಯ ಕುಲಕರ್ಣಿಗಳ
ಮಹಿಪತಿರಾಯರು ಖಜಾನೆಯ ಅಧಿಕಾರಿಗಳಾಗಿದ್ದರೆಂದೂ ನಂಬಲಾಗಿದೆ. ಅ
ಮುಂದೆ ಕಾಖಂಡಕಿಯ ಮಹಿಪತಿದಾಯರೆಂದು ಪ್ರಸಿದ್ಧರಾದವರು.

೩.೧.೩: ಧಾರ್ಮಿಕ:

ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿದರೆ ಆದಿಲಶಾ
ರಾಜ್ಯದ ಆಡಳಿತದಲ್ಲಿ ಕೇವಲ ಮುಸಲ್ಮಾನರ ಕೈವಾಡವಿರಲಿಲ್ಲ ಎಂಬು
ಗೊತ್ತಾಗದೆ ಇರದು. ಹಿಂದುಗಳು ಕೂಡ ಪ್ರಭಾವಯುತರಾಗಿದ್ದರು. ಆದ್ದರಿ
ಆಳುವ ಸುಲ್ತಾನರಿಗೆ ಮತ್ತು ಮುಸಲ್ಮಾನ ಅಧಿಕಾರಿಗಳಿಗೆ ತಙ
ಜಾತ್ಯಂಧತೆಯನ್ನಾಗಲೀ, ಧಾರ್ಮಿಕ ಅಸಹಿಷ್ಣುತೆಯನ್ನಾಗಲೀ ನೇರವ
ತೋರಿಸಲು ಅವಕಾಶಗಳು ಕಡಿಮೆಯಾಗಿದ್ದವು. ಮಹ್ಮದ ಆದಿಲಶಹನ ಹೊರತ
ಉಳಿದ ಎಲ್ಲ ಆರು ಜನ ಬಾದಶಹರು 'ಹಿಂದು' ಧರ್ಮದ ಕುರಿ
ಸಹಾನುಭೂತಿಯುಳ್ಳವರಾಗಿದ್ದರು. ಮೊದಲನೆಯ ಇಬ್ರಾಹಿಮ ಆದಿಲಶಹ
(೧೫೩೪-೧೫೫೭) ಕಟ್ಟಾ ಸುನ್ನಿ ಪಂಥದವನಾಗಿದ್ದರೂ ಹಿಂದುಗಳ ಕುರಿ
ಒಲವನ್ನು ತೋರಿಸುತ್ತಿದ್ದನು. ಪರದೇಶೀ ಮುಸಲ್ಮಾನರಿಗಿಂತ ಸ್ಥಳೀ
ಹಿಂದುಗಳನ್ನು ಮೆಚ್ಚಿದ್ದನು. ಅವನ ಮಗ ಮೊದಲನೆಯ ಅಲಿ ಆದಿಲಶಹ
(೧೫೫೭-೧೫೮೯) ಹಿಂದು ಸನ್ಯಾಸಿಗಳನ್ನು ಮತ್ತು ಪಂಡಿತರ
ಆದರಿಸುತ್ತಿದ್ದನು. ಅವರೊಂದಿಗೆ ಆಧ್ಯಾತ್ಮದ ವಿಷಯಗಳಲ್ಲಿ ಚಚ
ಮಾಡುತ್ತಿದ್ದನು. ಅವರಿಗೆ ಉದಾರ ದೇಣಿಗೆಗಳನ್ನಿತ್ತ ಉಲ್ಲೇಖಗಳ
ದೊರೆಯುತ್ತವೆ. ಎರಡನೆಯ ಇಬ್ರಾಹಿಮ ಆದಿಲಶಹನ (೧೫೮೦-೧೬೨೬
ಕುರಿತಂತೂ, ಆತ ಹಿಂದು ಧರ್ಮವನ್ನು ಸ್ವೀಕರಿಸಿದ್ದನೆಂಬ ವದಂತಿಗಳೇ ಹುಟ್ಟಿದ್ದ
ಆತ ಹಿಂದುಗಳ ವಿದ್ಯಾದೇವತೆಯಾದ ಸರಸ್ವತಿಯ ಆರಾಧಕನಾಗಿದ್ದನ
ಅರಮನೆಯಲ್ಲಿ ಸರಸ್ವತಿಯ ವಿಗ್ರಹವನ್ನು ಪೂಜಿಸುತ್ತಿದ್ದನೆಂದೂ ಹೇಳಲಾಗುತ್ತ
ಅವನಿಗೆ ಜಗದ್ಗುರು ಎಂಬ ಉಪಾಧಿಯೂ ಇದ್ದಿತು.

ಆದಿಲಶಾಹಿ ರಾಜ್ಯದಲ್ಲಿಯ ಅನೇಕ ಹಿಂದು ಗುಡಿ ಗುಂಡಾರಗಳಿಗೆ ಬಾದಶಹ
ಉದಾರವಾಗಿ ನೀಡಿದ ದತ್ತಿಗಳ ನಿದರ್ಶನಗಳು ಇಂದಿಗೂ ಹೇರಳವಾ
ದೊರೆಯುತ್ತವೆ. ಹಿಂದೂ ಸರದಾರರು ನೀಡಿದ ದಾನ -ಧರ್ಮಗಳನ್ನು ಕೂ
ಬಾದಶಹರು ಊರ್ಜಿತಗೊಳಿಸಿದ ಉದಾಹರಣೆಗಳೂ ಇವೆ. ಪಂಡಿತ ಮಾನ್ಯರ

ಪುರೋಹಿತರು, ಜೋಶಿ, ದೀಕ್ಷಿತರೇ ಮೊದಲಾದ ಹಿಂದುಗಳಿಗೆ ತಮ್ಮ ಧಾರ್ಮಿ
ಧಿಗಳನ್ನು ಮುಂದುವರಿಸಿಕೊಂಡು ಹೋಗಲು ಸಮ್ಮತಿಯನ್ನಿತ್ತಿದ್ದರು. ಅವ
ಶನುವಂಶಿಕ ಹಕ್ಕುಗಳನ್ನು ಭೂಮಿ -ಸೀಮೆಗಳನ್ನು ಮುಂದುವರಿಸಿದ್ದರು. ಆದಿಲಶಾ
ಬಾದಶಹರು ನೀಡಿದ ಅನೇಕ ಫರ್ಮಾನುಗಳು ಇಂದಿಗೂ ಅಲ್ಲಿ ಇ
ದೊರೆಯುತ್ತವೆ. ಕೊಂಕಣದ ಜೋಯಿಸರೊಬ್ಬರಿಗೆ ಅವರ ಜೋಯಿಸತನವನ
ಮುಂದುವರಿಸಿಕೊಂಡು ಹೋಗಲು ವಿಜಾಪುರದ ಬಾದಶಹನು ವಾರ್ಷಿ
ಶನುದಾನವನ್ನು ನೀಡಿದ ಉಲ್ಲೇಖ ಸಿಗುತ್ತದೆ. ಅದರಂತೆ ಸಿಂದಗಿಂ
ಭೀಮಾಶಂಕರರ ಮಠಕ್ಕೆ ಹಾಕಿಕೊಟ್ಟ ಸನದು ಇಂದಿಗೂ ಮಠದಲ್ಲಿ ಉಪಲಬ್ಧವಿದೆ.

ರಾಜಕೀಯ ಹಾಗೂ ಸಾಮಾಜಿಕ ಸ್ತರಗಳು ಬದಲಾದಂತೆ, ಧಾರ್ಮಿಕ ಸ್ತರಗ
ಬದಲಾವಣೆಗೆ ಒಳಪಡಲಿಲ್ಲ. ಅದಕ್ಕೆ ಬಹುಶಃ ಇಲ್ಲಿಯ ಬಾದಶಹರಲ್ಲಿದ್ದ ತಮ
ಇಸ್ಲಾಮ ಮತದ ಆಂತರಿಕ (ಶಿಯಾ -ಸುನ್ನಿ) ಭಿನ್ನಾಭಿಪ್ರಾಯಗಳ
ಕಾರಣವಿದ್ದೀತು. ಇಲ್ಲಿ ನಡೆದ ಧಾರ್ಮಿಕ ಬಂಡಾಯಗಳು ಸಾಮಾನ್ಯವಾ
ಶಿಯಾ-ಸುನ್ನಿ ಪಂಥಗಳ ಮಧ್ಯ ಎಂದು ಇತಿಹಾಸದ ಪುಟಗಳು ಹೇಳುತ್ತವೆಯೆ
ಹೊರತು ಹಿಂದು-ಮುಸ್ಲಿಮರ ನಡುವೆ ನಡೆದ ಅಂಥ ಯಾವ ಮಹತ್ವ
ಬಂಡಾಯಗಳ ಉಲ್ಲೇಖಗಳು ಸಿಕ್ಕದಿರುವುದು ಗಮನಾರ್ಹವಾಗಿದೆ. ಮುಸ್ಲಿಮ
ಇಲ್ಲಿ ಬಂದದ್ದು ಮುಖ್ಯವಾಗಿ ರಾಜ್ಯ ಸ್ಥಾಪನೆಯ ಉದ್ದೇಶದಿಂದ ಅನಂತರ ಅವ
ರಾಜ್ಯ ಸ್ಥಿರವಾದಾಗ ಅವರ ಆಶ್ರಯವನ್ನು ಅರಿಸಿಕೊಂಡು ಬಂದ ಇತರರು ವಿಶೇಷ
ಇಸ್ಲಾಮ ಧರ್ಮಪ್ರಸಾರಕರು ಅವಕಾಶ ಸಿಕ್ಕಾಗಲೆಲ್ಲ ತಮ್ಮ ಧರ್ಮದ ಪ್ರಸಾರವನ
ಮಾಡದೆಯೂ ಇರಲಿಲ್ಲ. ಅದರ ಪರಿಣಾಮವಾಗಿ ಬಹುತೇಕ ಕೆಳವರ್ಗದ ಜ
ಮತಾಂತರಗೊಂಡ ಉಲ್ಲೇಖಗಳು ದೊರೆಯುತ್ತವೆ.-ಅವನ್ನು ತಪ್ಪಿಸಲು ಇಲ್ಲಿಂ
ಹಿಂದುಗಳು ಹೆಣಗಾಡಿದ ಸಂದರ್ಭಗಳೂ ಉಂಟು.

ವಾಸ್ತವದಲ್ಲಿ ಇಲ್ಲಿ ಮುಸ್ಲಿಮರು ಬರುವ ಮೊದಲು ಶೈವ ವೈಷ್ಣವ ಧರ್ಮಗ
ಊರ್ಜಿತ ಸ್ಥಿತಿಯಲ್ಲಿದ್ದವು. ಮುಸ್ಲೀಮರ ಜೊತೆಗೆ ಇಸ್ಲಾಮ ಧರ್ಮ
ಪ್ರವೇಶವಾಯಿತು. ಮರಾಠಿಗರ ಪ್ರಭಾವದಿಂದ ಅವರ 'ಜ್ಞಾನೇಶ್ವರಿ' ಇಲ್ಲಿ
ಬಂದಿತು. ಜ್ಞಾನೇಶ್ವರಿಯ ಆಗಮನದಿಂದ ಇಲ್ಲಿ 'ನಾಥ' ಸಂಪ್ರದಾಯಕ್ಕೆ ನೆ
ಸಿಕ್ಕಿತು. ಕಾರಂಜಾದಲ್ಲಿ ಹುಟ್ಟಿ ಬೆಳೆದ ನರಸಿಂಹ ಸರಸ್ವತಿಗಳು ಗಾಣಗಾಪುರದ
ನೆಲೆನಿಂತಿದ್ದರು. ಅವರ ಪ್ರಭಾವದಿಂದ ವಿಜಾಪುರದ ಅರಮನೆಯ ಆವರಣದ
ನರಸಿಂಹ ದತ್ತ ಮಂದಿರವು ನಿಂತಿದ್ದು ಕೂಡ ಈ ಅವಧಿಯಲ್ಲಿಯೆ. ನಾ
ಸಂಪ್ರದಾಯದ ಒಂದು ಪ್ರತ್ಯೇಕ ಮಠವು ಸಿಂದಗಿಯಲ್ಲಿ ಭೀಮಾಶಂಕರಮಠ ಎಂ
ಪ್ರಾರಂಭವಾದದ್ದು ಕೂಡ ಈ ಸಮಯದಲ್ಲಿಯೇ ಎಂಬುದನ್ನು ನೆನೆಯಬೇಕು. ಹೀ
ಹಿಂದೂ ಧರ್ಮಕ್ಕೆ ಹೆಚ್ಚಿನ ಅವಕಾಶಗಳು ಇರಲಿಲ್ಲವೆಂದು ತಿಳಿದರೂ ಅದು

ಜೀವಂತವಾಗಿದ್ದಿತು ಮತ್ತು ಆಗೀಗ ಸಮಯ ದೊರೆತಾಗ ಪ್ರಭಾವೀ ಹಿಂದು
ಮುಖಾಂತರ ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಲು ಪ್ರಯತ್ನಿಸುತ್ತಿತ್ತೆಂ
ಹೇಳಬಹುದು. ಇದಕ್ಕೆ ಪ್ರತಿಯಾಗಿ ರಾಜ್ಯ ಮುಸಲ್ಮಾನರದ್ದು, ಆಳುವವ
ಮುಸಲ್ಮಾನರು ಆಳುವವನ ಧರ್ಮದ ಉಳಿವು ಹಾಗೂ ಸಾಧ್ಯವಾದಾಗ ಅ
ಪ್ರಸಾರ ಸಹಜ ಸಮ್ಮತವಾಗಿತ್ತು. ರಾಜಕೀಯ ಶಾಂತಿ ನೆಲೆಸಿದಾಗ ಜಗತ್ತಿನ ವಿ
ಮೂಲೆಗಳಿಂದ ಇಸ್ಲಾಮ ಧರ್ಮ ಪ್ರಸಾರಕ್ಕಾಗಿ ಮೌಲ್ವಿಗಳು, ಕಾಜಿಗಳು ಹಾ
ಸೂಫಿ ಸಾಧುಸಂತರು ಅಗಾಧ ಪ್ರಮಾಣದಲ್ಲಿ ಇಲ್ಲಿಗೆ ಬಂದುದನ್ನೂ ಕಾಣುತ್ತೇ
ಭಕ್ತಿ ಮಾರ್ಗದ ಸೂಫಿ ಸಂತರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿ ಬಂದು ನೆಲೆಸಿ
ಮಹತ್ವದ್ದಾಗಿದೆ. ಒಂದು ಅಂದಾಜಿನಂತೆ, ಜಗತ್ತಿನ ಯಾವುದೇ ಭಾಗದಲ್ಲಿ ಒಂ
ಧರ್ಮಕ್ಕೆ ಸಂಬಂಧ ಪಟ್ಟ ಅತಿ ಹೆಚ್ಚು ಸಾಧು -ಸಂತರು ವಾಸಿಸುತ್ತಿದ್ದು
ಉಲ್ಲೇಖಗಳಿಲ್ಲ. ಆದರೆ ವಿಜಾಪುರ ನಗರ ಒಂದರಲ್ಲಿಯೇ ಸುಮಾರು ಮುನ್ನೂ
ನಲವತ್ತು ಸೂಫಿ ಸಾಧು ಸಂತರ ಸಮಾಧಿಗಳಿವೆ. ಅಧಿಕ ಸಂಖ್ಯೆಯ ಸೂಫಿ ಸಂ
ಆಗಮನಕ್ಕೆ ಬಹುಶಃ ಇಲ್ಲಿಯ ಧಾರ್ಮಿಕ ಶಾಂತಿಯೂ ಕಾರಣವಾಗಿದ್ದೀತು. ಜೊ
ಅವರ ಸಾಧನೆಯ ಕೊನೆಯ ಹಂತ ಬೇರೆಯಾಗಿದ್ದರೂ ಮಾರ್ಗ ಸಾಮ್ಯದಿಂದಲೆ
ಏನೋ ಸ್ಥಳೀಯರ ಜೊತೆಗೆ ಹೊಂದಿಕೊಳ್ಳಲು ಸಾಧ್ಯವಾಗಿರಬೇಕು. ಅಂತ
ಇಂದಿಗೂ ಹಲವಾರು ಸೂಫಿ ಸಂತರ ಸಮಾಧಿಗಳಿಗೆ ಹಿಂದುಗ
ನಡೆದುಕೊಳ್ಳುವದನ್ನು ಕಾಣುತ್ತೇವೆ. ಹಿಂದುಗಳ ಮಂದಿರಗಳಿಗೆ ಮುಸ್ಲಿಮ
ನಡೆದುಕೊಳ್ಳುವ ಉಲ್ಲೇಖಗಳೂ ದೊರೆಯುತ್ತವೆ.//೨//

'ಕಾಯಕವೇ ಕೈಲಾಸ' ಎಂದು ಹೇಳುವ ಬಸವಣ್ಣನವರ ವೀರಶೈವ ಧ
ಮತ್ತು ಅವರ ವಚನಗಳು, ಅನಂತರ ಬಂದ ದಾಸ ಸಾಹಿತ್ಯ ವಿಶೇಷತಃ ಪುರಂ
ಕನಕದಾಸರ ಕೀರ್ತನೆಗಳು ಇಲ್ಲಿಯ ಜನರಿಗೆ ಪರಿಚಿತವೇ ಆಗಿದ್ದವು. ಅಂತಲೇ ಸ
ಪಂಥವು ಇಲ್ಲಿ ಅಷ್ಟೊಂದು ವಿರೋಧವನ್ನು ಎದುರಿಸಲಿಲ್ಲ. ಪರ
ಅನ್ಯೋನ್ಯವಾಗಿದ್ದ ಹೇರಳ ಉದಾಹರಣೆಗಳು ದೊರೆಯುತ್ತವೆ. ಇಷ್ಟಾಗಿಯ
ಆಳರಸರ ಮೇಲೆ ಆಗುವ ಹಿಂದೂ ಧರ್ಮದ ಪ್ರಭಾವವನ್ನು ಕಡಿಮೆಗೊಳಿಸ
ಸ್ಥಳೀಯ ಮುಸ್ಲಿಮರು ಪ್ರಯತ್ನಮಾಡಿದ ಉದಾಹರಣೆಗಳೂ ಸಿಗುತ್ತವೆ. ಅದಕ
ಹಿಂದು -ಮುಸ್ಲಿಮರ ಮಧ್ಯೆ ಪವಾಡಗಳ ಪೈಪೋಟಿ ನಡೆದದ್ದನ್ನೂ ಕಾಣುತ್ತೇ
ಮುಸ್ಲೀಮರ ಹಸ್ತಪ್ರತಿಗಳಲ್ಲಿ ಬರುವ ಅಂಥ ಒಂದು ದೃಷ್ಟಾಂತ ಹೀಗಿದೆ.

ವಿಜಾಪುರದ ರುಕ್ಮಾಂಗದ ಪಂಡಿತರು ಎರಡನೆಯ ಇಬ್ರಾಹಿಮ ಆದಿಲಶ
ಮೇಲೆ ಪ್ರಭಾವ ಬೀರಿ, ಆತ ಅರಮನೆಯಲ್ಲಿ ಸರಸ್ವತಿಯ ಪೂಜೆಯನ್ನು ಮಾಡುವ
ಮನ ಒಲಿಸಿದರು. ಎರಡನೆಯ ಇಬ್ರಾಹಿಮನು ಸರಸ್ವತಿಯ ಕುರಿತು ತನ್ನ ಏ
ಕಾವ್ಯ 'ಕಿತಾಬ-ಇ-ನೌರಸ'ದ ಮೊದಲ ಪದ್ಯದಲ್ಲಿಯೇ ಅವಳನ್ನು ಸ್ತುತಿಸಿದ್ದಾನೆ.

ನೌರಸ ಸೂರ ಜುಗ ಜಗಜ್ಯೋತಿ ಆ ನುಡ ಸರ್ವಗುಣಿ
ಯೋ ಸತತ ಸರಸುತೀ ಮಾತಾ ಇಬರಾಹೀಮ ಪರಸಾದ ಭಈ ದೂನೀ
||೦||

ು ಸರಸ್ವತಿಯನ್ನು ತಾಯಿ ಎಂದು ಕರೆದಿದ್ದಾನೆ. ಆವನ ಈ ಸರಸ್ವತಿಯ
ಕ್ಷನ್ನು ಬಿಡಿಸಲು ಮುಸ್ಲಿಮರು ಅಜಮೇರದಿಂದ ಅಬುಲ್ ಹಸನ್ ಕಾದಿರಿ
ರನ್ನು ಬರಮಾಡಿಕೊಂಡ ಕಥೆಯೂ ಇದೆ.//೩//

ವಾಸ್ತವದಲ್ಲಿ ಈ ಕಾಲದ ಇಲ್ಲಿಯ ಹಿಂದುಗಳಿಗೆ ಧಾರ್ಮಿಕವಾಗಿ ಬಹು
ಕ್ಷ ಪರಿಸ್ಥಿತಿ ಇತ್ತು. ಇಂಥ ಪರಿಸ್ಥಿತಿಯಲ್ಲಿ ಕೂಡ ಹಿಂದು ಸಾಧು-ಸಂತರು,
ರು, ಯೋಗಿಗಳು ತಾವು ಬದುಕಿ ಉಳಿದು ಹಿಂದೂ ಧರ್ಮವನ್ನು ಜೀವಂತವಾಗಿ
ವಲ್ಲಿ ಸಫಲರಾಗಿದ್ದಾರೆ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಜೊತೆಗೆ
ಸ್ಲೀಮರನ್ನು ತಮ್ಮತ್ತ ಆಕರ್ಷಿಸುವಲ್ಲಿ ಆಗೀಗ ಯಶಸ್ಸನ್ನು ಕಂಡಿದ್ದಾರೆ
ುದೂ ಗಮನಾರ್ಹವಾಗಿದೆ. ಧಾರ್ಮಿಕರಂಗದಲ್ಲಿ ಕ್ರಾಂತಿಯಾಗಿರದಿದ್ದರೂ ಈ
ುಯವನ್ನು ಒಂದು ರೀತಿಯಲ್ಲಿ ಸಮತೋಲವಾಗಿ ಇಡುವಲ್ಲಿ
ರಾಗಿದ್ದಾರೆ. ಅದಕ್ಕಾಗಿ ಆವರು ಬಳಸಿದ ದಾರಿ ಈ ಮೊದಲಿನ ಭಕ್ತಿ ಮಾರ್ಗವೇ
ತ್ತು. ಹಿಂದಿನ ಶರಣರ -ದಾಸರ ಪರಂಪರೆಯನ್ನು ಕಾಯ್ದುಕೊಂಡು ಅದು
ದುವರೆಯುವಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರು, ಕಾಖಂಡಕಿಯ
ಪತಿರಾಯರು, ಆವರ ಮಕ್ಕಳು, ಮೊಮ್ಮಕ್ಕಳು, ಸಿಂದಗಿಯ ಭೀಮಾಶಂಕರರು
ತ್ತ ಆವರ ಮಕ್ಕಳು, ಆಗರಖೇಡದ ಆಧ್ವರು, ಗಲಗಲಿಯ ಅವ್ವನವರು ಮತ್ತು
ಾಗಬಾಯಿ ಮೊದಲಾದ ಸ್ತ್ರೀಪುರುಷರೆಲ್ಲ ಕಾರಣರಾಗಿದ್ದಾರೆ. ಈ
ಬ್ಬರೂ ವೈಯಕ್ತಿಕವಾಗಿ ತಮ್ಮ ಸಾಧನೆಯನ್ನು ಮುಂದುವರೆಸಿಕೊಂಡು
ಾಮಾನ್ಯರಲ್ಲಿ ಧರ್ಮ ಜಾಗೃತಿಯನ್ನು ಉಂಟು ಮಾಡಿದರು.

.೪: ಭಾಷೆ ಮತ್ತು ಸಾಹಿತ್ಯ:

ವಿಜಾಪುರ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶವು ಎಂದಿನಿಂದಲೂ
ಟಕದ ಒಂದು ಭಾಗವಾಗಿದೆ. ಆದ್ದರಿಂದ ಭಾಷೆ 'ಕನ್ನಡ' ವಾಗಿರುವುದೂ ಅಷ್ಟೇ
ವಾಗಿದೆ. ಈ ಪ್ರದೇಶದಲ್ಲಿ ಹುಟ್ಟಿದ ಅನೇಕ ಕವಿಗಳು, ವಚನಕಾರರು ಶ್ರೇಷ್ಠ
ತ್ಯವನ್ನು ನಿರ್ಮಿಸಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಆದಿಲಶಾಹಿ
ದ ಕವಿ ರನ್ನ, ನಾಗಚಂದ್ರ (ಅಭಿನವ ಪಂಪ), ಭಕ್ತಿ ಭಂಡಾರಿ ಬಸವಣ್ಣ
ನಲಾದವರು ಇಲ್ಲಿಯ ಕೆಲವು ಶ್ರೇಷ್ಠರು.

ಆದಿಲಶಾಹಿ ರಾಜ್ಯ ಸ್ಥಾಪನೆಯೊಂದಿಗೆ ಪರ್ಶಿಯನ್ ಭಾಷೆ ಇಲ್ಲಿಯ
ಭಾಷೆಯಾಯಿತು. ಆಗ ಒಂದು ವಿದೇಶೀ ಭಾಷೆಗೆ ಇಲ್ಲಿ ಉತ್ತೇಜನ ದೊರಕಿತು.

ಪರ್ಶಿಯನ್ ಭಾಷೆ ರಾಜಭಾಷೆಯಾಗಿ ಆಸ್ಥಾನದಲ್ಲಿ ಅದಕ್ಕೆ ಆಶ್ರಯ ಹಾಗ
ಮನ್ನಣೆ ದೊರೆತರೂ ಆ ಭಾಷೆಯನ್ನು ಬಳಸಲು ಇಲ್ಲಿ ಸಾಕಷ್ಟು ಜನರು ಇರಲಿಲ್ಲ
ಪರದೇಶಗಳಿಂದ ಆಮದು ಮಾಡಿಕೊಂಡ ಕೆಲವೇ ಜನರು ಅದನ
ಉಪಯೋಗಿಸುತ್ತಿದ್ದರು. ಸೈನ್ಯದಲ್ಲಿ ಹಾಗೂ ಆಡಳಿತದ ವಿವಿಧ ಹುದ್ದೆಗಳ
ಮತಾಂತರಗೊಂಡ ಉತ್ತರ ಹಿಂದೂಸ್ತಾನದ ಹಾಗೂ ಸ್ಥಳಿಯರು ಸೇರಿಕೊಂಡಾ
ಅವರಿಗೆ ಪರ್ಶಿಯನ್ ಆಗಲಿ ಅರೇಬಿಕ್ ಭಾಷೆಯಾಗಲಿ ಬರುತ್ತಿರಲಿಲ್ಲ. ಉತ್ತ
ಭಾರತದಿಂದ ಬಂದವರು ತಾವು ಬಳಸುತ್ತಿದ್ದ ದೆಹಲಿ -ಡೆಹರಾಡೂನಗಳ ಸುತ್ತಮು
ಪ್ರಚಲಿತದಲ್ಲಿದ್ದ 'ಖಡೀಬೋಲಿ' ಭಾಷೆಯನ್ನು ಬಳಸುತ್ತಿದ್ದರು.

ಯುಸುಫನ ಹೆಂಡತಿ ಮರಾಠಿ ಸರದಾರನ ತಂಗಿಯಾದದ್ದರಿಂದ ಜನಾನಾದ
ಮರಾಠಿ ಭಾಷೆಯು ಪ್ರವೇಶವಾಗಿತ್ತು. ಹೀಗೆ ಮೂಲವಾಗಿ ಇದ್ದ ಕನ್ನ
ಪ್ರದೇಶದಲ್ಲಿ, ಪರ್ಶಿಯನ್, ಖಡೀಬೋಲಿ, ಹಾಗೂ ಮರಾಠಿ ಮೂರು ಭಾಷೆಗ
ಆಗಮನವಾಯಿತು. ರಕ್ಕಸಗಿ-ತಂಗಡಗಿ ಕಾಳಗದಲ್ಲಿ ವಿಜಯನಗರ ಸಾಮ್ರಾಜ್ಯ
ಸೋಲನ್ನು ಅನುಭವಿಸಿದಾಗ ಕೆಲವು ತೆಲಗು ಭಾಷೆಯ ಪ್ರದೇಶಗಳೂ ಆದಿಲಶಾ
ರಾಜ್ಯಕ್ಕೆ ಸೇರಿಕೊಂಡವು. ಈಗ ರಾಜಧಾನಿಯಲ್ಲಿ ತೆಲಗು ಭಾಷೆಯ ಪ್ರವೇಶವ
ಆಯಿತು.

ಆದಿಲಶಾಹಿ ಸೈನ್ಯದಲ್ಲಿದ್ದ ಪರ್ಶಿಯನ್, ಖಡೀಬೋಲಿ, ಮರಾಠಿ ಕನ್ನ
ಹಾಗೂ ತೆಲಗು ಸೈನಿಕರು ಪರಸ್ಪರ ಸಂಭಾಷಣೆಯಲ್ಲಿ ಹರಕು -ಮುರುಕಾಗಿ ಎ
ಭಾಷೆಗಳನ್ನು ಬಳಸುತ್ತಿದ್ದರು. ಈ ಎಲ್ಲ ಭಾಷೆಗಳ ಸಮ್ಮಿಲನದಿಂದ ಕೆಲ
ದಿನಗಳಲ್ಲಿ ಒಂದು ಹೊಸಭಾಷೆಯೇ ರೂಪುಗೊಂಡಿತು. ದಕ್ಷಿಣ ಭಾರತದಲ್ಲಿಯೆ
ಉಪಯೋಗಿಸುತ್ತಿದ್ದ ಈ ಭಾಷೆಗೆ ಉತ್ತರದವರು 'ದಖಣಿ' ಎಂದರು. ಸೈನ್ಯದ
ಉಪಯೋಗಿಸುತ್ತಿದ್ದುದರಿಂದ ಕೆಲವರು ಇದನ್ನು 'ಜಬಾನೆ -ಉರ್ದು-ಮೊಅಲ್ಲಾ
ಎಂದರು. ಹಲವಾರು ವರುಷಗಳ ನಂತರ ಈ ಹೆಸರು ತುಂಬ ಉದ್ದವಾಯಿತೆಂ
ಮೊದಲಿನ ಹಾಗೂ ಕೊನೆಯ ಶಬ್ದಗಳನ್ನು ಕತ್ತರಿಸಿ ಕೇವಲ 'ಉರ್ದು' ಎಂ
ಕರೆಯಹತ್ತಿದರು. ಹದಿನೆಂಟು ಹತ್ತೊಂಬತ್ತನೆಯ ಶತಮಾನದಲ್ಲಿ ಈ ದಖ
ಅಥವಾ ಉರ್ದು ಭಾಷೆಯ ಮೇಲೆ ಪರ್ಶಿಯನ್ ಪ್ರಭಾವ ಹೆಚ್ಚಾದಾಗ ಅ
ಇಂದಿನ 'ಉರ್ದು' ಎನಿಸಿಕೊಂಡಿದ್ದರೆ ಸಂಸ್ಕೃತ ಹಾಗೂ ಆರ್ಯ ಭಾಷೆಗಳ ಪ್ರಭಾ
ಅಧಿಕವಾಗಿದ್ದ ಭಾಷೆ 'ಹಿಂದವಿ' ಅಥವಾ 'ಹಿಂದಿ' ಎಂದು ಗುರುತಿಸಿಕೊಂಡಿದೆ ಎಂ
ವಿದ್ವಾಂಸರ ಮತವಾಗಿದೆ.

ಭಾಷೆಗಳ ಕತೆ ಹೀಗಾದರೆ ಸಾಹಿತ್ಯದ ವಾರ್ತೆ ಇನ್ನೂ ರೋಚಕವಾಗಿದೆ

ವಿಜಾಪುರದ ಬಾದಶಹರೆಲ್ಲರೂ ಅಕ್ಷರಪ್ರಿಯರು. ಆದ್ದರಿಂದ ಇಲ್ಲಿ ಬಳಸು
ಬಹುತೇಕ ಭಾಷೆಗಳೆಲ್ಲದರಲ್ಲೂ ಅಪರೂಪದ ಸಾಹಿತ್ಯ ನಿರ್ಮಾಣವಾಗಿದೆ.

ಯುಸುಫ ಖಾನ ಸ್ವತಃ ಕಾವ್ಯ ಪ್ರೇಮಿ. ಕೃತಿಗಳನ್ನು ರಚಿಸುತ್ತಿದ್ದನೆ
ಇತಿಹಾಸಕಾರ ಫಿರಿಸ್ತಾ ಹೇಳುತ್ತಾನೆ. ಮತ್ತು ಪರ್ಶಿಯದಿಂದ ಹೆಸರಾಂತ
ಸಾಹಿತಿಗಳನ್ನು ವಿಜಾಪುರಕ್ಕೆ ಕರೆಸಿಕೊಂಡಿದ್ದನು. ಅದರಂತೆ ಅವನ
ಇಸ್ಮಾಯಿಲ್ ಕೂಡ ಕಾವ್ಯ ಸಂಗೀತಗಳಲ್ಲಿ ನಿರತನಾಗಿರುತ್ತಿದ್ದನು. ಆಧ್ಯಾತ್ಮ
ಆಕರ್ಷಿತನಾಗಿದ್ದ ಮೊದಲನೆಯ ಅಲಿ ಆದಿಲಶಹನು ಸನ್ಯಾಸಿಯಂತೆ
ತೊಡುತ್ತಿದ್ದ. ಹಿಂದು -ಮುಸ್ಲಿಮ ಸಂತರೊಂದಿಗೆ ಚರ್ಚೆಯಲ್ಲಿ ನಿರತನಾಗಿರುತ್ತಿ
ಆವನ ಹೆಂಡತಿ ಚಾಂದಬೀಬಿ ಸುಪ್ರಸಿದ್ಧ ಕಲಾವಿದೆ, ಕವಯಿತ್ರಿ.

ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನದಲ್ಲಿ ಮುನ್ನೂರು ಜನ ಹಿ
ಕವಿ -ಸಾಹಿತಿ- ಸಂಗೀತಗಾರರು ಇದ್ದರೆಂದು ಪ್ರತೀತಿ ಇದೆ. ಆತ ಸ್ವತಃ ಕೃತಿ
ಅವನ ಕಾವ್ಯ 'ಕಿತಾಬ-ಇ-ನೌರಸ' ಉತ್ತರಾದಿ ಸಂಗೀತವನ್ನು ಪರಿಚಯಿ
ಹಿಂದು ದೇವ -ದೇವತೆಗಳ ಆವಾಹನೆಯನ್ನು ಮಾಡಿದ ದಖಣಿ ಭಾಷೆಯ

ಮೊದಲನೆಯ ಇಬ್ರಾಹಿಮ್ ಆದಿಲಶಹನ (೧೫೩೪-೧೫೫೭) ಕಾಲದಿಂ
ದಖಣಿ ಭಾಷೆಗೆ ರಾಜಾಶ್ರಯ ದೊರೆಯಿತು. ಆತನ ಕಾಲದಲ್ಲಿ ಧ
ಪ್ರಚಾರಕ್ಕೆಂದೇ ಬಂದ ಶಾಹ ಮಿರಾಂಜಿಯು ದಖಣಿ ಭಾಷೆಯಲ್ಲಿ ಅನೇಕ ಕೃತಿಗ
ರಚಿಸಿದ್ದಾನೆ. ಅವುಗಳಲ್ಲಿ ಅವನ 'ಖುಶನಾಮಾ' ಎಂಬ ಕಾವ್ಯ ಬಹು ಪ್ರಸಿದ್ಧವಾ
ಇಲ್ಲಿಯ 'ಖುಶ್', ನಿಷ್ಕಾಮ, ವಿರಕ್ತೆ ಹಾಗೂ ದೈವಭಕ್ತ ತರುಣ ಯುವತಿ
ಹೆಸರು. ಖುಶ್ ಎಂದರೆ ಸಂತೋಷ, ಸಂತುಷ್ಟಿ ಎಂಬ ಅರ್ಥವೂ ಉಂಟು.
ಖುಶ್‌ದ ಇತಿಹಾಸವೇ 'ಖುಶ್‌ನಾಮಾ' ಕಾವ್ಯದ ವಿಷಯ. ಕಾವ್ಯದಲ್ಲಿ ಒಂದೆಡೆ
ಜಗದ ವಿಷಮತೆಯನ್ನು ವೈಚಿತ್ರ್ಯವನ್ನು ಚಿತ್ರಿಸುತ್ತ ಕವಿ ಹೀಗೆ ಹೇಳುತ್ತಾನೆ

'ಏಕಸ ಮಾಟೀ ಮೋಲೀ ದೇವೆ ಏಕಸ ಮಾಟೀ ಬಾಜ!
ಕೀತೋ ಭೀಕ ಮಾಂಗಾವೆ ಕೀತೋ ದೇವೇ ರಾಜ।।

ಎಂದು ಮುಂದುವರಿಸುತ್ತ ಈ ಒಂದೇ ನೆಲದಲ್ಲಿ ಹುಟ್ಟಿದ ಒಬ್ಬ ಭಿಕ್ಷೆ ಬೇಡುತ
ಇನ್ನೊಬ್ಬ ರಾಜ್ಯವಾಳುತ್ತಾನೆ. ಎಂದು ಅನೇಕ ಉದಾಹರಣೆಗಳನ್ನು ಕೊಡುತ್ತ
ವಿಷಮತೆಯನ್ನು ದೇವರೇ ನಿರ್ಮಾಣ ಮಾಡಿರುವನೆಂದೂ ಆತನ ಶಕ್ತಿ 'ಕರ್ತುವ
ಕರ್ತುಮನ್ಯಥಾ' ಕರ್ತುಮ್' ಎಂಬಂತೆ ಇದೆ ಎಂದು ಹೇಳುತ್ತಾನೆ. ಈ ಭಾ
ಭಾರತೀಯ ತತ್ವಜ್ಞಾನದ ತಳಹದಿಯಿಂದ ಬಂದುದೆಂದು ಬೇರೆ ಹೇಳಬೇಕಾಗಿಲ್ಲ.

ಪರ್ಶಿಯನ್ ಆಸ್ಥಾನದ ಭಾಷೆಯಾದದ್ದರಿಂದ ಅದು ಬೆಳೆಯುವುದು ಸಜವಾಗಿತ್ತು. ಪರ್ಶಿಯನ್ ಭಾಷೆಯಲ್ಲಿ ಜಾಗತಿಕ ಮಟ್ಟದ ಗದ್ಯ ಪದ್ಯ ಸಾಹಿತ್ಯವು ಲ್ಲಿ ನಿರ್ಮಾಣವಾಗಿದೆ. ಮಹ್ಮದ ಕಾಸೀಮ ಫಿರಿಶ್ತಾನ ಇತಿಹಾಸ ಗ್ರಂಥ ಽಲ್ಶನೇ-ಇಬ್ರಾಹಿಮೀ' ಇತಿಹಾಸದಷ್ಟೇ ಶ್ರೇಷ್ಠ ಮಟ್ಟದ ಗದ್ಯಗ್ರಂಥವೆಂದು ಂದಿಗೂ ಪರಿಗಣಿತವಾಗಿದೆ. ಅವನ ಸಮಕಾಲೀನ ಶ್ರೇಷ್ಠ ಕವಿ 'ಜುಹುರಿ'ಯ ಕಾವ್ಯ ಂದಿಗೂ ವಿಶ್ವದಾದ್ಯಂತ ಅಭ್ಯಾಸಗೊಳ್ಳುತ್ತಲಿದೆ. ಜೊತೆಗೆ ಇಲ್ಲಿಯೇ ಹುಟ್ಟಿ ಳೆದು ಪುಷ್ಟಿಗೊಂಡ ದಖಣಿ ಭಾಷೆಯಲ್ಲಿ ನೂರಾರು ಕೃತಿಗಳು ಇಲ್ಲಿ ರಚಿತವಾಗಿವೆ. ಧ್ಯಾತ್ಮ -ಇತಿಹಾಸ -ಶೃಂಗಾರ ಕೃತಿಗಳು ದಖಣಿ ಭಾಷೆಯಲ್ಲಿ ಇಲ್ಲಿ ಚಿತಗೊಂಡಷ್ಟು ಬೇರೆಲ್ಲೂ ದೊರೆಯುವುದಿಲ್ಲ. ಈ ಮೊದಲೇ ಹೇಳಿದ ಽಹಮಿರಾಂಜಿಯ 'ಖುಶ್‌ನಾಮಾ'ದ ಜೊತೆಗೆ ಮುಲ್ಲಾ ನುಸ್ರತಿಯ 'ಗುಲ್ಶನೇ ಇಶ್ಕ' ಹಾಗೂ 'ಸಿಕಂದರನಾಮಾ', ಅಬ್ದುಲ್ಲಾ ದೇಹಲವಿಯ 'ಇಬ್ರಾಹಿಮನಾಮಾ' ಾಗೂ ಮಹ್ಮದ ಬಹರಿಯ 'ಮನಲಗನ' ಇತ್ಯಾದಿ ಕೆಲವು ಕೃತಿಗಳನ್ನು ಇಲ್ಲಿ ಸರಿಸಬಹುದು.

ಕನ್ನಡ ಹಾಗೂ ಮರಾಠಿ ಭಾಷೆಗಳಿಗೆ ರಾಜಾಶ್ರಯವಿದ್ದ ಸ್ಪಷ್ಟ ಉಲ್ಲೇಖಗಳು ೊರೆಯದಿದ್ದರೂ ಎರಡನೆಯ ಇಬ್ರಾಹಿಮ ಆದಿಲಶಹನು ಂತೂಪಂಡಿತ'ನೊಡನೆ ಆಸ್ಥಾನದಲ್ಲಿ ಮರಾಠಿ ಭಾಷೆಯಲ್ಲಿಯೇ ಾತನಾಡುತ್ತಿದ್ದನೆಂದು ಮೊಗಲ ರಾಯಭಾರಿ ಅಸದ ಬೇಗನು ತನ್ನ ನೆನಪುಗಳಲ್ಲಿ ರೆದಿಟ್ಟಿದ್ದಾನೆ //೪//.

ಮರಾಠಿಯ ವಾಮನ ಪಂಡಿತ, ತುಕಾರಾಮ ಹಾ[illegible] ಾಮದಾಸರ ಸಾಹಿತ್ಯ ೃಷ್ಟಿ ಪ್ರಾರಂಭವಾದದ್ದು ವಿಜಾಪುರದಿಂದ. ಅದರ[illegible]ೆ ಕನ್ನಡ ಭಾಷೆಯಲ್ಲಿ ೃತಿಗಳನ್ನು ರಚಿಸಿದ ಕವಿಗಳ ಒಂದು ದೊಡ್ಡ ಪಟ್ಟಿಯನ್ನೇ ಉದಾಹರಿಸಬಹುದು. ುಕ್ಮಾಂಗದ ಪಂಡಿತ, ಮಹಿಪತಿ, ಕೃಷ್ಣದಾಸ, ಯತಿರಾಯ, ಶ್ರೀಪತಿ, ಶ್ರೀಪತಿ ನುಜ, ಭೀಮಾಶಂಕರ, ಜಕ್ಕಪ್ಪಯ್ಯ, ಶಿವರಾಮ, ಚಿದಾನಂದ, ಮುದ್ಗಲ್ ೃಷ್ಣದಾಸ, ಗಲಗಲಿ ಅವ್ವ, ಪ್ರಯಾಗಾ ಬಾಯಿ ಇತ್ಯಾದಿ ಸ್ತ್ರೀಪುರುಷರು ಕನ್ನಡದಲ್ಲಿ ಾಹಿತ್ಯವನ್ನು ರಚಿಸಿದ್ದಾರೆ. ಅವರೆಲ್ಲರನ್ನೂ ಇಂದು ಮಹಾನುಭಾವರೆಂದು ುರುತಿಸಿದರೂ ಅವರು ಅಪರೂಪದ ಸಾಹಿತ್ಯವನ್ನು ಸೃಷ್ಟಿಸಿದ್ದರೆಂಬುದು ಇದೀಗ ೊತ್ತಾಗಿದೆ. ದೊರೆತ ಹಸ್ತಪ್ರತಿಗಳಲ್ಲಿ ಈ ಮೇಲೆ ಹೇಳಿದ ಎಲ್ಲರ ಕೃತಿಗಳಲ್ಲದೆ, ುರುತಿಸಬೇಕಾದ ಇನ್ನೂ ಹಲವಾರು ಕೃತಿಗಳು ದೊರೆತಿವೆ.

ದೇಶೀ ಭಾಷೆಗಳಲ್ಲಿಯ ಸಾಹಿತ್ಯದ ಒಂದು ವೈಶಿಷ್ಟ್ಯವೆಂದರೆ ಇಲ್ಲಿಯ ಕವಿ-ಸಾಹಿತಿಗಳು ತಮ್ಮ ಕೃತಿಗಳಲ್ಲಿ ಬಹು ಭಾಷೆಗಳನ್ನು ಉಪಯೋಗಿಸಿದ್ದಾರೆ.

ಂದು ಭಾಷೆಯ ಪ್ರಭಾವ ದಟ್ಟವಾದಾಗ ಆ ಭಾಷೆಯ ಶಬ್ದಗಳು ಸ್ಥಳೀಯ
ು ಕೃತಿಗಳಲ್ಲಿ ಬರುವುದು ಆಶ್ಚರಿಯ ವಿಷಯವೇನಲ್ಲ. ಆದರೆ ಮೂರು
ಕ್ಕ ಭಾಷೆಗಳನ್ನು ಉಪಯೋಗಿಸಿ ಕೃತಿಗಳನ್ನು ರಚಿಸುವುದು ಚೋದ್ಯವೇ ಸೈ.

ಸ್ಥಳೀಯ ವಾತಾವರಣದಲ್ಲಿ ಬಹುತೇಕ ಹಿಂದು ಪಂಡಿತ ಮಾನ್ಯರು ಬಹು
ವಿಶಾರದರಾಗಿದ್ದರು. ಪರ್ಶಿಯನ್, ದಖಣಿ, ಮರಾಠಿ, ಕನ್ನಡ ಹಾಗೂ
ಈ ಐದೂ ಭಾಷೆಗಳಲ್ಲಿ ಪರಿಣತರಾಗಿದ್ದ ಪಂಡಿತರನ್ನು ಕವಿಗಳನ್ನು
ನ್ನು ಆ ಕಾಲದ ವಿಜಾಪುರದಲ್ಲಿ ಕಾಣುತ್ತೇವೆ. ಎಲ್ಲರಿಗೂ ತಿಳಿಯಲೆಂದೋ
ಅನ್ಯ ಭಾಷಿಕರನ್ನು ಆಕರ್ಷಿಸಲೆಂದೋ ಈ ಜನ ಮೂರು ನಾಲ್ಕು
ಗಳನ್ನು ಉಪಯೋಗಿಸಿ ಪದ -ಪದ್ಯ -ಕಾವ್ಯಗಳನ್ನು ರಚಿಸಿದ್ದಾರೆ.
ಪತಿರಾಯರ 'ಬಾಟ ಪಕಟೋ ಸೀದಾ' ಎಂಬ ಕೃತಿಯಲ್ಲಿ ಮೂರು
ಗಳಿದ್ದರೆ ಅವರದೇ ಆದ ಇನ್ನೊಂದು ಪದ್ಯದಲ್ಲಿ ಐದು ಭಾಷೆಗಳಿವೆ.

'ಸಮಜೋ ಭಾಯಿ ಸಕುನಾಚಾರೋ ಖುದಾಕಾ।
ತೆಲಗು ಕನ್ನಡ ತುರುಕಾರೆ ವಂದೇ ಸುಖ।। ಧ್ರು।।
ದೇಖೋ ಭಾಯಿ ದಿಸತಾ ತುಮನಾ ನಜರೋಮೆ ನಜರೋಮೆ।
ತನ್ನೊಳಗದೆ ಅತಿಸೂಕ್ಷ್ಮವಾಗಿ ತಿಳಕೋಮೆ ತಿಳಕೋಮೆ।
ಸದ್ಗುರು ವಚನ ಶೋಧುನಿ ಪಾಹಾ ಸಪ್ರೇಮ ಸಪ್ರೇಮ।
ಚುಡವಯ್ಯ ಉನ್ನದಿ ಪೂರ್ಣ ಘನ ಮಹಿಮೆ ।।೧।।
ಪ್ಯಾರೆ ವಳಖುನಿ ಸಾರಾ ಸಾರಾ ನಿವಡೂನಿ ನಿವಡೂನಿ।
ನಜರ ಹುಜರ ದೇಖೋ ಯಾರಾ ಹೈಗನೀ ಹೈಗನೀ।
ಜನ್ಮಕ ಬಂದು ಮಾಡುವದೇ ಸಾಧನೀ ಸಾಧನೀ।
ಮಂಚಿ ಉನ್ನದಿ ನ ಕಳೆ ಸದ್ಗುರು ಪಾಹೋನಿ ।।೨।।
ಎಲ್ಲಾ ಒಂದೇ ಮಾತಿನ ಸೊಗಸು ಸಿವನಾಟಾ ಸಿವನಾಟಾ।
ಆಪಸಮೆ ಆಪ ಲಢ ನಾ ಸಬ ಝೂಟಾ ಸಬ ಝೂಟಾ।
ಚೆಪ್ಪವಯ್ಯಾ ಎಂದರೆ ಹೇಳುವ ಗುರು ನೀತಾ ಗುರು ನೀತಾ।
ಆನಂದ ಆಹೆ ಮಹಿಪತೀಸ ಸುಖ ಮೋಠಾ ।।೩।।

ದ್ಯದ ಅರ್ಥವನ್ನಾಗಲೀ, ಉದ್ದೇಶವನ್ನಾಗಲೀ, ಹೇಳುವ ಅಗತ್ಯವಿಲ್ಲ. ಭಾಷೆ,
ಯಾವುದಿದ್ದರೇನು ದಾರಿ ಒಂದೇ. ಇದು ಮಹಿಪತಿರಾಯರ ಸಾಹಿತ್ಯ ಸೃಷ್ಟಿಯ
ದೃಷ್ಟಿ. ಸಿಂದಗಿಯ ಚಕ್ಕಪ್ಪಯ್ಯನ 'ಅಗ್ನಿ ಪರೀಕ್ಷೆ' ಖಂಡ ಕಾವ್ಯವು ಕನ್ನಡ
ಿ ದ್ವಿಭಾಷೆಯಲ್ಲಿದೆ. ಒಂದೇ ಕಥೆಯನ್ನು ಎರಡು ಭಾಷೆಗಳಲ್ಲಿ ಹೇಳುತ್ತ
ರ ಉದಾಹರಣೆ ಬಹುಶಃ ಬೇರೆ ಯಾವ ಭಾಷೆಗಳ ಇತಿಹಾಸದಲ್ಲೂ
ುಲಿಕ್ಕಿಲ್ಲ.

ಶ್ರೀ ರಾಮಚಂದ್ರ ಅನುಸಂಧಾನ ಅಥವಾ ಅಗ್ನಿಪರೀಕ್ಷೆ ಎಂಬ ಹೆಸರಿನ ಕಾವ್ಯಷ ಮರಾಠಿ ಚಾಮರಿ ವೃತ್ತದಲ್ಲಿ ಪ್ರಾರಂಭವಾಗುತ್ತದೆ.

ಗಣೇಶ ಅಂಬಾ ವಿಷ್ಣು ಸಾಂಬಾ ಸೂರ ಕದಂಬ ವಂದುನೀ।
ದಿನೇಶ ಸದ್ಗುರು ಪರೇಶ ಪಾದ ಪದ್ಮ ಚಿಂತುನೀ।।

ಎಂದು ಮರಾಠಿ ಭಾಷೆಯಲ್ಲಿ ದೇವತಾ ಸ್ತುತಿಯನ್ನು ಮಾಡಿ ಐದು ನುಡಿಗಳ ಅನಂತರ ಕಥೆಯನ್ನು ಕನ್ನಡದ ವಾರ್ಧಕ ಷಟ್ಪದಿಯಲ್ಲಿ ಮುಂದುವರಿಸಲಾಗಿದೆ.

'ಆಗ ಬಳಿಕಲ್ಲಿಂದ ಕಪಿವೃಂದಮಂ ಕೂಡಿ।
ರಾಘವೇಂದ್ರ ತೆಂಕಡಲ ತೀರಕ ಬರಲು।
ಪೋಗಿ ಕಾಂಬುವೆನೆಂದು ಬಂದ ವಿಭೀಷಣಗೆ ಲಂಕಾಧಿಪತ್ಯ ಕೊಟ್ಟಾ।।

ಹೀಗೆ ಷಟ್ಪದಿಯಲ್ಲಿ ಮೂರು ನುಡಿಗಳು ಅನಂತರ ಕನ್ನಡದಲ್ಲಿಯೇ ಒಂದುಪದ ಮತ್ತೆ ಮರಾಠಿಯಲ್ಲಿ ಕಥೆ ಸಾಗುತ್ತದೆ. ಕನ್ನಡದ ವಿವಿಧ ಷಟ್ಪದಿಗಳನ್ನು, ಕಂದ ಹಾಗೂ ಪದಗಳನ್ನು ಕಾವ್ಯದಲ್ಲಿ ಬಳಸಿದ್ದರೆ ಮರಾಠಿಯಲ್ಲಿ ಕೂಡ ವಿವಿಧ ವೃತ್ತಗಳನ್ನು ಶ್ಲೋಕ ಇತ್ಯಾದಿಗಳನ್ನು ಕವಿ ಬಳಸಿದ್ದಾನೆ.

ಅನ್ಯದೇಶದ ಭಾಷೆ ಹಾಗೂ ಧರ್ಮದ ಆಕ್ರಮಣದಿಂದ ರೋಸಿ ಹೋದ ಜನ ತಮ್ಮ ಧರ್ಮವನ್ನು ಉಳಿಸಲು ಉಭಯ ಭಾಷಿಕರನ್ನು ಆಕರ್ಷಿಸಲು ಈ ರೀತಿಯ ರಚನೆಗೆಯ ಪ್ರಯತ್ನವನ್ನು ಮಾಡಿರಲೂ ಬಹುದು.

ಹಿಂದುಗಳಂತೆ ಮುಸ್ಲಿಮರು ಕೂಡ ತಮ್ಮ ಕೃತಿಗಳಲ್ಲಿ ಸಂಸ್ಕೃತ, ಕನ್ನಡ ಮರಾಠಿ ತೆಲುಗು ಭಾಷೆಯ ಪದಗಳನ್ನು ಧಾರಾಳವಾಗಿ ಬಳಸಿದ ನಿದರ್ಶನಗಳೂ ಉಂಟು.

ಹೀಗೆ ವಿಜಾಪುರದಲ್ಲಿ ಅಂದು ಹಲವಾರು ಭಾಷೆಗಳ ಸಂಗಮವಾಗಿ ಪರಸ್ಪರ ಪ್ರಭಾವಗಳಿಂದ ಬೇರೆ -ಬೇರೆ ರೀತಿಯ ಸಾಹಿತ್ಯ ಕೃತಿಗಳು ರೂಪುಗೊಂಡಿದ್ದನ್ನು ಕಾಣುತ್ತೇವೆ.

ಮಹಿಪತಿರಾಯರು ಬಾಳಿ ಬದುಕಿದ ಕಾಲದ ರಾಜಕೀಯ, ಸಾಮಾಜಿಕ ಧಾರ್ಮಿಕ ಹಾಗೂ ಭಾಷೆ ಸಾಹಿತ್ಯಗಳ ಕಿರುಚಿತ್ರವನ್ನು ನೋಡಿದ ಮೇಲೆ ಈಗ ಭಕ್ತಿ ಮಾರ್ಗದ ಕುರಿತು ಚರ್ಚಿಸುತ್ತ ವಿಶೇಷತಃ ಕರ್ನಾಟಕದಲ್ಲಿ ಭಕ್ತಿ ಮಾರ್ಗ ಬೆಳೆದ ಬಂದ ಬಗೆಯನ್ನು ಸಂಕ್ಷಿಪ್ತವಾಗಿ ಚರ್ಚಿಸುತ್ತ, ಆ ಮಾರ್ಗದಲ್ಲಿ ನಡೆದು ಸಿದ್ಧಿಯನ್ನು ಪಡೆದ ರಾಯರ ಸಮಕಾಲೀನ ಕೆಲವರ ಪರಿಚಯವನ್ನು ಮಾಡಿಕೊಳ್ಳಬಹುದು.

## ೩.೨ ಸಮಕಾಲೀನರು

### ೩.೨.೧ ಭಕ್ತಿ ಮಾರ್ಗಪ್ರವರ್ತಕರು:-

ನಮ್ಮ ದೇಶದಲ್ಲಿ ಭಕ್ತಿ ಹಾಗೂ ಭಕ್ತಿಮಾರ್ಗದ ಕುರಿತು ನಡೆದ ಚರ್ಚೆ ತ ಹಳೆಯದು. ಭಕ್ತಿ ಮಾರ್ಗವು ಬಹು ಪ್ರಾಚೀನವೆಂದು ಹೇಳುತ್ತ ಅದನ್ನು ; ಉಪನಿಷತ್ಕಾಲದ ವರೆಗೂ ತೆಗೆದುಕೊಂಡು ಹೋಗಿದ್ದಾಗಿದೆ. ಶಾಂತಿಪಾಠ ಬರುವ,

'ಓಂ ಭದ್ರಮ್ ಕರ್ಣೇಭಿ: ಶ್ರುಣುಯಾಮ ದೇವಾ:
ಭದ್ರಂ ಪಶ್ಯೇಮಾಕ್ಷಭಿರ್ಯಾ ಜತ್ರಾ:।।

ಹಾಗೂ

'ಮಧುವಾತಾ ರಿತಾಯತೆ ಮಧುಕ್ಷರಾಂತಿ ಸಿಂಧವಾ:'

ಇತ್ಯಾದಿ ಪ್ರಾರ್ಥನೆಗಳಲ್ಲೂ ಹುಡುಕಿದ್ದಾಗಿದೆ. ನಾರದೀಯ ಭಕ್ತಿಸೂತ್ರಗಳ ಸರಿಯೆ.

'ಧ್ಯಾಯನ್ ಕೃತೇ ಯಜನ್ ಯಜ್ಞೈ:। ತ್ರೇತಾಯಾಂ ದ್ವಾಪರೇಽರ್ಚಯನ
ಯದಾಪ್ನೋತಿ ತದಾಪ್ನೋತಿ। ಕಲೌ ಸಂಕೀರ್ತ್ಯ ಕೇಶವಮ್।।

ಎಂದು ಕಲಿಯುಗದಲ್ಲಿ ಭಕ್ತಿಮಾರ್ಗದಿಂದ ಭಗವಂತನ ಸಂಕೀರ್ತನೆಯಿಂದ ವ ಮುಕ್ತಿಯನ್ನು ಪಡೆಯಬಹುದೆಂದು ಹೇಳಿದರು.

'ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ನಾಟಕೇ ಗತಾ।
ಕ್ವಚಿತ್ ಕ್ವಚಿನ್ಮಹಾರಾಷ್ಟ್ರೇ ಗೂರ್ಜರೇ ಜೀರ್ಣತಾಂ ಗತಾ।।

ಎಂದು ಪದ್ಮಪುರಾಣದ ಈ ಶ್ಲೋಕವನ್ನು ಉದ್ಧರಿಸುತ್ತ ಭಕ್ತಿ ಪ್ರವಾಹವು ಆ ಬೆಳೆದು ಬಂದ ಬಗೆಯನ್ನು ಕೊನೆಗೆ ಜೀರ್ಣಾವಸ್ಥೆಗೆ ಬಂದುದನ್ನೂ ಹೇಳುತಾ

ವಾಸ್ತವದಲ್ಲಿ ನಮ್ಮ ಪ್ರಾಚೀನ ಪರಂಪರೆ ಹಾಗೂ ತತ್ವಜ್ಞಾನದಲ್ಲಿ ಮೋ ಮೂರು ಮುಖ್ಯ ದಾರಿಗಳನ್ನು ಸೂಚಿಸಲಾಗಿದೆ. ಜ್ಞಾನ, ಕರ್ಮ ಹಾಗೂ ಭಕ್ತಿ. ಮೂರು ಮುಖ್ಯ ದಾರಿಗಳಿಂದ ಮನುಷ್ಯ ಮುಕ್ತಿಯನ್ನು ಹೊಂದುತಾ ಇವುಗಳಲ್ಲಿಯ ಭಕ್ತಿಮಾರ್ಗವನ್ನು ನಾವು ಎಷ್ಟೇ ಪ್ರಾಚೀನವೆಂದರೂ ಕೂಡ ಕ್ರಿ ಹತ್ತು -ಹನ್ನೊಂದನೆಯ ಶತಮಾನಕ್ಕಿಂತ ಮೊದಲು ಅದರ ಅಸ್ತಿತ್ವ ಹುಡುಕುವುದು ಕಠಿಣ. ಆವರೆಗೂ ಜ್ಞಾನ -ಕರ್ಮ ಮಾರ್ಗಗಳೇ ಪ್ರಧಾನವಾಗಿದ್ದ ಮತ್ತು ಆದರಿಂದಾಗಿ ತತ್ವ ಚಿಂತಕರಿಗೂ ಜನಸಾಮಾನ್ಯರಿಗೂ ಮಧ್ಯದಲ್ಲಿ ಆಳ ಕಂದರವಿತ್ತು. ಯಾಕೆಂದರೆ ವೈದಿಕ ಸಂಸ್ಕೃತಿಯ ಆತ್ಮ ಎನಿಸಿದ ಸಂಸ್ಕೃತದಲ್ಲಿ ಜ್ಞಾನಭಾಂಡಾರವು ಜನಸಾಮಾನ್ಯರಿಗೆ ನಿಲುಕುವಂಥದ್ದಾಗಿರಲಿಲ್ಲ. ಜ್ಞಾನಿಗಳು ಚಿಂತನೆಯಿಂದ - ಜ್ಞಾನಮಾರ್ಗದಿಂದ ಮೋಕ್ಷವನ್ನು ಪಡೆಯುತ್ತಿ ಜನಸಾಮಾನ್ಯರು ತಮ್ಮ 'ಕರ್ಮ' ದಲ್ಲಿಯೇ ಮುಕ್ತಿಯನ್ನು ಪಡೆಯುತ್ತಿದ್ದ ಅವರಿಗೆ ತಮ್ಮ ಮಧ್ಯೆದಲ್ಲಿದ್ದ ಕಂದರದ ಅರಿವಿನ ಅವಶ್ಯಕತೆಯೂ ಇರಲಿಲ್ಲ. ಆ

ಯುಗದಲ್ಲಿ ಪರಕೀಯರ ದಾಳಿಗಳಿಂದ, ಅನ್ಯದರ್ಮದ ರಾಜ್ಯ ಸ್ಥಾಪನೆಯಿಂದ
ಮ ಧರ್ಮ -ಸಂಸ್ಕೃತಿಗಳ ಮೇಲಾದ ಆಕ್ರಮಣದ ಅರಿವು ಆಗಹತ್ತಿತು. ಈ
ೀಕ್ಷಿತ ಆಘಾತವನ್ನು ಸಹಿಸುವುದು ಇಲ್ಲಿಯ ಯಾರಿಂದಲೂ ಸಾಧ್ಯವಾಗಲಿಲ್ಲ.
ಧರ್ಮದ ಸಂಸ್ಕೃತಿಯ ಸಂರಕ್ಷಣೆಯ ಅಗತ್ಯ ಕಂಡು ಬಂದಿತು. ಅದನ್ನು
ಸಿಕೊಳ್ಳಲು ಪಂಡಿತ ಪಾಮರರ ಮಧ್ಯದಲ್ಲಿದ್ದ ಕಂದರದ ಅರಿವು ಈಗ
ಯತರಿಗೂ ಆಗಹತ್ತಿತು. ಅಂತೆಯೇ ಉಭಯತರಿಗೂ ಅರ್ಥವಾಗುವಂಥ,
ತೀಯ ಧರ್ಮ ಸಂಸ್ಕೃತಿಗಳ ಸಂರಕ್ಷಣೆಗೆ ಅಗತ್ಯವಾದ ಒಂದು ಹೊಸ ದಾರಿಯ
ಕ ಕಂಡು ಬಂದಿತು. ಮೂರ್ತಿ ಭಂಜಕ ಮುಸ್ಲಿಮರು ತಮ್ಮ ಧರ್ಮ ಪ್ರಸಾರಕ್ಕೆ
ತಗಿದಾಗ ಈ ದೇಶದ ಜನಸಾಮಾನ್ಯರಿಗೆ ಅವರಿಗೆ ತಿಳಿಯುವ ಭಾಷೆಯಲ್ಲಿ ತಮ್ಮ
ರ್ಮ ಸಂಸ್ಕೃತಿಗಳ ಕುರಿತು ಹೇಳುವ ಸಂದರ್ಭ ಈಗ ಒದಗಿ ಬಂದಿತು. 'ಘಟ
ಗಳ ಚಕ್ರವ್ಯೂಹದಲ್ಲಿ ಕೆಡವದೆ ಸುಲಭವಾದ ಭಾಷೆಯನ್ನು ಬಳಸಿ ಧರ್ಮ
ತಿಯನ್ನು ಮಾಡಲೇಬೇಕಾಯಿತು. ಅಂತೆಯೇ 'ಭಾರತದಲ್ಲಿ ಧಾರ್ಮಿಕ
ೋಲನಗಳಿಗೆ ಮಧ್ಯಯುಗದಲ್ಲಿ ಸಾಮಾಜಿಕ ಸ್ವರೂಪ ಬಂದಿತು' ಅದುವೆ ಭಕ್ತಿ
ಾಹವೆನಿಸಿತು.

ಉತ್ತರ ಭಾರತದಲ್ಲಿ ಭಕ್ತಿಪ್ರವಾಹದ ಮುಂಚೂಣಿಯಲ್ಲಿದ್ದವರು
ಾನಂದರು. ಇಲ್ಲಿ ಮುಸ್ಲಿಮರ ಪ್ರಾಬಲ್ಯ ಹೆಚ್ಚಾದಂತೆ ಹಿಂದು ಧರ್ಮವನ್ನು
ಸುವ ಕಳಕಳಿಯಲ್ಲಿ ಉದಾರ ನೀತಿಯನ್ನು ಅನುಸರಿಸಿದ್ದನ್ನೂ ಕಾಣುತ್ತೇವೆ.
, ಮತ, ಪಂಥ, ಹಾಗೂ ಲಿಂಗ ಭೇದವಿಲ್ಲದೆ ಈ ಭಕ್ತಿ ಚಳುವಳಿಯಲ್ಲಿ ಜನರು
ಮೂಹಿಕವಾಗಿ ಭಾಗವಹಿಸಿದ್ದು ಗಮನಾರ್ಹವಾಗಿದೆ. ರಾಮ-ರಹೀಮ,
-ಕರೀಮ, ಕಾಶಿ-ಕಾಬಾಗಳು ಒಂದಾಗಿದ್ದುದು ಈ ದಿನಗಳಲ್ಲಿಯೆ.
ಾನಂದರ ಹನ್ನೆರಡು ಜನರ ಶಿಷ್ಯರುಗಳಲ್ಲಿ ಉಚ್ಚಜಾತಿಯವರಲ್ಲದೆ ಜಾಟರ,
, ಕ್ಷೌರಿಕರ ಸೇನ, ಸಮಗಾರ ರಾಯಿದಾಸ ಹಾಗೂ ಮುಸಲ್ಮಾನರ ಕಬೀರರರೂ
ರು.

ಕರ್ನಾಟಕದಲ್ಲಿ ಈ ಭಕ್ತಿ ಮಾರ್ಗ ಪ್ರವಾಹವು ಎರಡು ಹಂತಗಳಲ್ಲಿ ಬೆಳೆದು
ದನ್ನು ಕಾಣುತ್ತೇವೆ. ಪ್ರಾರಂಭದಲ್ಲಿ ವೈದಿಕ ಹಾಗೂ ಜೈನ ಧರ್ಮಗಳ
ದ್ಧವಾಗಿ ಎದ್ದು ನಿಂತ ಶಿವಶರಣರ ಕ್ರಾಂತಿಯ ಮೂಲ ಬೀಜ ಭಕ್ತಿಯದೇ
ತ್ತಿತು. ಸಾಮಾಜಿಕ ಅಸಮಾನತೆಯ ವಿರುದ್ಧ ಬಂಡೆದ್ದ ಬಸವಣ್ಣ ಮತ್ತು ಅವನ
ಯಾಯಿಗಳ ಧ್ವನಿ, ಶತ -ಶತಮಾನಗಳಿಂದ ಬಂದ ಅರ್ಥವಿಲ್ಲದ ಆಚಾರಗಳ
ಾನುಕರಣೆಯ ವಿರುದ್ಧವಾಗಿತ್ತು. ಮತ್ತು ಅದು ಸರಳ ಭಾಷೆಯ
ಭಾಷೆಯಲ್ಲಿತ್ತು. ಅಂತೆಯೇ ಅವರು ಬಹುಬೇಗ ಸಾಮಾನ್ಯ ಜನತೆಯ ಹತ್ತಿರ
ು ಕಾರಣವಾಯಿತು. ಆದರೆ ಅಷ್ಟೇ ಬೇಗ ಕಣ್ಮರೆಯೂ ಆದರು. ಅದಕ್ಕೆ ಕಾರಣ

ಕಶ: ಅವರ ವಿರೋಧವಿದ್ದದ್ದು ಈ ನೆಲದಲ್ಲಿಯೇ ಹುಟ್ಟಿ ಬೆಳೆದ ಸಂಪ್ರದಾಯ, ಕಾರ ವಿಚಾರಗಳಾಗಿದ್ದುದು ಆಗಿರಬೇಕು. ಜೊತೆಗೆ ಶರಣರು ವಿರೋಧಿಸುತ್ತಿದ್ದ ರ್ಮ ಸಂಸ್ಕೃತಿಗಳಿಗೆ ಆಳರಸರು ಬದ್ಧರಾಗಿದ್ದರು. ಆದ್ದರಿಂದ ಶರಣರ, ಕ್ರಾಂತಿಯ ರ್ಗವಾಗಲು ಮತ್ತೆ ನಾಲ್ಕು ಶತಮಾನಗಳೇ ಬೇಕಾದವು. ಈಗ ಭೂಮಿ ರವಾಗಿತ್ತಾದರೂ ಬಸವಣ್ಣನವರು ಬಿತ್ತಿದ ಬೀಜದ ಕಸುವು ಕಳೆದದ್ದರಿಂದ ,ಂತಿಯು ಸೀಮಿತವಾಗಿ ಉಳಿದದ್ದು ದುರಂತವೇ ಸೈ.

ಎರಡನೆಯ ಹಂತದಲ್ಲಿ ಉಚ್ಚ ವರ್ಗದ ಬ್ರಾಹ್ಮಣರು ಈ ಭಕ್ತಿಮಾರ್ಗದಲ್ಲಿ ಜಿದರು. ವೈಷ್ಣವ -ಬ್ರಾಹ್ಮಣರು ಈ ಆಂದೋಲನದಲ್ಲಿ ಅಧಿಕ ವಾಗಿದ್ದುದರಿಂದ ಕಶ: ಅದಕ್ಕೆ 'ಹರಿದಾಸ ಕೂಟ' ಎಂಬ ಹೆಸರು ಬಂದಿರಬೇಕು. ಆದರೆ ದೋಲನವು ಬ್ರಾಹ್ಮಣರಿಗಷ್ಟೇ ಸೀಮಿತವಾಗಿರಲ್ಲಿಲ್ಲ ಎಂಬುದನ್ನು ದಾಸರ ಗಳಿಂದಲೇ ಅರಿಯಬಹುದಾಗಿದೆ. ಯಾಕೆಂದರೆ 'ಹರಿದಾಸ ತತ್ವ ಅನಾದಿ ್ಯವಾದದ್ದು ಹರಿದಾಸರು ಕನ್ನಡಿಗರೇ ಆಗಿರಬೇಕೆಂಬ ಅಟ್ಟಹಾಸವಿರಬಾರದು' ಟ್ಟೇ ಅಲ್ಲ ಅವರು ಮಾಧ್ವ ಬ್ರಾಹ್ಮಣರೇ ಆಗಿರಬೇಕೆಂಬ ಹಟವೂ ಇರಬಾರದು ಬ ವಿಷಯದಲ್ಲಿ ಭಿನ್ನಾಭಿಪ್ರಾಯ ಇರಲಾರದು.

ವಾಸ್ತವದಲ್ಲಿ ಒಂದು ವಿಶಿಷ್ಟ ಕಾಲದಲ್ಲಿ ಒಂದು ವಿಶಿಷ್ಟ ಧ್ಯೇಯವನ್ನು ಂದಿಟ್ಟುಕೊಂಡು ನಡೆಸಿದ ಸಾಮೂಹಿಕ ಆಂದೋಲನ ಹರಿದಾಸರದಾಗಿತ್ತು. ರ್ನಾಟಕದಲ್ಲಿ ಆಗಲೇ ಮುಸ್ಲಿಮ ಧರ್ಮ ನಾಡಿನ ಸುತ್ತಕಡೆಗೂ ಕೈ ಚಾಚಿ, ತ್ತರದ ಅರ್ಧ ಭಾಗದಲ್ಲಿ ತನ್ನ ರಾಜ್ಯವನ್ನೇ ಸ್ಥಾಪಿಸಿತ್ತು. ರಾಜಕೀಯವಾಗಿ ಜಲಿಯ ರಾಜ್ಯಪಾಲ ಹರಿಹರನು ಸಾಧಿಸಿದ್ದನ್ನು, ಸಾಮಾಜಿಕವಾಗಿ ರ್ಮಿಕವಾಗಿ ಅದನ್ನು ಉಳಿಸಿಕೊಂಡು ಬರುವ ಜವಾಬ್ದಾರಿ ಸಾಮಾನ್ಯರದಾಗಿತ್ತು. ಅವರಿಗೆ ಅರ್ಥವಾಗುವಂತೆ ಮತ್ತು ಅಷ್ಟೇ ರ್ಷಕವಾಗುವಂತೆ ತಮ್ಮ ಜವಾಬ್ದಾರಿಯನ್ನು ತಿಳಿಹೇಳುವ ಅವಶ್ಯಕತೆ ಇತ್ತು. ಆ ಸವನ್ನು ಈ ಎರಡನೆಯ ಹಂತದ ಭಕ್ತಿ ಮಾರ್ಗ ಪ್ರವರ್ತಕರು ಮಾಡಿದರೆಂದು ಳಬಹುದು. ಅದಕ್ಕೆ 'ಹರಿದಾಸ ಕೂಟ' ಎಂಬ ಹೆಸರು ಇಟ್ಟರು. ಈ ರಣಗಳಿಂದಲೇ ಹರಿದಾಸ ಕೂಟದ ಉಗಮ ಎಂದಾಯಿತು? ಅದರ ಲಪುರುಷರು ಯಾರು? ಎಂಬ ಪ್ರಶ್ನೆಗಳನ್ನು ಕೇಳುವುದು ಮತ್ತು ಅವುಗಳಿಗೆ ತ್ತರಗಳನ್ನು ಹುಡುಕುವುದು ಅಸಂಗತವೆನಿಸುತ್ತದೆ. ಧರ್ಮರಕ್ಷಣೆ ಅವರ ಮೂಲ ದ್ದೇಶವಾಗಿತ್ತು. ಉದ್ದೇಶವನ್ನು ಸಾಧಿಸಲು -ತಿಳಿಸಿ ಹೇಳಲು ಮಾಧ್ಯಮ ಒಂದು ಕಾಗಿತ್ತು. 'ವೀರಶೈವ ವಚನಗಳ ರಚನೆಯಿಂದ ಈ ವಿಷಯದಲ್ಲಿ ಸಾಮೂಹಿಕ ರಣೆಯಾಗಿರಬಹುದಾಗಿದೆ' ಎಂಬ ಅಭಿಪ್ರಾಯದಲ್ಲಿ ಸಂದೇಹವೇ ಇಲ್ಲ. ರಾಡುವ ಭಾಷೆಯ ಸರಳ ನಿರೂಪಣೆಗೆ ನೃತ್ಯ ಗೇಯತೆಗಳನ್ನು ಒದಗಿಸಿ ಅದನ್ನು

ಇನ್ನಷ್ಟು ಆಕರ್ಷಕವನ್ನಾಗಿ ಮಾಡಿದರು. ಮೂಲ ಉದ್ದೇಶವನ್ನು ಈಡೇರಿಸುವಾ ಲೋಕ ನೀತಿ, ಲೋಕಸಂಗ್ರಹ, ಸಮಾಜೋಪದೇಶ ಅವುಗಳ ಜೊತೆಗೆ ತಾನು ನಂಬಿದ ದೈವ ಹಾಗೂ ಶ್ರದ್ಧೆಗಳ ಕುರಿತು ಹೇಳುವದು ಸಹಜವಾಗಿತ್ತು. ಆದ್ದರಿಂದ ಆವಾಗಾವಾಗ ತಾವು ನಂಬಿದ ತತ್ತ್ವ -ಸಿದ್ಧಾಂತಗಳನ್ನು ನವಿರಾಗಿ ಹೇಳಿದರೇ ವಿನಃ ಹರಿದಾಸ ಸಾಹಿತ್ಯವು ಒಂದು ತತ್ತ್ವದ ಮುಖವಾಣಿಯಾಗಿರಲಿಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಆದಕ್ಕೆ ಭಾಷೆ, ಮತ, ತತ್ತ್ವ ಲಿಂಗಭೇದಗಳಿರಲಿಲ್ಲ. ಅಂತೆಯೇ ಆಸೇತು - ಹಿಮಾಚಲದವರೆಗೆ ಎಲ್ಲೆಲ್ಲಿ ಪರಕೀಯರ ಪ್ರಾಬಲ್ಯ ಹೆಚ್ಚಾಯಿತೋ ಅಲ್ಲೆಲ್ಲ ಜನರು ಈ ಆಂದೋಲನದಲ್ಲಿ ಭಾಗವಹಿಸಿದ್ದಾರೆ.

ಕರ್ನಾಟಕದಲ್ಲಿ ಮಧ್ವಮತ ಪರಂಪರೆಯಲ್ಲಿ ಬಂದ ನರಹರಿ ತೀರ್ಥರಿಂದ ಈ ಹರಿದಾಸ ಕೂಟವು ಪ್ರಾರಂಭವಾಯಿತು ಎಂಬ ಅಭಿಪ್ರಾಯವಿದೆ. ಇಲ್ಲಿ ದಾಸಕೂಟವು ನರಹರಿ ತೀರ್ಥರಿಂದ ಪ್ರಾರಂಭವಾಯಿತು ಎಂಬುದು ಒಂದು ಮತದ ಅಭಿಪ್ರಾಯವೆನಿಸುತ್ತದೆ. . ಅದನ್ನು ಪ್ರಾರಂಭಿಸಿದರೆನ್ನಲಾದ 'ನರಹರಿತೀರ್ಥರ ಮಾತೃಭಾಷೆ ಕನ್ನಡವಾಗಿರಲಿಲ್ಲ, ಅವರು ಹನ್ನೆರಡು ವರುಷ ಕಳಿಂಗ ರಾಜ್ಯದ ಅಧಿಕಾರ ಸೂತ್ರಗಳನ್ನು ವಹಿಸಿದ್ದರು. ಆ ಮುಂದೆ ವೈಷ್ಣವ ದೀಕ್ಷೆಯನ್ನು ಹೊಂದಿದ ಮೇಲೆ ರಚಿಸಿದ್ದು ಹದಿನೈದು ಸಂಸ್ಕೃತ ಗ್ರಂಥಗಳನ್ನು ಅವು ಕೂಡ ಅಪ್ಪಟ ಮಾಧ್ವ ತತ್ತ್ವದವುಗಳು! ಆದ್ದರಿಂದ ನರಹರಿತೀರ್ಥರು ಹರಿದಾಸ ಕೂಟದ ಮೊದಲಿಗನೆಂಬ ಹೆಸರು ಸಲ್ಲ'//೫// ಎಂಬ ಮಾತುಗಳನ್ನು ಗಮನಿಸಬೇಕು. ಅದರಂತೆ ಪುರಂದರದಾಸರ. ಅನಂತರ ದಾಸಸಾಹಿತ್ಯವು ಅವನತಿ ಹೊಂದಿ ವಿಜಯದಾಸರಿಂದ ಅದು ಮತ್ತೆ ಊರ್ಜಿತವಾಯಿತೆಂಬುದೂ ಸಂಕುಚಿತ ಮನೋಭಾವನೆಯನ್ನು ತೋರಿಸುತ್ತದೆ ಎನ್ನಬಹುದು. ಯಾಕೆಂದರೆ ಪುರಂದರ ವಿಜಯದಾಸರ ಮಧ್ಯದ ಸುಮಾರು ೧೫೦ ವರುಷಗಳಲ್ಲಿ ಆನೇಕ ಹರಿದಾಸರು ಇದ್ದರು. ಅವರುಗಳಲ್ಲಿ ಮಹಿಪತಿರಾಯರೂ ಒಬ್ಬರು. ಆದರೆ 'ಮಹಿಪತಿದಾಸರು ಹರಿದಾಸಕೂಟದವರಲ್ಲ ಏಕೆಂದರೆ ಅವರಿಗೆ ಯೋಗ್ಯ ಗುರುಗಳಿಂದ ಅಂಕಿತವು ದೊರೆತಿರಲಿಲ್ಲ'//೬// ಎಂಬ ಶ್ರೀ ಆರ್.ಎಸ್. ಪಂಚಮುಖಿ ಅವರ ಅಭಿಪ್ರಾಯವು ಕೂಡ ಈ ಸಂಕುಚಿತತೆಯನ್ನೇ ಎತ್ತಿ ತೋರಿಸುತ್ತದೆ.

ಭಕ್ತಿ -ಭಕ್ತಿಮಾರ್ಗ ತನ್ಮೂಲಕ ಕನ್ನಡ ನಾಡಿನಲ್ಲಿ ಮೂಡಿ ಬಂದ ದಾಸ ಸಾಹಿತ್ಯವನ್ನು ಅವಲೋಕಿಸುವಾಗ ಆದಕ್ಕೆ ಮಾಧ್ವ ಸಂಪ್ರದಾಯದ ಹಣೆಪಟ್ಟಿಯನ್ನು ಕಟ್ಟಲಾಗುತ್ತಿದೆ. ಆದರೆ ದಾಸ ಸಾಹಿತ್ಯದ ಮೊದಲ ಘಟ್ಟದಲ್ಲಿಯೇ ನಮಗೆ ಭೆಟ್ಟಿಯಾಗುವ ಬೇಲೂರಿನ ವೈಕುಂಠದಾಸರು, ಬಾಡದ ಕನಕದಾಸರು, ಮಾಧ್ವರೇನೂ ಆಗಿರಲಿಲ್ಲ. ಇನ್ನು ದಾಸ -ದೀಕ್ಷೆ, ಅಪರೋಕ್ಷ ಜ್ಞಾನ ಇವುಗಳ ಕುರಿತು 'ಇದಮಿತ್ಥಂ' ಎಂದು ಚರ್ಚಿಸುವುದು ಅಸಂಗತವೆನಿಸುತದೆ.

ಚಾರಿತ್ರಿಕವಾಗಿ ವಿಜಯನಗರದ ಪತನದ ಅನಂತರ ಒಮ್ಮೆಲೆ ಅಂಧ:ಕಾರವೆನಿ.
ರ್ನಾಟಕದ ಸಾಂಸ್ಕೃತಿಕ ಪರಂಪರೆಯೇ ನಿಂತುಬಿಟ್ಟಿತು ಎನಿಸುವದು ಸಹಜವಾದರು
ತ-ಶತಮಾನಗಳಿಂದ ನಡೆದುಕೊಂಡು ಬಂದ ಧರ್ಮ ಹಾಗು ಸಂಸ್ಕೃತಿಗಳು ಅಷ್ಟೆ
ಹಜವಾಗಿ ನಿಲ್ಲುವುದೂ ಅಸಾಧ್ಯವೆಂಬುದು ಐತಿಹಾಸಿಕ ಸತ್ಯವಾಗಿದೆ
ಜಯನಗರದ ಪತನಾನಂತರ ಅಲ್ಲಿದ್ದ ಲಕ್ಷಾವಧಿ ಜನರು ವಲಸೆ ಹೋದಲ್ಲೆಲ್ಲ
ಮ್ಮ ಧರ್ಮ ಸಂಸ್ಕೃತಿಗಳನ್ನು ಸ್ಥಳಿಯರ ಸಹಕಾರದೊಂದಿಗೆ ಉಳಿಸಿದರು
ವರಲ್ಲಿಯ ಬಹುಪಾಲು ಜನರು ವಿಜಾಪುರಕ್ಕೆ ಬಂದರು ಮತ್ತು ಅಲ್ಲಿ
ಜಯನಗರದ ಸಂಸ್ಕೃತಿಯನ್ನು ಉಳಿಸಿ- ಬೆಳೆಸುವಲ್ಲಿ ಸಫಲರಾದರು. ಇದನ್ನು
ನ್ನಷ್ಟು ವಿವರವಾಗಿ ತಿಳಿಯಲು ಸಮಕಾಲೀನ ಕೆಲವು ದಾಸರನ್ನು ನೋಡುವದು
ುತ್ತು ಅವರ ಕೃತಿಗಳನ್ನು ಸಂಕ್ಷಿಪ್ತದಲ್ಲಿ ಅವಲೋಕಿಸುವುದು ಉಚಿತವೆನಿಸುತ್ತದೆ
ಂಥವರಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರು ಮೊದಲಿಗರಾಗಿದ್ದಾರೆ.

.೨.೨. ರುಕ್ಮಾಂಗದ ಪಂಡಿತ:-

ವಿಜಾಪುರದ ರೈಲು ನಿಲ್ದಾಣದ ಪೂರ್ವಕ್ಕೆ ಸುಮಾರು ಒಂದೂವರೆ
ಕೋಮೀಟರು ಅಂತರದಲ್ಲಿ ರುಕ್ಮಾಂಗದ ಪಂಡಿತರ ಸಮಾಧಿ ಇದೆ. ವಿಜಾಪುರ
ಾಗೂ ಸುತ್ತಲಿನ ಹತ್ತೆಂಟು ಹಳ್ಳಿಗಳ ಜನ ಇಂದಿಗೂ ಅವರ ಸಮಾಧಿಗೆ
ಡೆದುಕೊಳ್ಳುತ್ತಾರೆ. ಗುರುವಾರದಂದು ಅವರ ಸೇವೆ ಮಾಡಿದರೆ ಪಂಡಿತರು
ಸನ್ನರಾಗಿ ವರವನ್ನು ಕೊಡುವರೆಂಬ ಪ್ರತೀತಿಯೂ ಇದೆ. ಪ್ರತಿವರುಷ ಫಾಲ್ಗುಣ
ದ್ಧ ದ್ವಾದಶಿಯಂದು ಪಂಡಿತರ ಆರಾಧನೆ ಜರುಗುತ್ತದೆ. ಸುತ್ತಲಿನ ಸಾವಿರಾರು
ನ ಸೇರುತ್ತಾರೆ. ಅನ್ನ ಸಂತರ್ಪಣೆಯಾಗುತ್ತದೆ. ರುಕ್ಮಾಂಗದ ಪಂಡಿತರು ಒಬ್ಬ
ಿದ್ಧ ಸಾಧುಗಳು, ಸಂತರು, ಸತ್ಪುರುಷರು ಎಂಬ ಕಲ್ಪನೆ ಜನರಲ್ಲಿ ಮನೆ ಮಾಡಿದೆ.
ದನ್ನು ಬಿಟ್ಟು ಬಹುತೇಕ ಜನರಲ್ಲಿ ಬೇರೆ ವಿಷಯ ಗೊತ್ತಿಲ್ಲ. ಆದರೆ ಪಂಡಿತರು
ಬ್ಬ ಸಮಾಜ ಸುಧಾರಕರು, ಖ್ಯಾತ ವೈದ್ಯರು, ಆ ಕಾಲದ ಪ್ರಸಿದ್ಧ ಸಂಗೀತಗಾರರು.
ಂಢರಪುರದ ವಿಠಲನ ಭಕ್ತರು ಅಲ್ಲದೆ ಕನ್ನಡ ಮರಾಠಿ ಭಾಷೆಗಳಲ್ಲಿ ಕೃತಿಗಳನ್ನು
ಚಿಸಿದ್ದರು ಎಂಬುದು ಇದೀಗ ಹೊಸ ವಿಷಯ.

ರುಕ್ಮಾಂಗದ ಪಂಡಿತರ ಚರಿತ್ರೆಯ ಕುರಿತು ಅಧಿಕೃತವಾದ ಆಧಾರ ರುಕ್ಮಜದಾಸ
ರನು ಬರೆದ 'ರುಕ್ಮಾಂಗದ ಚರಿತ್ರೆ' ಮರಾಠಿ ಭಾಷೆಯಲ್ಲಿದೆ. ಓವಿ ಪದ್ಧತಿಯಲ್ಲಿ
ದ ಈ ಕೃತಿಗೆ 'ಗುರುಮಾಲಿಕೆ' ಎಂದೂ ಹೆಸರಿದೆ. ಇದನ್ನು ಕ್ರಿ.ಶ. ೧೯೫೪ರಲ್ಲಿ
ಾಪುರದ ರುಕ್ಮಾಂಗದ ಮಂಡಳದವರು ಪ್ರಕಟಿಸಿದ್ದಾರೆ. ಕೃತಿಯ
ನಾಕಾಲವನ್ನು ಕ್ರಿ.ಶ. ಸುಮಾರು ೧೭೫೦ ರ ಅನಂತರ ಎಂದು
ುತಿಸಲಾಗಿದೆ.//೮// ಈ ಚರಿತ್ರೆಯ ಪ್ರಕಾರ ರುಕ್ಮಾಂಗದ ಪಂಡಿತರ ಕಾಲವನ್ನು
.ಶ. ೧೬೧೦ ರಿಂದ ಕ್ರಿ.ಶ. ೧೭೦೦ ಎಂದು ಹೇಳಲಾಗಿದೆ.//೯// ಅಂದರೆ

ಡಿತರು ಹುಟ್ಟಿದಾಗ ಬಿಜಾಪುರದಲ್ಲಿ ಎರಡನೆಯ ಇಬ್ರಾಹಿಮ ಆದಿಲಶಹ
೫೮೦-೧೬೨೬) ಕಾಲವಿತ್ತು. ಪಂಡಿತರು ತಾರುಣ್ಯಕ್ಕೆ ಬರುವಷ್ಟರಲ್ಲಿ ಮಹ್ಮ
ಲಶಹನ (೧೬೨೬-೧೬೫೬) ಆಳಿಕೆ ಪ್ರಾರಂಭವಾಗಿತ್ತು. ಆದರೆ ಪರ್ಶಿಯನ
ಸ್ತಪ್ರತಿ 'ಶಾಹಿಫತ್' ದಲ್ಲಿ ಬರುವ ಒಂದು ಕಥೆಯಂತೆ ರುಕ್ಮಾಂಗದ ಪಂಡಿತ
ರಡನೆಯ ಇಬ್ರಾಹಿಮ ಆದಿಲಶಹನ ಮೇಲೆ ತುಂಬ ಪ್ರಭಾವ ಬೀರಿದ್ದರೆಂದ
ದರಿಂದಾಗಿ ಬಾದಶಹನು ತನ್ನ ಅರಮನೆಯಲ್ಲಿ ಸರಸ್ವತಿಯ ವಿಗ್ರಹವನ
ಜಿಸಿದನೆಂದೂ ಹೇಳಲಾಗಿದೆ.//೧೦// ಇಲ್ಲಿ ಕಥೆ ಅಪ್ರಸ್ತುತ ಆದರೆ ರುಕ್ಮಾಂಗ
ಡಿತರ ಹೆಸರಿನ ಸ್ಪಷ್ಟ ಉಲ್ಲೇಖವು ಗಮನಾರ್ಹವಾಗಿದೆ. ಎರಡನೇ
ಬ್ರಾಹಿಮನ ಕುರಿತು ಇತರತ್ರ ದೊರೆಯುವ ಉಲ್ಲೇಖಗಳಿಂದ ಅವನ ಸರಸ
ಜೆ. ಅವನೇ ರಚಿಸಿದ 'ಕಿತಾಬ-ಇ-ನೌರಸ' ದಲ್ಲಿ ಬರುವ ಸರಸ್ವತಿಯ ಕುರಿತ
ದ್ಯಗಳು ಬಾದಶಹನ ಸರಸ್ವತಿಯ ಪ್ರೇಮವನ್ನು ವ್ಯಕ್ತಪಡಿಸುತ್ತದೆ. ಆದ್ದರಿ
ಾದಶಹನು ರುಕ್ಮಾಂಗದ ಪಂಡಿತರಿಂದಲೇ ಸರಸ್ವತಿಯ ಕು
ಪ್ರಭಾವಿತನಾಗಿರಬಹುದೆಂದು ಹೇಳಲು ಅವಕಾಶವಿದೆ. ಹಾಗಿದ್ದಲ್ಲಿ ಪಂಡಿ
ಾಲವನ್ನು ಅವರ ಮರಾಠಿ ಚರಿತ್ರೆಯಲ್ಲಿ ಹೇಳಿದುದಕ್ಕಿಂತ ತುಸು ಹಿ
ರಿಸಬೇಕಾಗುತ್ತದೆ. ಇಬ್ರಾಹಿಮನ ಸಮವಯಸ್ಕರೋ (೧೫೭೧-೧೬೨
ಥವಾ ವರುಷೆರಡು ವರುಷ ಹಿರಿ-ಕಿರಿಯರೋ ಇರಬೇಕು.

ಮರಾಠಿ ರುಕ್ಮಾಂಗದ ಚರಿತ್ರೆಯಲ್ಲಿ ಪಂಡಿತರು ಹುಟ್ಟಿದ ಹಾಗೂ ಕಾಲ
ಸ್ಪಷ್ಟ ಉಲ್ಲೇಖವಿದೆ. ಆದರೆ ಚರಿತ್ರೆಯಲ್ಲಿ ಬರುವ ಇನ್ನುಳಿದ ಕಾಲ ನಿರ್ದೇಶನ
ಹೊಂದಾಣಿಕೆಯಾಗುವುದಿಲ್ಲ.//೧೧// ರುಕ್ಮಾಂಗದ ಚರಿತ್ರೆಯು ಭಾ
ಪಾರಾಯಣ ಗ್ರಂಥ ಅದರಲ್ಲಿ ಐತಿಹಾಸಿಕ ವಿಷಯಗಳು ಕಡಿಮೆ.
ಸಂಪ್ರದಾಯ, ಒಂದಿಷ್ಟು ಪರಂಪರೆ ಹಾಗೂ ಕೆಲವು ಆನುಷಂಗಿಕ ಪ್ರಸಂ
ಕಿಂಚಿತ್ ಪರಿಚಯ - ದೊರೆಯುತ್ತದೆ. ಮೊತ್ತದಲ್ಲಿ ಇಡೀ ಗ್ರಂಥ ಆಧ್ಯಾ
ಚರ್ಚೆಯಾಗಿದೆ. ಆದ್ದರಿಂದ ಪರಂಪರೆಯಿಂದ ಕೇಳಿ ಬಂದ ಕಥೆಯನ್ನು ಅವಲ
ಅದಕ್ಕೆ ಪೂರಕವಾಗಿ ಮರಾಠಿ ಗ್ರಂಥ ಹಾಗೂ ಉರ್ದುಭಾಷೆಗಳಲ್ಲಿ ಬಂದ ಚಾ
ಅಂಶಗಳನ್ನು ಬಳಸಿಕೊಂಡು ಅವರ ಚರಿತ್ರೆಯನ್ನು ಸಂಕ್ಷಿಪ್ತದಲ್ಲಿ
ಹೇಳಬಹುದಾಗಿದೆ.

ವಿಜಾಪುರ ನಗರದ ಜುಮ್ಮಾ ಮಶೀದ ಪೇಟೆಯಲ್ಲಿ ಈಶ್ವರ ಭಕ
ಕೃಷ್ಣಪಂಡಿತನೆಂಬ ವಿದ್ವಾಂಸ -ಸದ್ಗೃಹಸ್ಥನಿದ್ದನು. ಅವನಿಗೆ ಇಬ್ಬರು ಮ
ಹಿರಿಯವಳು ಭಾಗೀರಥಿ, ಎರಡನೆಯವನು ರುಕ್ಮಾಂಗದ. ರುಕ್ಮಾಂ
ಚಿಕ್ಕವನಿದ್ದಾಗಲೇ ಮಾತಾ ಪಿತೃಗಳನ್ನು ಕಳೆದುಕೊಂಡಿದ್ದನು. ಅವನ
-ಪೋಷಣೆ ಹಾಗೂ ಶಿಕ್ಷಣದ ಜವಾಬ್ದಾರಿಯು ಅಕ್ಕ ಭಾಗೀರಥಿಯ ಮೇ

ಕ್ಮಾಂಗದನಿಗೆ ಕಲಿಯುವುದರತ್ತ ಲಕ್ಷ್ಯವಿರಲಿಲ್ಲ. ಗೆಳೆಯರೊಂದಿಗೆ ಗೋಲಿ ಕುವುದು ಹುಡುಗರನ್ನು ಛೇಡಿಸುವುದು ಅವನ ಕೆಲಸಗಳಾಗಿದ್ದವು. ಇದು ಅಕ್ಕನಿಗೆ ತೀಗೀಡು ಮಾಡಿತು. ತಂದೆಯಾದರೋ ಷಟ್‌ಶಾಸ್ತ್ರ ಪಂಡಿತನಾಗಿದ್ದವನು. ಮಗ ಗೆ ಉಡಾಳನಾಗಿ ತಿರುಗುವುದು ನೆರೆಹೊರೆಯ ಗೊತ್ತಿದ್ದವರಿಗೆಲ್ಲ ಕೆಡುಕೆನಿಸಿತ್ತು. ುರೆ ಆವನನ್ನು ದಾರಿಗೆ ತರುವ ಬಗೆ ಹೇಗೆ ಎಂಬುದು ಎಲ್ಲರಿಗೂ ಚಿಂತೆಯಾಗಿತ್ತು. ್ಮಾಂಗದನ ಜೀವನದಲ್ಲಿ ಒಂದು ಹೊಸ ತಿರುವಿನ ಅಗತ್ಯವಿತ್ತು. ಬಹುಶ: ಎಲ್ಲ ಿದ್ದವರ ಚರಿತ್ರೆಗಳಲ್ಲಿ ಬರುವ ಅಂಥದೊಂದು ತಿರುವು ರುಕ್ಮಾಂಗದ ತ್ರೆಯಲ್ಲೂ ದೊರೆಯುತ್ತದೆ.

ತುಂಗಭದ್ರೆಯ ದಡದ ಹಂಪಿ ಕ್ಷೇತ್ರದಲ್ಲಿ ವಾಸಿಸುತ್ತಿದ್ದ ಗೌರಾನಂದ ಯತಿಗಳು ಾಪುರಕ್ಕೆ ಬಂದಿದ್ದರು. ಈ ಗೌರಾನಂದರು ಶಂಕರಾಚಾರ್ಯರ ಮಠದ ಂಪರೆಯವರು. ತಮ್ಮ ಶಿಷ್ಯರೊಂದಿಗೆ ಕಾಶಿಗೆ ಹೋಗುವ ಮಾರ್ಗದಲ್ಲಿ ಾಪುರಕ್ಕೆ ಬಂದಿದ್ದರು. ಕೃಷ್ಣ ಪಂಡಿತರ ಪರಿಚಯ ಅವರಿಗಿತ್ತು ಆದ್ದರಿಂದ ಾಪುರಕ್ಕೆ ಬಂದಾಗ ಅವರ ಮಕ್ಕಳನ್ನು ನೋಡಿಕೊಂಡು ಹೋಗಲು ಅವರ ಮನೆಗೆ ನರು. ಭಾಗೀರಥಿಯು ಯತಿಗಳ ಯಥೋಚಿತ ಆದರೋಪಚಾರಗಳನ್ನು ಡಿದಳು. ಅನಂತರ ಕುಶಲೋಪರಿ ಸಂಭಾಷಣೆಯಲ್ಲಿ ತನ್ನ ತಮ್ಮನ ಕುರಿತು ಿಯನ್ನು ವ್ಯಕ್ತಪಡಿಸಿದಳು. ಅದನ್ನು ಕೇಳಿ ಯತಿಗಳಿಗೂ ಕೆಡುಕೆನಿಸಿತು. ಅವರು ಿಕ ರುಕ್ಮಾಂಗದನನ್ನು ಹತ್ತಿರ ಕರೆದು ಅವನ ಬೆನ್ನಮೇಲೆ ಕೈಯಾಡಿಸಿದರು. ತಿಯಿಂದ ಅವನೊಂದಿಗೆ ನಾಲ್ಕು ಮಾತುಗಳನ್ನಾಡಿದರು. ಅವರ ಮಾತಿನ ಕಾಮವು ರುಕ್ಮಾಂಗದನ ಮೇಲೆ ಚೆನ್ನಾಗಿಯೇ ಆಯಿತು. ಅಂದಿನಿಂದ ್ಮಾಂಗದನ ಜೀವನದ ಗತಿ ಬದಲಾಯಿತು. ಗೌರಾನಂದರು ಅವನ ಮಸ್ತಕದ ೆ ಕೈಯನ್ನಿಟ್ಟು ಉಪದೇಶಿಸಿದರು. ಮರುದಿನ ಕಾಶಿಗೆ ಹೋದರು. ್ಮಾಂಗದನು ಅಭ್ಯಾಸದತ್ತ ಲಕ್ಷ್ಯಕೊಟ್ಟನು. ಶಾಸ್ತ್ರಗಳ ಅಭ್ಯಾಸವಾಯಿತು. ಿಗೆ ಸಂಗೀತ, ವೈದ್ಯಕೀಯ ಶಿಕ್ಷಣಗಳಲ್ಲೂ ಆಸಕ್ತಿಯಿಂದ ಅಭ್ಯಾಸ ಿದನು. ತುಸು ದಿನಗಳಲ್ಲೇ ಎಲ್ಲದರಲ್ಲೂ ಪರಿಣತನಾದನು. ವಿಶೇಷವಾಗಿ ಿಸಿದ ವೈದ್ಯಕೀಯದಿಂದ ಜನರು ಹತ್ತಿರ ಬರುವಂತಾಗಿ ರುಕ್ಮಾಂಗದನು ಜನರ ುಲ್ಲಿ ರುಕ್ಮಾಂಗದ ಪಂಡಿತರಾದರು. ವೈದ್ಯಕೀಯದ ಜೊತೆಗೆ ವೈದ್ಯ ಯನ್ನೂ, ಔಷಧಗಳ ತಯಾರಿಕೆಯನ್ನೂ ಪ್ರಾರಂಭಿಸಿದರೆಂದು ಹೇಳಿಕೆ ಇದೆ. ವೈದ್ಯಶಾಲೆಯಲ್ಲಿ ಕಲಿತ ಒಂದೆರಡು ಮನೆತನಗಳು ಇಂದಿಗೂ ವಿಜಾಪುರ ಿವಾಡಗಳಲ್ಲಿ ಆಯುರ್ವೇದ ವಿದ್ಯೆಯನ್ನು ಮುಂದರಿಸಿಕೊಂಡು ವೃತ್ತಿಯಲ್ಲಿದ್ದವರಿದ್ದಾರೆಂದೂ ಹೇಳಲಾಗುತ್ತದೆ. ಶಾಸ್ತ್ರಗಳ ಅಭ್ಯಾಸದಿಂದ ್ನು ಆಧ್ಯಾತ್ಮಿಕತೆಯತ್ತ ಒಲಿಯಿತು. ಮನ ವಿಠಲನಲ್ಲಿ ರಮಿಸಿತು. ವಿಜಯ ನಲ್ಲಿಯ ಅವರ ಅನನ್ಯ ಭಕ್ತಿ ಅವನ ಕುರಿತು ಪ್ರತಿನಿತ್ಯ ಭಜನೆ ಕೀರ್ತನೆಗಳಿಗೆ

ಂಭವಾದಾಗ ಇನ್ನಷ್ಟು ಜನರು ಅವರ ಹತ್ತಿರ ಬರುವಂತಾದರು. ಇಹ-ಪರ
ನಯ ವ್ಯಾಧಿಗಳಿಗೂ ಔಷಧ ಕೊಡುವ ವೈದ್ಯರೆಂದು ಪ್ರಸಿದ್ಧರಾದರು. ಭವರೋಗ
ದ್ಯ ಎಂಬುದು ಅವರ ಇನ್ನೊಂದು ಹೆಸರಾಯಿತು. ರುಕ್ಮಾಂಗದ ಪಂಡಿತರ ಇಷ್ಟ
ವತವಾದ ವಿಜಯ ವಿಠಲನ ಮೂರ್ತಿಯನ್ನು ಅವರು ವಿಜಾಪುರದಲ್ಲಿಯೇ
ತಿಷ್ಠಾಪಿಸಿದರು. ಹೀಗಾಗಿ ಅವರು ವಿಠಲನನ್ನು ಕಾಣಲು ಪಂಢರಪುರಕ್ಕೆ ಹೋಗುವ
ವಶ್ಯಕತೆಯು ಬೀಳಲಿಲ್ಲ. ಆದ್ದರಿಂದ ಪಂಢರಪುರದ ವಿಠಲನು ತಾನೆಯೇ
ೀಗಿಯಾಗಿ ರುಕ್ಮಾಂಗದ ಪಂಡಿತರನ್ನು ಚಿಕಿತ್ಸೆಗಾಗಿ ಪಂಢರಪುರಕ್ಕೆ ಕರೆಸಿದನೆಂಬ
ತೆಯೊಂದು ಮರಾಠಿ ಚರಿತ್ರೆಯಲ್ಲಿ ಬರುತ್ತದೆ. ಹೀಗೆ ಪಂಢರಪುರಕ್ಕೆ ಅವರು
ೋದ ನಿಶ್ಚಿತ ದಿನವನ್ನೂ ಕವಿ ಹೇಳುತ್ತಾನೆ. 'ಶಕ ೧೫೬೮ ವ್ಯಯನಾಮ ಸಂವತ್ಸರ
ಷಾಢ ಶುದ್ಧ ಏಕಾದಶಿ ಸುತವಾರ' ವೆಂದು ಹೇಳಲಾಗಿದೆ. ಪಂಢರಪುರದಲ್ಲಿ
ವರಿಗೆ ತುಕಾರಾಮನ ಭೆಟ್ಟಿಯಾಯಿತು.//೧೨// ಅನಂತರ ಅಲ್ಲಿ ರುಕ್ಮಾಂಗದ
ಂಡಿತರ ಹರಿಕೀರ್ತನೆಯನ್ನು ಕೇಳಿ ಏಕನಾಥ ಮಹಾರಾಜರ ಮೊಮ್ಮಗ
ವರಾಮನು ಅಭ್ಯಾಸಕ್ಕಾಗಿ ಅವರೊಂದಿಗೆ ವಿಜಾಪುರಕ್ಕೆ ಬಂದನೆಂದು ಅಪ್ರಕಟಿತ
ಪೂರ್ಣಾನಂದ ಚರಿತ್ರೆ' ಎಂಬ ಮರಾಠಿ ಹಸ್ತಪ್ರತಿ ಹೇಳುತ್ತದೆ.//೧೩//

ಮರಾಠಿ ರುಕ್ಮಾಂಗದ ಚರಿತ್ರೆಗೆ ಗುರುಮಾಲಿಕೆ -ಗುರು ವಂಶಾವಳಿ ಎಂಬ
ಹೆಸರುಗಳೂ ಇವೆ. ಅದರಲ್ಲಿ ರುಕ್ಮಾಂಗದರ ಅನೇಕ ಪವಾಡಗಳನ್ನು ಹೇಳಲಾಗಿದೆ.
ಲವು ಚಾರಿತ್ರಿಕ ಅಂಶಗಳುಳ್ಳ ಕಥೆಗಳೂ ಇವೆ. ಅವುಗಳಲ್ಲಿ ವಿಜಾಪುರದ ಬಾದಶಹ
?)ನು ಪಂಡಿತರ ಸಂಗೀತವನ್ನು ಕೇಳಲು ಛದ್ಮವೇಷದಲ್ಲಿ ಅವರ ಮನೆಗೆ ಬಂದ
ಥೆಯೂ ಚರಿತ್ರೆಯಲ್ಲಿ ಒಂದೆಡೆ ಬಂದಿದೆ.//೧೪// ಬಾದಶಹನ ಹೆಸರಿ
ಉಲ್ಲೇಖವಿಲ್ಲ. ಆದರೆ ವಿಜಾಪುರದ ಬಾದಶಹರಲ್ಲಿ ಎರಡನೆಯ ಇಬ್ರಾಹಿಮ
ಆದಿಲಶಹನಿಗೆ ಸಂಗೀತದ ಹುಚ್ಚು ಇತ್ತು. ಬಹುಶಃ ಆತನೇ ಬಂದಿರಲೂಬಹುದು
ಈ ಮೊದಲು ಉಲ್ಲೇಖಿಸಿದ ಉರ್ದು ಹಸ್ತಪ್ರತಿ 'ಶಾಹಿಪತ್'ದಲ್ಲಿಯ ರುಕ್ಮಾಂಗ
ಹಾಗೂ ಇಬ್ರಾಹಿಮರ ಉಲ್ಲೇಖವು ಇದನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ.

ಅಂತು ಹೀಗೆ ಬಂದ ರುಕ್ಮಾಂಗದರ ವ್ಯಕ್ತಿತ್ವವನ್ನು ಗಮನಿಸುವಾಗ, ವಿಜಯನಗ
ಪತನಾನಂತರ ಹಿಂದು ಧರ್ಮ, ಸಂಸ್ಕೃತಿಗಳು ಅಳಿಸಿ ಹೋಗಲಿಲ್ಲ ಎಂಬ ಮಾತನ
ನೆನೆಯಬೇಕು. ರುಕ್ಮಾಂಗದರು, ಹಂಪಿಯ ಗೌರಾನಂದ ಯತಿಗಳಿಂ
ಉಪದೇಶವನ್ನು ಪಡೆದರು. ಇಷ್ಟ ದೈವತವು ಬರೀ 'ವಿಠಲ'ವಾಗಿರದೆ 'ವಿಜಯ
ವಿಠಲ' ನಾಗಿರುವುದು ವಿಶೇಷವಾಗಿದೆ. ಅವರು ಪ್ರತಿಷ್ಠಾಪಿಸಿದರೆಂಬ ವಿಠಲ
ಮಂದಿರ ಇನ್ನೂ ವಿಜಾಪುರದಲ್ಲಿದೆ. ಜೊತೆಗೆ ವಿಜಯನಗರ ಪತನಾನಂತರದ ಕೆಲ
ದಿನಗಳಲ್ಲಿ ಬಾಳಿ -ಬದುಕಿದವರು. ಈ ದೃಷ್ಟಿಯಿಂದ ರುಕ್ಮಾಂಗದರ ಪಾತ್ರ
ಐತಿಹಾಸಿಕವಾಗಿಯೂ ಮಹತ್ವದ್ದಾಗುತ್ತದೆ. ಹಿಂದೂ ಧರ್ಮ-ಸಂಸ್ಕೃತಿಗಳ

ಾಳಿಸಿ ಬೆಳೆಸುವುದಲ್ಲದೆ ಒಂದು ಹಂತದಲ್ಲಿ ಇಬ್ರಾಹಿಮ ಆದಿಲಶಹನನ್ನು ಹಿಂದೂ ರ್ಮದತ್ತ ತಿರುಗಿಸಿದರೆಂಬುದು ಇನ್ನಷ್ಟು ಮಹತ್ವದ್ದೆನಿಸುತ್ತದೆ. ಅಂತೆಯೇ ಈ ಶೆಯಲ್ಲಿ ಇನ್ನಷ್ಟು ಸಂಶೋಧನೆಯ ಅಗತ್ಯ ಕಂಡು ಬರುತ್ತದೆ.

ಧರ್ಮ ಸಂಸ್ಕೃತಿಗಳ ಸಂರಕ್ಷಣೆಯ ಜೊತೆಗೆ ಸಾಹಿತ್ಯದಲ್ಲಿಯೂ ಪಂಡಿತರು ಕೃಷಿ ಾಡಿದ್ದರೆಂಬುದು ವಿಶೇಷವಾಗಿದೆ. ಅವರು ರಚಿಸಿದ ಕನ್ನಡ, ಮರಾಠಿ ಭಾಷೆಗಳ ಿಗಳು ದೊರೆಯುತ್ತವೆ. ಅವುಗಳನ್ನು ಅವರು ಸ್ವತಃ ರಾಗ ಬದ್ಧವಾಗಿ ಾಡುತ್ತಿದ್ದರು. ಮರಾಠಿ ರುಕ್ಮಾಂಗದರ ಚರಿತ್ರೆಯಲ್ಲಿ ಹೇಳುವಂತೆ ಾಲ್ಯದಿಂದಲೇ ಸಂಗೀತದ ಹುಚ್ಚು ಇದ್ದ ರುಕ್ಮಾಂಗದರ ದನಿ ಸುಸ್ವರವಾಗಿತ್ತು, ಂಜುಳವಾಗಿತ್ತು, ಅವರ ದನಿಯನ್ನು ಕೇಳಿದವರು, ಅವರನ್ನು ಪ್ರತ್ಯಕ್ಷ ನಾರದ ಂಬುರರ ಅವತಾರವೆಂದು ಹೇಳುತ್ತಿದ್ದರು. ಯಕ್ಷ-ಕಿನ್ನರರ ಕಂಠ ಮಾಧುರ್ಯ ರದಾಗಿತ್ತು, ಅವರು ಹರಿಕಥೆಯನ್ನು ಹೇಳುವಾಗ ಅಲ್ಲಿ ಪಾಂಡುರಂಗನ ನಿಧ್ಯವಿರುತ್ತಿತ್ತು, ಅವರ ತನ್ಮಯತೆಗೆ ಶ್ರೀರಂಗ ಕೂಡ ನೃತ್ಯಮಾಡುತ್ತಿದ್ದನು'' ೧೫// ಈ ನೃತ್ಯಗಾಯನ, ಹರಿಕಥೆಯ ಸಂಪ್ರದಾಯವು ವಿಜಯನಗರದಿಂದಲೇ ದುದೆಂದು ಬೇರೆ ಹೇಳಬೇಕಾಗಿಲ್ಲ. ವಿಜಯನಗರದಲ್ಲಿ ಕಡಿದುಹೋದ ೀರ್ತನೆ -ಹರಿಕಥೆಯ ಸಂಪ್ರದಾಯವು ವಿಜಾಪುರದಲ್ಲಿ ಮುಂದುವರೆಯಿತು. ್ನೊಂದೆಡೆ ಕವಿಯು ಹೇಳುವಂತೆ ''ರುಕ್ಮಾಂಗದರು ಅಪರಿಮಿತ ಗ್ರಂಥಗಳನ್ನು ಚಿದ್ದಾರೆ. ಪ್ರಾಕೃತ, ಸಂಸ್ಕೃತ, ಕನ್ನಡ, ಹಿಂದಿ, ದ್ರವಿಡ, ಅರಬಿ ಹಾಗೂ ತೆಲಗು ಷೆಗಳಲ್ಲಿ ಕರುಣ ಪರವಾದ, ಶೃಂಗಾರ ರಸಪೂರಿತವಾದ ಹಾಗೂ ್ಯಾತ್ಮ ಪರವಾದ ಕೃತಿಗಳನ್ನು ರಚಿಸಿದ್ದಾರೆ.''//೧೬// ಎಂದೂ ಹೇಳಲಾಗಿದೆ. ರು ಬಹು ಭಾಷೆಗಳಲ್ಲಿ ಕೃತಿಗಳನ್ನು ರಚಿಸಿರುವ ಸಾಧ್ಯತೆ ಇದೆ. ಈವರೆಗೆ ದೊರೆತ ವು ಕೃತಿಗಳಲ್ಲಿ ೨೫ ಕನ್ನಡ ಪದಗಳನ್ನು, ೩೫ ಮರಾಠಿ ಕೃತಿಗಳನ್ನು ಹಾಗೂ ಕೆಲವು ೃತ ಸ್ತೋತ್ರಗಳನ್ನು ವಿಜಾಪುರದ ರುಕ್ಮಾಂಗದ ಮಂಡಳದವರು ಪ್ರಕಟಿಸಿದ್ದಾರೆ. ಕಟಿತ ಕನ್ನಡ-ಮರಾಠಿ ಸಾಹಿತ್ಯ ಹಸ್ತಪ್ರತಿಯಲ್ಲೂ ಉಳಿದಿದೆ. ರುಕ್ಮಾಂಗದರ ಾಜಿಕ ಕಾರ್ಯ, ಹಾಗೂ ಅವರ ಕೃತಿಗಳ ಅವಲೋಕನವೇ ಒಂದು ಪ್ರತ್ಯೇಕ ಂಥವಾಗುವಷ್ಟು ಇದೆಯಾದ್ದರಿಂದ ಇಲ್ಲಿ ವಿಜಯನಗರ ಪತನಾನಂತರದ ಾಸ ಸಾಹಿತ್ಯವನ್ನು ಮುಂದುವರಿಸಿದ ಮೊದಲಿಗರೆಂಬ ಕಾರಣದಿಂದ ಅವರ ೆರಡು ಕೀರ್ತನೆಗಳನ್ನು ನೋಡಬಹುದು.

ರುಕ್ಮಾಂಗದರ ಅಂಕಿತವು 'ರುಕ್ಮ', 'ರುಕ್ಮೇಶ' ಹಾಗೂ 'ರುಕ್ಮಭೂಪ' ಾಗಿತ್ತು. ಅವರದು ಶೈವಸಂಪ್ರದಾಯವಾದರೂ ಅವರ ಕೃತಿಗಳು ಭಾಗವತ ರದವುಗಳು. ಕೃಷ್ಣನ ಕುರಿತಾದ ಅವರ ರಚನೆಗಳನ್ನು ಗಮನಿಸಿದಾಗ, ಪದ ರಚನೆ, ಂಧ ಹಾಗೂ ಅರ್ಥಗಳಲ್ಲಿ ಈ ಮೊದಲಿನ ಯಾವ ಹರಿದಾಸರ ಕೃತಿಗಳಿಗೂ

ಮೆ ಇಲ್ಲ ಎನಿಸುತ್ತದೆ.

'ದುರಿತ ಭಂಜನ ನರಹರಿಯೆ
ಪರಿ-ಪರಿಯಿಂದ ಸಲಹು ಶ್ರೀ ವೈಕುಂಠ ಧೊರಿಯೆ ।।ಪ।।
ಬ ಪೂರಿಯಾ ರಾಗದ ತ್ರಿತಾಳ ಪದದಲ್ಲಿ
ನಿನ್ನ ದಾಸರ ದಾಸ ನಾನು। ಯನ್ನವರು ದಾಸರ ದಾಸರಲ್ಲೇನು।।
ಇನ್ನು ಒದಗದೆ ಇಹುದೇನು। ಉನ್ನತ ಬಿರುದುಗಳು ನಿನಗಿಲ್ಲವೇನು ।।೧।।
ದು ಕೇಳಿದ್ದಾರೆ.//೧೭// ಅವರು 'ಹರಿದಾಸ' ಪಂಥವನ್ನು ಒಪ್ಪಿಕೊಂಡವರು.

ಕೃಷ್ಣನ ಬಾಲಲೀಲೆ ಹರಿದಾಸರ ನೆಚ್ಚಿನ ವಿಷಯ. ಅವನ ಬಾಲ ಲೀಲೆಗಳನ್ನು
ರು ಎಷ್ಟು ಪರಿಯಿಂದ ವರ್ಣಿಸಿದರೂ ತಣಿಯರು. ರುಕ್ಮಾಂಗದರೂ ಇದಕ್ಕೆ
ರತಾಗಿರಲಿಲ್ಲ. ಮಿಶ್ರ ಪೀಲೂ ರಾಗದ ಒಂದು ಪದದಲ್ಲಿ ಸುಂದರವಾದ
ನೆಯಿದೆ. 'ಚಿಕ್ಕವನೇನೆ ಮಿಕ್ಕಾದಂಥ, ಮಕ್ಕಳಿಲ್ಲೇನೆ ನಿಮ್ಮವರೋಳು' ಎಂದು
ರಂಭವಾಗುವ ಕೀರ್ತನೆಯಲ್ಲಿ ಚೆಂಡಾಟದಲ್ಲಿಯ ಬಾಲಕೃಷ್ಣನ ಭಂಡತನ
ಗೂ ಗೋಪಿಯರೊಡನಾದ ಸರಸವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.
:.೧)

ಇನ್ನು ಕೆಲವು ಪದಗಳಲ್ಲಿ 'ಪುಂಡಲೀಕ ವರದನೇ ಕುಂಡಲೀಶಯನನೇ' (ಕೀ-೭)
ನ್ನನು ನೀ ಮರೆವರೆ ಮೋಹನ್ನ ದೈವತರನ್ನ ವಿಠಲರಾಯಾ' (ಕೀ-೯),
ರಿಯೇ ಸರ್ವ ಸಾರವೆಂದು ಸಾರುವರು' (ಕೀ-೧೧), 'ಸಕಲ ದಿವಿಜಾರಾಧ್ಯ
ಣಾ' (ಕೀ-೧೨), 'ಹರಿ ಗೋರಸ ಕಡಿದು ನೋಡಿರೊ' (ಕೀ-೧೩), 'ಕೇಳಯ್ಯ
ಗಯ್ಯ' (ಕೀ-೧೫), 'ಮದನನಯ್ಯ ಮೋಹನ್ನರಾಯಾ ನೀ ಬಾರೋ'
:-೧೯) 'ಅಂಗನೆ ನಮ್ಮ ರಂಗನೆ ಮುನಿದನ್ಯಾತಕೆ ಪ್ರಾಣಲಿಂಗನೆ' (ಕೀ-೨೦)
ಂದ ನೋಡಮ್ಮ ಗೋಪಿಯ ಕಂದ' (ಕೀ-೨೩) ಮೊದಲಾದ ಕೀರ್ತನೆಗಳು
ಕ್ಮಾಂಗದರು ಶೈವ ಸಂಪ್ರದಾಯದವರೆಂದು ಹೇಳುವದು ಕಠಿಣವೆನಿಸುವಷ್ಟು
ಗವತ ಸಂಪ್ರದಾಯದವುಗಳಾಗಿವೆ. ಅವರು ನಾಥ ಸಂಪ್ರದಾಯದವರೆಂದೂ
ದು ಪ್ರತೀತಿ ಇದೆ. ಹರಿದಾಸ್ಯದಲ್ಲಿ ಬಹುಶ: ಈ ಸಂಪ್ರದಾಯಗಳ ತಾಕಲಾಟಗಳು
ಸುವುದಿಲ್ಲವೆಂದು ಕಾಣುತ್ತದೆ. ಹರಿದಾಸರಿಗೆ ಹರಿಯ ಕರುಣೆಯ - ಸಾಕ್ಷಾತ್ಕಾರದ
ಬಲ ಒಂದೇ. ಅಂತೆಯೇ ರುಕ್ಮಾಂಗದರು ತಮ್ಮ ಒಂದು ಪದ್ಯದಲ್ಲಿ 'ಕಂಡ
ವಕ್ಕೆ ಕಂಗೆಟ್ಟು ಕೈಮುಗಿದು ದಣಿದಿಯಾಕೋ' (ಕೀ-೨೧) ಎಂದು ಕೇಳಿದ್ದಾರೆ.
ನ್ನೊಂದೆಡೆ 'ವಸ್ತು ತಾ.ಬೇರೆ ಆದೆ! ನಿಜ ವಸ್ತು ಅರಿತವಾ ಬಲ್ಲಾ।।' (ಕೀ-೧೦)
ಬ ಕೀರ್ತನೆಯಲ್ಲಿ, ನೀರಲ್ಲಿ ಮುಳುಗಿ ನೇಮ ಮಾಡುವುದನ್ನೂ, ಕಣ್ಣು ಮುಚ್ಚಿ
ಣಿಗಳನ್ನು ಎಣಿಸುವದನ್ನು, ಹೊನ್ನು ಹೆಣ್ಣಿಗೆ ಮೆಚ್ಚಿ ಬಣ್ಣದ ಮಾತನಾಡಿ

ಚಿನ್ನಿಗತನದಿಂದ ತಿರ...ವುದನ್ನು ಎತ್ತಿ ತೋರಿಸಿದ್ದಾರೆ. ಅದರಲ್ಲಿಯೇ
ಜೊನ-ಮನ್ನಣೆಗಾಗಿ ಜ್ಞಾನದ ಮಾತುಗಳನ್ನಾಡಿ, ಮನ್ನಣೆಯಾಗದಿದ್ದರೆ,
ಮೌನಗಳನ್ನೂ ತೋರಿಸುತ್ತ ಭಾನ್ಸಸತನದಿಂದ ಜನರನ್ನು ದೂರುತ್ತಾರೆ. ಮ
ಸ್ವಚ್ಛಮಾಡಿ, ಕ್ಷುಲ್ಲಕ ತನವನ್ನು ಬಿಟ್ಟು ರುಕ್ಮಭೂಪನನ್ನು ಕೂಡಿ ಸ
ದಾರಿಯನ್ನು ಹೇಳಿದ್ದಾರೆ.

ರುಕ್ಮಾಂಗದರ ಕೀರ್ತನೆಗಳಲ್ಲಿ ನೇರಮಾತು ಸುಲಭವಾಗಿ ಅರ್ಥ
ಶಬ್ದಗಳು, ಅಲ್ಲಲ್ಲಿ ಉಪಯೋಗಿಸಿದ ಆಡು ಭಾಷೆಯ 'ಭಾನ್ಸಸ' '
'ಝುಕ್ಕಿಸದೆ' 'ಮಲಕು' 'ಕಲಕು' ಮುಂತಾದ ಶಬ್ದಗಳು ಗಮನಾರ್ಹವಾಗಿ

ರುಕ್ಮಾಂಗದ ಪಂಡಿತರನ್ನು ರುಕ್ಮಣ್ಣ, ರುಕ್ಮಪಂಡಿತ, ರುಕ್ಮಣ್ಣಾ
ರುಕ್ಮಿಣಿ ಪಂಡಿತ ಎಂಬ ಹೆಸರುಗಳಲ್ಲೂ ಕರೆಯುತ್ತಾರೆ. ಅವರು ಗೌ
ಯತಿಗಳಿಂದ ಉಪದೇಶ ಪಡೆದಿದ್ದರಷ್ಟೆ. ಕೊನೆಗೆ ಅವರಿಂದಲೇ
ಆಶ್ರಮವನ್ನು ಪಡೆದು 'ರುಚಿರಾನಂದ ಸರಸ್ವತಿ' ಎಂಬ ಹೆಸರನ್ನು ಪ
ರುಕ್ಮಾಂಗದರಿಗೆ ನಾಲ್ಕು ಜನ ಪ್ರಮುಖ ಶಿಷ್ಯರು. ದತ್ತೋಪಂತ, ಮಾಲೊ
ಗೋವಿಂದ ಹಾಗೂ ರಾಯಾಜಿಪಂತ. ಇವರಲ್ಲಿ ರಾಯಾಜಿಪಂತನು
ರಾಜಕಾರಣದಲ್ಲಿ ಪ್ರಭಾವಯುತ ವ್ಯಕ್ತಿ. ದೊಡ್ಡ ಅಧಿಕಾರದಲ್ಲಿದ್ದವನು.
ತನ್ನ ಬಾಳಿನ ಕೊನೆಯ ದಿನಗಳಲ್ಲಿ ರುಕ್ಮಾಂಗದರಿಂದ ದೀಕ್ಷೆ
'ರಾಜೀವಾನಂದ' ಎಂದು ಹೆಸರು ಪಡೆದಿದ್ದಾನೆ. 'ರುಕ್ಮಜ ದಾಸ ಕಿಂಕರ'
ಹೆಸರೂ ಈತನದೇ ಆಗಿರಬೇಕು. ರುಕ್ಮಾಂಗದರ ಮರಾಠಿ ಚರಿತ್ರೆ
ಮಹಿಪತಿರಾಯರ ಉಪಲಬ್ಧ ಒಂದು ಅಧ್ಯಾಯಗಳನ್ನು ಈ ರಾಜೀವಾನ
ಬರೆದಿರುವ ಸಾಧ್ಯತೆ ಇದೆ. ಈತ 'ಶಕೆ ೧೬೧೫ ಶ್ರೀ ಮುಖ ವರ್ಷ ವೈಶಾಖ
ಪೌರ್ಣಿಮೆಯ ಗುರುವಾರದಂದು' ಬರೆದು ಮುಗಿಸಿದ ಜ್ಞಾನೇ
ಹಸ್ತಪ್ರತಿಯೊಂದು ವಿಜಾಪುರದ ಶ್ರೀ ಭೀಮಭಟ್ಟರ ಮನೆಯಲ್ಲಿದೆ. ಅದು ಈ
ದೊರೆತ ಜ್ಞಾನೇಶ್ವರಿಯ ಹಳೆಯ ಹಸ್ತಪ್ರತಿಗಳಲ್ಲಿ ಮೂರನೆಯದು. ತನ್ನ ಹೆ
'ವಿಠಲಸೂನು ರಾಯಾಜಿ ಕುಲಕರ್ಣಿ ಜಾಲಗಿರಿ ಲಿಖಿತಂ' ಎಂದು ಹೇಳಿಕೊಂಡಿ

ರುಕ್ಮಾಂಗದರಿಗೆ ಒಬ್ಬ ಗಂಡು ಮಗನಿದ್ದನು. ಆತನ ಹೆಸರು ಕೃಷ್ಣ
ಎಂದಾಗಿತ್ತು. ಅವನು ಬಾಲ್ಯದಿಂದಲೇ ವಿರಕ್ತನಾಗಿದ್ದರಿಂದ ಮುಂದೆ ಪಂಡಿತರ
ಬೆಳೆಯಲಿಲ್ಲ ಎಂದು ಹೇಳಲಾಗುತ್ತದೆ. ರುಕ್ಮಾಂಗದರು ಮಹಿಪತಿರಾಯ
೫೦-೬೦ ವರುಷ ಹಿರಿಯರು. ಅವರ ಗುರುವಂಶ ಪರಂಪರೆ ಹೀಗಿದೆ.

ಶಕ್ತಿ-- ಪರಾಶರ-- ವ್ಯಾಸ-- ಶುಕ-- ಗೌಡಪಾದಾಚಾರ್ಯ-- ಆದಿಶಂ



ಜ್ಞಾನಾನಂದ-- ವಾಸುದೇವಾನಂದ-- ರಾಘವಾನಂದ-- ... 
ಶಿರಾನಂದ-- ರುಚಿರಾನಂದ (ರುಕ್ಮಾಂಗದ)-- ರಾಜೀವಾನಂದ .... ಇತ್ಯಾದಿ.

.೨.೩. ಸಿಂದಗಿಯ ಅಯ್ಯನವರು:

ಸಿಂದಗಿಯ ಬಿಂದಗಿಯು ನಾಡಿನ ಉದ್ದಗಲಕ್ಕೂ ಪ್ರಸಿದ್ಧವಾಗಿದೆ. ಆಶ್ವೀನ ಮಾಸದ ಕೃಷ್ಣ ಪಕ್ಷ ದ್ವಿತೀಯಾದಂದು ವಿಜಾಪುರ ಜಿಲ್ಲೆಯ ಸಿಂದಗಿಯ ಭೀಮಾಶಂಕರ ಮಠದಲ್ಲಿ ಬಿಂದಗಿಯ ಪೂಜೆಯಾಗುತ್ತದೆ. ಅರ್ಘಕೊಡದಷ್ಟು ನೀರು ತುಂಬುವ ಮಣ್ಣಿನ ಚಿಕ್ಕ ಬಿಂದಗಿಯನ್ನು ಅಂದೆಯೇ ಕುಂಬಾರನ ಮನೆಯಿಂದ ತಂದು ಪ್ರತಿಷ್ಠಾಪಿಸಿ, ನೂರಾರು ಜನ ಬ್ರಾಹ್ಮಣರ ಪಾದಪೂಜೆಯನ್ನು ಮಾಡಿದ ನೀರನ್ನು ಅದರಲ್ಲಿ ಹಾಕಿದರೂ ಅದು ತುಂಬುವದಿಲ್ಲ! ಪವಾಡಗಳನ್ನು ನಂಬದ ವೈಜ್ಞಾನಿಕವಾಗಿ ಮುಂದುವರಿದ ಇಂದಿನ ದಿನಗಳಲ್ಲಿ ಇದನ್ನು ನಂಬುವದು ಕಷ್ಟವಾದರೂ ಪ್ರತಿವರುಷ ಘಟನೆ ನಡೆಯುತ್ತದೆ.

ಸಿಂದಗಿಯ ಶ್ರೀ ಭೀಮಾಶಂಕರ ಮಠವು ಬಿಂದಗಿಯ ಮಹಾತ್ಮೆಯಿಂದಲೆ ಗುರುತಿಸಲ್ಪಡುತ್ತದೆ. ಆದರೆ ಅದಕ್ಕಿಂತ ಹೆಚ್ಚಾಗಿ ನಮ್ಮ ನಾಡಿನಲ್ಲಿ ಹೊಸದೊಂದು ಸಂಪ್ರದಾಯವನ್ನು, ನಾಥ-ಪಂಥವನ್ನು ಪ್ರಾರಂಭಿಸಿದ ಹಾಗೂ ಇಂದಿನವರೆಗೂ ಬೆಳೆಸಿಕೊಂಡು ಬಂದ ಹೆಗ್ಗಳಿಕೆ ಭೀಮಾಶಂಕರ ಮಠದ್ದಾಗಿದೆ. ಜೊತೆಗೆ ಮಧ್ಯಯುಗದಲ್ಲಿನ ಪರಕೀಯರ ಆಕ್ರಮಣದಿಂದ ಹಿಂದು ಧರ್ಮ-ಸಂಸ್ಕೃತಿಗಳು ನಶಿಸುತ್ತಿರುವಾಗ ಅವುಗಳನ್ನು ಎತ್ತಿ ಹಿಡಿದು, ತನ್ನ ಪರಿಮಿತಿಯಲ್ಲಿ ಜೀವಂತವಾಗಿ ಇಡುವ ಪ್ರಯತ್ನದಲ್ಲಿ ಶ್ರೀಮಠವು ಸಫಲವಾಗಿದೆ. ಭೀಮಾಶಂಕರರ ಮಠದ ಇತಿಹಾಸವೆಂದರೆ ಉತ್ತರ ಕರ್ನಾಟಕದಲ್ಲಿ ನಾಥ ಸಂಪ್ರದಾಯವು ಬೆಳೆದು ಬಂದ ಬಗೆಯ ಅಭ್ಯಾಸವೆನಿಸುತ್ತದೆ. ಆದರೆ ಈ ವರೆಗೆ ಅದನ್ನು ಕೂಲಂಕಷವಾಗಿ ಅಭ್ಯಸಿಸುವ ಪ್ರಯತ್ನ ಆಗಿಲ್ಲವೆಂದೇ ಹೇಳಬಹುದು.

ಮಹಾರಾಷ್ಟ್ರದ ಸುಪ್ರಸಿದ್ಧ ಸಂತ ಜ್ಞಾನೇಶ್ವರನ ಪ್ರಭಾವವು ಕರ್ನಾಟಕದಲ್ಲಿ ಬಹು ಹಿಂದಿನಿಂದಲೇ ಇತ್ತು. ದಕ್ಷಿಣ ಭಾರತದಲ್ಲಿ ಮುಸಲ್ಮಾನರ ದಾಳಿಗಳಿಂದ ತತ್ತರಿಸಿದ ಹಿಂದುಗಳು ಸುರಕ್ಷಿತ ಸ್ಥಳಗಳಿಗೆ ತೀರ ದಕ್ಷಿಣಕ್ಕೆ ವಲಸೆ ಬರುವಾಗ ಜೊತೆಗೆ ತಮ್ಮ ನಿತ್ಯದ ಪಾರಾಯಣ ಗ್ರಂಥಗಳಾದ ಜ್ಞಾನೇಶ್ವರನ ಜ್ಞಾನೇಶ್ವರಿ ಅನುಭವಾಮೃತ ಹಾಗು ಮುಕುಂದರಾಜನ ವಿವೇಕ ಸಿಂಧು ಮತ್ತು ಪರಮಾಮೃತ ಗ್ರಂಥಗಳನ್ನೂ ತಂದಿದ್ದರು. ತೀರ ದಕ್ಷಿಣದ ಮದ್ರಾಸದ ಹತ್ತಿರ 'ವಿವೇಕ ಸಿಂಧು'ವಿನ ೪ನೆಯ ಶತಮಾನದ ಹಸ್ತಪ್ರತಿಯು ದೊರೆತದ್ದು ಇದಕ್ಕೆ ಸಾಕ್ಷಿಯಾಗಿದೆ.//೧೮/ ಮುಂದೆ ೧೫ನೆಯ ಶತಮಾನದಲ್ಲಿ ಕಾರಂಜಾದ ನರಸಿಂಹ ಸರಸ್ವತಿಗಳು ಕರ್ನಾಟಕದ ಗಾಣಗಾಪುರದಲ್ಲಿಯೇ ವಾಸಿಸಿದರು. ಅವರ ಪಾರಾಯಣ ಗ್ರಂಥಗಳೂ ಇವ

ಆಗಿದ್ದವು. ಕರ್ನಾಟಕದಲ್ಲಿ ಮರಾಠಿ ಗ್ರಂಥಗಳ ಪ್ರಸಾರಕ್ಕೆ ನರಸಿಂಹ ಸರಸ್ವ
ಬಹಳಷ್ಟು ಕಾರಣರಾಗಿದ್ದಾರೆ.

ಅಲ್ಲಾಉದ್ದೀನ ಖಿಲ್ಜಿಯ ದಾಳಿಯ ಅನಂತರ ಮಹಾರಾಷ್ಟ್ರದ ಬಹಳಷ
ವಿಶೇಷತ: ದೇವಗಿರಿಯ ಸುತ್ತ-ಮುತ್ತಲಿನವರು ತಮ್ಮ ಸಾ
ಸರಂಜಾಮುಗಳೊಡನೆ ಬಂದು ಕೆಲವರು ಕಾವೇರಿ ದಂಡೆಯಲ್ಲಿ ಉಳಿದುಕೊ
ಈ ಜನಗಳಿಂದ ಜ್ಞಾನೇಶ್ವರ ಸಂಪ್ರದಾಯದ ಒಂದು ಶಾಖೆಯೂ
ಪ್ರಸಾರವಾಯಿತು. ಮರಾಠಿಯ ಖ್ಯಾತ ಸಂಶೋಧಕ ಶ್ರೀ ರಾ.ಚಿಂ.ಢೇರೆ
ಹೇಳುವಂತೆ ಕಾವೇರಿ ತೀರದಲ್ಲಿ ಪ್ರಸಾರವಾದ ಜ್ಞಾನೇಶ್ವರ ಪಂಥದ ಶಿಷ್ಯ ಪರ
ಹೀಗಿದೆ. ಜ್ಞಾನೇಶ್ವರ-- ಸೋಪಾನದೇವ-- ಮುಚಕುಂದ-- ಅವ್ಯಕ್ತನ
ಜನಾರ್ಧನ-- ಅಲಕ್ಷ್ಯನಾಥ-- ಅಚಿಂತ್ಯನಾಥ-- ತ್ರ್ಯಂಬಕನಾಥ
ಮುಂದುವರಿಯುತ್ತದೆ. ಈ ತ್ರ್ಯಂಬಕನಾಥನ ಇಬ್ಬರು ಶಿಷ್ಯರಲ್ಲಿ
ಮುಕುಂದರಾಜ, ಇನ್ನೊಬ್ಬ ಕೋನೇರಿನಾಥ. ಈ ಕೋನೇರಿನಾಥನ
ಲಿಂಗನಾಥನು ಕರ್ನಾಟಕದ ಚಂದಿ-ಚಂದಾವರದಲ್ಲಿ ನಲೆಸಿದ್ದನು.
'ಅಮೃತಸಾರ' ಎಂಬ ಯೋಗಶಾಸ್ತ್ರದ ಗ್ರಂಥವು ಲಭ್ಯವಿದೆ. ಅದನ
೧೬೪೬ರಲ್ಲಿ ಚಂದಾವರದಲ್ಲಿಯೇ ಬರೆದನು ಎಂದು ಶ್ರೀ
ಹೇಳುತ್ತಾರೆ.//೧೯//

ಇಂಥದೇ ಒಂದು ಶಾಖೆ ಸಿಂದಗಿಯಲ್ಲಿ ಪ್ರಾರಂಭವಾಯಿತು. ಸಿಂದಗಿಯ
ಪರಂಪರೆಯಲ್ಲಿ ಕೂಡ ಈ ಮೊದಲು ಹೇಳಿದ ಜ್ಞಾನದೇ
ಅಚಿಂತ್ಯನಾಥನವರೆಗೆ ಅದೇ ಪರಂಪರೆ ಬಂದಿದೆ. ಅಚಿಂತ್ಯನಾಥನ ಅನಂತರ
ತೀರದಲ್ಲಿ ತ್ರ್ಯಂಬಕನಾಥ ಹಾಗೂ ಅವನ ಇಬ್ಬರು ಶಿಷ್ಯರಲ್ಲಿ ಒ
ಕೋನೇರಿನಾಥನಿಂದ ಸಂಪ್ರದಾಯ ಮುಂದುವರಿದಿದ್ದರೆ ಇಲ್ಲಿ ಸಿಂದ
ಅವ್ಯಕ್ತನಾಥ-- ಭಿಕ್ಷುಕನಾಥ-- ರಾಮನಾಥನಿಂದ ಮುಂದುವರಿದಿದೆ.

ಸಿಂದಗಿಯ ಮಠದಲ್ಲಿ ಪರಂಪರೆಯಿಂದ ಕೇಳಿ ಬರುವ ಕಥೆಯ ಪ್ರಕಾರ
ಮೂಲ ಪುರುಷ ರಾಮನಾಥ ಬಂದುದೂ ಶಿವಕಂಚಿಯಿಂದ. ಆದರೆ ಮೊದ
ಹೆಸರನ್ನು ಬಸವೇಶ್ವರ ಎಂದು ಹೇಳಿಕೊಂಡಿದ್ದಾನೆ. ಕಥೆಯು ಸಂಕ್ಷಿಪ್ತವಾಗಿ ಹಿ

ಸಿಂದಗಿ ತಾಲೂಕಿನ ಮಾಣ್ಯಾಳ (ಮಹಾಶಿವಾಲಯ) ಹಾಗು ಭ
ಗ್ರಾಮಗಳ ಕುಲಕರ್ಣಿ ಗುರಪ್ಪ ಒಂದು ದಿನ ತನ್ನ ಹೊಲದಲ್ಲಿ ಒಬ್ಬ
ಪುರುಷನು ಸಿದ್ಧಾಸನದಲ್ಲಿ ಕುಳಿತಿರುವುದನ್ನು ಕಂಡನು. ಅವನನ್ನು ವಿಚಾ
ಆತನ ಹೆಸರು ಬಸವೇಶ್ವರನೆಂದೂ, ಶಿವಕಂಚಿಯಿಂದ ಬಂದುದಾಗಿಯೂ

ಸೇಶ್ವರನಿಂದ ಪ್ರಭಾವಿತನಾದ ಗುರಪ್ಪ ಒಂದು ದಿನ ಅವನಿಂದ ಗುರೂಪದೇಶ
ಸುಲು ಬಯಸಿದ. ಆಗ ಬಸವೇಶ್ವರನು ಗುರಪ್ಪನಿಗೆ 'ರಾಮತಾರಕ' ಮಂತ್ರವನ್ನು
ದೇಶಿಸುತ್ತಾನೆ. ಗುರಪ್ಪ ಆಶ್ಚರ್ಯದಿಂದ ಹೆಸರು ಬಸವೇಶ್ವರ, ಆದರೆ ಉಪದೇಶ
ಂತಾರಕ ಮಂತ್ರ ಎಂದು ಕೇಳಿದಾಗ ಬಸವೇಶ್ವರನು ತನ್ನ ನಿಜವಾದ ಹೆಸರು
ಂನಾಥನೆಂದೂ ತಾನು ನಾಥ ಸಂಪ್ರದಾಯದವನೆಂದೂ ಹೇಳಿ ಈ ವಿಷಯವನ್ನು
ಪ್ಯವಾಗಿಡಲು ಕೇಳಿಕೊಳ್ಳುತ್ತಾನೆ.//೨೦//

ಬಹುಶಃ ಇದಕ್ಕೆ ಕಾರಣವೆಂದರೆ ದಕ್ಷಿಣದಲ್ಲಿ ನಾಥ ಸಂಪ್ರದಾಯದ ವಿರುದ್ಧ
ಾಯವೆದ್ದಿರಬೇಕು. ಸ್ಥಾನಭ್ರಷ್ಟನಾದ ರಾಮನಾಥನು ಸಿಂದಗಿಯ ಹತ್ತಿರ ವಲಸೆ
ಾಗ ಅವನಿಗೆ ಪುನಃ ತನ್ನ ಸಂಪ್ರದಾಯವನ್ನು ಪ್ರಾರಂಭಿಸಲು ಆಸ್ಪದ
ಸಿರಬೇಕು. ದಕ್ಷಿಣ ಭಾರತದಲ್ಲಿ ನಾಥ ಸಂಪ್ರದಾಯದ ಇನ್ನಷ್ಟು ಅಭ್ಯಾಸ ಈ
ಸುದಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದು.

ಗುರಪ್ಪನು ರಾಮತಾರಕ ಮಂತ್ರೋಪದೇಶದೊಂದಿಗೆ, ತನ್ನ ಸಾಧನೆಯಲ್ಲಿ
ನಾದನು. ಒಂದು ದಿನ ಅವನಿಗೆ ತನ್ನ ಗುರುವಿನ ಆರಾಧನೆಯನ್ನು
ಸಬೇಕೆನಿಸಿತು. ಅದು ವೈಶಿಷ್ಟ್ಯಪೂರ್ಣವಾಗಿರಬೇಕೆಂದು ಕೊಂಡು ತನ್ನ
ವಿನಲ್ಲಿ ಬಿನ್ನವಿಸಿದನು. ಆತ ಬಿಂದಗಿಯ ಪೂಜೆಯ ಕ್ರಮವನ್ನು ಹೇಳಿಕೊಟ್ಟನು.
ದಲು ಅದು ಮಾರ್ಗಶೀರ್ಷ ವದ್ಯ ತೃತೀಯಾದಂದು ನಡೆಯುತ್ತಿತ್ತು. ಮುಂದಿನ
ಗಳಲ್ಲಿ ಅದು ಸಿಂದಗಿಗೆ ಬಂದಾಗ ಅಶ್ವೀನ ವದ್ಯ ದ್ವಿತೀಯಾದಂದು
ಸೇರತೊಡಗಿತು. ಈ ಬಿಂದಿಗೆ ಭೃಂಗವಳ್ಳಿಯಿಂದ ಸಿಂದಗಿಗೆ ಬಂದ ಕಥೆ ಬೇರೆ

ಭೃಂಗವಳ್ಳಿ- ಮಾಶ್ಯಾಳದ ಕುಲಕರ್ಣಿ ಗುರಪ್ಪನ ಯೋಗಸಾಧನೆ ಹಾಗು
ವರುಷದ ಅವನ ಬಿಂದಗಿಯ ಪೂಜೆಯು ಸುತ್ತಲಿನ ಜನರನ್ನು ಆಕರ್ಷಿಸಿತು. ಜನ
ಕೋಪತಂಡವಾಗಿ ಗುರಪ್ಪನ ಹತ್ತಿರ ಬರಹತ್ತಿದರು. ಅವರಲ್ಲಿ
ಂಗಿಯಕುಲಕರ್ಣಿ ಸಂಕಣ್ಣನೂ ಒಬ್ಬ. ಶಂಕರ -ಸಂಕಣ್ಣನ ಜೊತೆಗೆ
ಮಣ್ಣನೆಂಬ ಅವನ ಮಿತ್ರನೂ ಗುರಪ್ಪನ ಹತ್ತಿರ ಹೋಗುತ್ತಿದ್ದ. ಉಭಯತರೂ
ನು ದಿನ ಗುರುವಿನಿಂದ ದೀಕ್ಷೆಯನ್ನು ಪಡೆಯಬಯಸಿದಾಗ, ಗುರಪ್ಪನು ಕಾಲ
ಕ್ವಾ ಪಕ್ವವಾಗಿಲ್ಲ. ಮುಂದೆ ಒಂದು ದಿನ ನಾನೇ ಕರೆದು ಉಪದೇಶ -ದೀಕ್ಷೆಯನ್ನು
ಡುವೆನೆಂದು ಹೇಳಿ ಕಳಿಸಿದನು. ಅದರಂತೆ ಗುರಪ್ಪ ತನ್ನ ಅವಸಾನ ಕಾಲದಲ್ಲಿ
ರಿಗೂ ಬರಲು ಹೇಳಿಕಳಿಸಿದನು. ಆದರೆ ಕರೆ ಬಂದಾಗ ಭೀಮಣ್ಣ ಊರಲ್ಲಿ
ಲಿಲ್ಲ. ಗೆಳೆಯನ ದಾರಿ ಕಾಯ್ದು ಕೊನೆಗೆ ತಾನೊಬ್ಬನಾದರೂ ಗುರುಗಳನ್ನು
ಬೇಕೆಂದು ಸಂಕಣ್ಣ ಒಬ್ಬನೆ ಭೃಂಗವಳ್ಳಿಗೆ ಬಂದನು. ಸಂಕಣ್ಣನೊಬ್ಬನನ್ನೇ ಕಂಡ

ಗುರಪ್ಪ ಭೀಮಣ್ಣನ ಕುರಿತು ವಿಚಾರಿಸಿದನು. ಊರಲ್ಲಿ ಇರಲಿಲ್ಲವೆಂದು ಹೇಳ
ನಿರುಪಾಯನಾಗಿ 'ಆಯ್ತು, ನೀನೇ ಭೀಮ, ನೀನೇ ಶಂಕರ' ಎಂದು
ಸಂಕಣ್ಣನೊಬ್ಬನಿಗೇ ದೀಕ್ಷೆಕೊಟ್ಟು ಭೀಮಾಶಂಕರ ಎಂಬ ಹೊಸ ಹೆಸರಿ
ಕರೆದನು. ತಮ್ಮ ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುವುದ
ಬಂದಗಿ ಪೂಜೆಯ ವಿಧಾನವನ್ನೂ ಹೇಳಿ, ಗುರಪ್ಪ ಇಹಲೋಕ ಯಾತ್ರೆ ಪೂರೈಸಿ

ಭೀಮಾಶಂಕರರಿಗೆ ಅನುಗ್ರಹವಾದದ್ದು ಕ್ರಿ.ಶ. ೧೬೮೦ರಲ್ಲಿ ಎಂದು
ಚರಿತ್ರೆ ಹೇಳುತ್ತದೆ. ಆಗ ಅವರಿಗೆ ಸುಮಾರು ೨೨-೨೩ ವರುಷವಾಗಿದ್ದಿರಬ
ಮರಳಿ ಗ್ರಾಮದ ವೆಂಕಪ್ಪನವರ ಮಗಳು ಗಿರಿಜಾಬಾಯಿಯವರೊಂದಿಗೆ ಆ
ಮದುವೆಯಾಗಿ ಎರಡು ಗಂಡುಮಕ್ಕಳ ತಂದೆಯಾಗಿದ್ದರು. ಹಿರಿಯವ ಜ
ಕಿರಿಯವ ಶಿವರಾಮ.

ಭೀಮಾಶಂಕರರು ವೇದ-ಶಾಸ್ತ್ರಗಳ ಅಧ್ಯಯನ ಮಾಡಿದ ವಿದ್ವಾಂಸರಿದ್ದ
ಅವರ ಹತ್ತಿರ ಸಮಕಾಲೀನ ಭಕ್ತರು ಸಂತರು ಆಧ್ಯಾತ್ಮಿಕ ಚರ್ಚೆಗಾಗಿ ಬರುತ್ತಿದ್ದ
ಭೀಮಾಶಂಕರರಿಗೂ ಮಹಿಪತಿರಾಯರಿಗೂ ಪರಸ್ಪರ ಸಂಪರ್ಕವಿದ್ದಿತೆ
ಪರಂಪರೆಯಿಂದ ಹೇಳಿಕೊಳ್ಳುತ್ತ ಬಂದಿದ್ದಾರೆ. ಅವರು ಎಲ್ಲರ
ಬಿರವಮಾಡಿಕೊಳ್ಳುತ್ತಿದ್ದರು. ಸ್ತ್ರೀ-ಶೂದ್ರರಿಗೂ ಅವರ ಮಠದಲ್ಲಿ ಪ್ರವೇಶವಿದ್ದಿ
ವಾನಪ್ರಸ್ಥಾಶ್ರಮದಲ್ಲಿ ಅವರು ಕುಟುಂಬ ಸಹಿತವಾಗಿ ಸಿಂದಗಿಯನ್ನು ಬ
ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರಕ್ಕೆ ಹೊರಟು ನಿಂತಾಗ ನಡೆದ ಒಂದು ಘ
ಅವರ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ. ವರ್ಣಾಶ್ರಮ ಧರ್ಮ
ಭೀಮಾಶಂಕರರು ಕ್ರಿ.ಶ. ೧೭೦೦ ರಲ್ಲಿ ಗೃಹಸ್ಥಾಶ್ರಮವನ್ನು ತ್ಯ
ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದರು. ಆಗ ಊರಿನ ಅಂತ್ಯಜರೆಲ್ಲರೂ ಬ
ಭೀಮಾಶಂಕರರಿಗೆ ನಮಸ್ಕರಿಸಿ ಕೊನೆಗೆ ಸಿಂದಗಿಯಲ್ಲಿಯೇ ಬ
ಉಳಿದುಕೊಳ್ಳಬೇಕೆಂದು ಬಿನ್ನವಿಸಿದರು. ಅವರು ಉಳಿದುಕೊಳ್ಳಲು ಅಂತ್ಯಜ
ಸೇರಿ ತಮ್ಮ ವಾಸಸ್ಥಳವನ್ನು ಬಿಟ್ಟುಕೊಡುವದಾಗಿ ಪ್ರಮಾಣ ಮಾಡಿದರು.
ಭೀಮಾಶಂಕರರು ಅವರ ಮನವಿಯನ್ನು ಒಪ್ಪಿಕೊಂಡು ಲಕ್ಷ್ಮೇಶ್ವರದಲ್ಲಿ
ವರುಷ ಇದ್ದು ತಿರುಗಿ ಸಿಂದಗಿಗೇ ಬಂದರು. ಊರ ಹೊಲೆಯರು ಕೊ
ಸ್ಥಳದಲ್ಲಿಯೇ ತಮ್ಮ ಮಠವನ್ನು ಕಟ್ಟಿದರು. ಈಗಲೂ ಕೂಡ ಅವರ ಮಠವು ಅ
ಸ್ಥಳದಲ್ಲಿಯೇ ಮುಂದುವರೆದಿದೆ.

ಲಕ್ಷ್ಮೇಶ್ವರದಲ್ಲಿದ್ದಾಗ ಅವರಿಗೆ ಗೋರಕ್ಷನಾಥನ ಪ್ರ
ದರ್ಶನವಾಯಿತೆಂದು ಅವರ ಚರಿತ್ರೆ ಹೇಳುತ್ತದೆ. ಅಲ್ಲಿ ಅವರಿಗೆ ಕೂಡ ಅ
ಭಕ್ತರು ನಡೆದುಕೊಳ್ಳುತ್ತಿದ್ದರು. ಕೆಲವು ಜನ ಅವರಿಗೆ ದಾನ-ದತ್ತಿಗಳನ್ನು ನೀ

ಂಲ್ಲೇಖಗಳೂ ದೊರೆಯುತ್ತವೆ. ಸೂರಣಗಿಯ ಹೊಲಗಳು ಸಿಂದಗಿಯ ಮಠಕ
ಾರೆತದ್ದು ಅಲ್ಲಿಯೆ.

ವಾನಪ್ರಸ್ಥಾಶ್ರಮದಿಂದ ತಿರುಗಿ ಬಂದಾಗ ಅವರು ಹಂಪಿಗೆ ಹೋಗಿ ಅಲ್ಲಿಯ
ಸ್ವಾಮಿಗಳಿಂದ ಸಂನ್ಯಾಸಾಶ್ರಮವನ್ನು ಪಡೆದರು. ಚತುರ್ಥಾಶ್ರಮದ ಅವರ ಹೆಸರ
ಶ್ರೀ ಶಂಕರಾನಂದ ಸರಸ್ವತಿ' ಎಂದು ಇದೆ. ಈ ದಿನಗಳಲ್ಲಿಯೇ ಶೃಂಗೇರಿ ಪೀಠ
ಗದ್ಗುರುಗಳು ಸಿಂದಗಿಯ ಮಠಕ್ಕೆ ಹಗಲು ದೀವಟಿಗೆ ಹಾಗೂ ಅಡ್ಡಪಲ್ಲ
ಉತ್ಸವಗಳನ್ನು ಬಿಟ್ಟು ಉಳಿದ ಎಲ್ಲ ಅಧಿಕಾರಗಳನ್ನು ನೀಡಿದರು. ಅಲ್ಲದೆ ಸಿಂದಗಿಯ
ಮಠದಲ್ಲಿ ಅನಂತರದ ಯಾರೂ ಸಂನ್ಯಾಸಾಶ್ರಮ ತೆಗೆದುಕೊಳ್ಳ
ಕಾರಣವಿಲ್ಲವೆಂದು ಅಪ್ಪಣೆ ಕೊಡಿಸಿದರು. ಅಂತೆಯೇ ಇಂದಿಗೂ ಮಠದ ಸ್ವಾಮಿಗಳ
ಕಾಸರಿ ವಸ್ತ್ರಗಳನ್ನು ಧರಿಸಿ, ಗೃಹಸ್ಥರಾಗಿರುತ್ತಾರೆ.

'ಶಕೆ ೧೬೪೪ (ಕ್ರಿ.ಶ. ೧೭೨೨) ಶುಭಕೃತು ನಾಮ ಸಂವತ್ಸರ ಶ್ರಾವಣ ಶು
ತ್ರಯೋದಶಿ -ಶನಿವಾರದಂದು ಉತ್ತರಾಷಾಢಾ ನಕ್ಷತ್ರದಲ್ಲಿ ಭೀಮಾಶಂಕರರ
ಸಂನ್ಯಾಸ ಆಶ್ರಮವನ್ನು ಪಡೆದರು. ಶಕೆ ೧೬೪೬ರಲ್ಲಿ ಅವರಿಗೆ ಪೂರ್ವಾಶ್ರಮ
ಪತ್ನಿವಿಯೋಗವಾಯಿತು. ಶಕೆ ೧೬೫೩ರಲ್ಲಿ ಅಶ್ವಿನ ಪೌರ್ಣಿಮೆಯಂದು ಸಮಾ
ಪ್ರವೇಶಿಸಿ ಅಶ್ವೀನ ವದ್ಯ ದ್ವಿತೀಯಾದಂದು ಜೀವಂತ ಸಮಾಧಿಯನ
ಪಡೆದರು.//೨೧// ಮಠದ ಅಧಿಕಾರಗಳನ್ನು ಹಿರಿಯ ಮಗ ಜಕ್ಕಪ್ಪಯ
ವಹಿಸಿಕೊಂಡರು.

ಜನಸಾಮಾನ್ಯರೊಂದಿಗೆ, ಭೀಮಾಶಂಕರ ಮಠಕ್ಕೆ ಅಂದಿನ ಆಳುವ ಅರಸ
ಮಾನ್ಯತೆಯೂ ಇದ್ದಿತು. ಅವರ ಕಾಲಕ್ಕೆ ಆದಿಲಶಾಹಿ ರಾಜ್ಯವು ಅಂತ್ಯಗೊಂ
ಪ್ರದೇಶವೆಲ್ಲ ಮೊಗಲರ ಆಡಳಿತಕ್ಕೆ ಒಳಪಟ್ಟಿತ್ತು. ಮಠಕ್ಕೆ ಮೊಗಲರಿಂದ ಅನೇ
ಸನದುಗಳು ದೊರೆತಿವೆ. ಅವುಗಳಲ್ಲಿಯ ಒಂದು ಸನದು ಅಜೀಜುದ್ದೀನ ಅಲಂಗೀರ
(ಕ್ರಿ.ಶ. ೧೭೫೪-೧೭೫೯) ದಿನಾಂಕ ೨೫-೭-೧೭೫೨ ರಂದು (ಜಲ್ಲಾದ ೧
ಹಿಜರಿ ಶಕ ೧೧೬೦) ಜಕ್ಕಪ್ಪಯ್ಯನವರಿಗೆ ಕೊಟ್ಟಿದ್ದಾನೆ. ಅದರಲ್ಲಿಯ ಒಕ್ಕ
ಮಠದ ಕುರಿತು ಬಾದಶಹನಿಗೆ ಇದ್ದ ಮರ್ಯಾದೆಯನ್ನು ವ್ಯಕ್ತಪಡಿಸುತ್ತದೆ.//೨೨

ಭೀಮಾಶಂಕರರ ಸ್ವಭಾವ ಅತ್ಯಂತ ಶಾಂತವಾಗಿತ್ತು. ನಾಥ ಸಂಪ್ರದಾಯದ
ಯೋಗಕ್ಕೆ ಮಹತ್ವವಿದ್ದರೂ, ಸಿದ್ಧಿಯ ಮೋಹದಿಂದ ದೂರ ಉಳಿದು ಜ್ಞಾನ ಹಾ
ಭಕ್ತಿಗಳನ್ನು ಆಚರಣೆಯಲ್ಲಿ ತರುವುದು ಶ್ರೇಯಸ್ಕರವೆಂದು ಜ್ಞಾನೇಶ್ವರಿಯ
ಹೇಳಿದೆ. ಅದರಂತೆ ಭೀಮಾಶಂಕರರು ನಡೆದುಕೊಂಡದ್ದರಿಂದ ಅವರ ಪ್ರಭಾವ
ಎಲ್ಲ ಜಾತಿ, ಮತ ಪಂಥಗಳ ಜನರ ಮೇಲಾಗಿತ್ತು. ಅಸ್ಪೃಶ್ಯರ ಕುರಿತ

ಆದರ, ಅಂತಃಕರಣಗಳನ್ನು ನೆನೆದಾಗ ಅವರ ಹಿರಿಮೆಯ ಅರಿವಾಗುತ್ತದೆ.
ಾಶಂಕರರು ಹಾಗು ಅವರ ಮಕ್ಕಳಾದ ಜಕ್ಕಪ್ಪಯ್ಯ ಮತ್ತು ಶಿವರಾಮ ಪಂತರು
ಪುರುಷರಾಗಿದ್ದರಲ್ಲದೆ . ತಮ್ಮ ಸಿದ್ಧಿಯನ್ನು ಇತರರಿಗೆ ತಿಳಿಯುವಂತೆ
ಗಳಲ್ಲಿಯೂ ಹಿಡಿದಿಟ್ಟದ್ದಾರೆ. ಅವರು ರಚಿಸಿದ ಹಲವಾರು ಕನ್ನಡ-ಮರಾಠಿ
ಪದ್ಯಗಳು ಹಸ್ತಪ್ರತಿಗಳಲ್ಲಿಯೇ ಉಳಿದುಕೊಂಡಿವೆ. ವಿಶೇಷವಾಗಿ ಆಧ್ಯಾತ್ಮಿಕ
ನವಗಳನ್ನು ಹೇಳುವ ಪದ್ಯಗಳು ಅಪರೂಪದ್ದಾಗಿವೆ. ಭೀಮಾಶಂಕರರು,
ಾಶಂಕರ' 'ಸಹಜಾನಂದ' ಹಾಗು 'ದತ್ತಮಹೇಶ' ಎಂಬ ಅಂಕಿತಗಳಿಂದ
ನನ್ನು ರಚಿಸಿದ್ದಾರೆ. ಶ್ರೀವಿದ್ಯಾ ಉಪಾಸನೆಯೊಂದಿಗೆ ಯೋಗ ಸಾಧನೆಯನ್ನು
ದ್ದರಾದ್ದರಿಂದ ಅವರಿಗೆ ಅನೇಕ ಸಿದ್ಧಿಗಳು ಲಭಿಸಿದ್ದವು. ಅವುಗಳ ಕುರಿತು
ಕೆಲವು ಕೃತಿಗಳಲ್ಲಿ ಹೇಳಿಕೊಂಡದ್ದು ವಿಶೇಷವಾಗಿದೆ. ಗುರುಗಳ ಕುರಿತು
ೆ ಅಪಾರ ಆದರ. ಸದ್ಗುರುನಾಥನ ಕೃಪೆಯಿಂದ ತಮಗೆ ಅನುಗ್ರಹವಾದುದನ್ನು
ತ್ತ ಅವರು ತಮ್ಮ ಒಂದು ಕೃತಿಯಲ್ಲಿ,

'ಸದ್ಗುರುವಿಗೆ ನಾನೇನು ಮಾಡಿ ಉದ್ಧಾರಾಗುವೆ।
ನಾನಿನ್ನುದ್ಧಾರಾಗುವೆ ದೇಹಾತೀತನಾಗಿ ಚರಣ. ಕಮಲಕ್ಕೆರಗುವೆ।।

ಹೇಳುತ್ತಾರೆ. ಗುರುಗಳ ಋಣವನ್ನು ತೀರಿಸುವದು ಸಾಧ್ಯವೇ ಇಲ್ಲ.
ತೀತನಾಗಿ ಅವರ ಚರಣಕಮಲಕ್ಕೆರಗುವುದೊಂದೇ ದಾರಿ -ಎನ್ನುತ್ತಾರೆ.
ಅನುಗ್ರಹಿಸಿದ ರೀತಿ,

'ನೆತ್ತಿ ಮ್ಯಾಲೆ ಕರವನ್ನಿಟ್ಟು ನಿಜವೆ ನೀನೆಂದಾ।
ಅಂತರಂಗವ ತೋರಿಸಿಕೊಟ್ಟು ಭವಭಯ ಬಿಡಿಸಿದಾ।।

ಇದುವೇ ಭೀಮಾಶಂಕರರ ಮೊದಲ ಕೃತಿಯಾಗಿರಬೇಕು. ಇಲ್ಲಿ
ಗಳು ತಮಗೆ ಉಪದೇಶಿಸಿದ ತಾರಕ ಮಂತ್ರವನ್ನು, ಅನುಗ್ರಹವನ್ನು
ತ್ತಾರೆ.

ಹಾತೀತರಾಗಿ ಗುರುಗಳ ಚರಣಕಮಲಗಳಿಗೆ ಎರಗಿದ ಭೀಮಾಶಂಕರರು ಆ
ರುವಿಗೆ ಬೆಳಗಿದ ಆರತಿಯೂ ಅಪರೂಪದ್ದಾಗಿದೆ.

ಆರತಿಗಾರತಿ ಬೆಳಗಿತು ತನ್ನಿಂದ ತಾನೆ।
ಮಹಾಗುರುವಿಗೆ।।
ರವೂ ಮರವೂ ಯರಡಾದರುವಿಗೆ।
ಳಗುವ ತಾನೇವೆ।।
ರತಿಯನ್ನು ಬೆಳಗಿದಾಗ,
ಹಸ್ರ ಸೂರ್ಯರ ಪ್ರಭೆಗಳು ಕಲೆತು।
ೋಟಿ ಶಶಿಕಿರಣ।।
ಹಾತೇಜ ಝಾಕಿಸಿ ಮುಟ್ಟಿತು ಆಡಗಿತು ಗಗನಾ।।

ಸ್ರ ಸೂರ್ಯರ ಪ್ರಭೆಯಿಂದ ಕೋಟಿ ಶಶಿಕಿರಣಗಳಿಂದ **ಹೊರಹೊಮ್ಮಿದ ಆ** ಶಾತೇಜವು ಗಗನದಲ್ಲೆಲ್ಲ ಆಡರಿತಂತೆ, ಅಷ್ಟೇ ಅಲ್ಲ.

ಯತ್ತೆತ್ತ ನೋಡಿದರತ್ತ ಸ್ವಪ್ರಕಾಶವೆ।

ನಿತ್ಯ ನಿರಂಜನ ನಿಃಶಬ್ದ ಮೂಲಕ ಬೆಳಗುವ ತಾನೆವೆ।।

ದು ಹೇಳುತ್ತಾರೆ. ಈ ದೃಷ್ಟಿಯಿಂದ ಅವರ ಇನ್ನೂ ಅನೇಕ ಕೃತಿಗಳಲ್ಲಿಯ ನುಭವ ಸವಿಯನ್ನು ನೋಡಬಹುದು.

ಭೂತ ಬಡಿದಿತು, ಬ್ರಹ್ಮಭೂತಕ್ಕ ಬಿಡಿಸುವರಾರಮ್ಮ।

ಸೈ-ಸೈ ಸದ್ಗುರುವಿನ ದಯದಿಂದೆಲ್ಲ ಮೈ-ಮರೆತೆನೆ।।

ದಲಾದ ಕೃತಿಗಳಲ್ಲಿಯ ಸ್ವಾನುಭವದ ವಿವರಣೆ ಮನನೀಯವಾಗಿದೆ.

ಯೋಗ ಹಾಗು ಸಿದ್ಧಿಗಳ ಸ್ವಾನುಭವದ ವಿವರಣೆಗೆ ಭೀಮಾಶಂಕರರ ಕೃತಿಗಳು ರ್ಯಾದಿತವಾಗಿದ್ದರೆ ಅವರ ಮಗ ಜಕ್ಕಪ್ಪಯ್ಯನವರ ದೃಷ್ಟಿ ವಿಶಾಲವಾದದ್ದು. ಭವದ ಜೊತೆಗೆ ಕಥನ ಕಾವ್ಯಗಳನ್ನೂ ಅವರು ರಚಿಸಿದ್ದಾರೆ. ಕನ್ನಡಕ್ಕೆ ರೂಪವಾದ ಕೃತಿಗಳೆಂದೇ ಹೇಳಬಹುದು. ಅವರ 'ದತ್ತಾತ್ರಯ ಷಟ್ಪದಿ' ಹಾಗು ರಾಮಚಂದ್ರ ಅನುಸಂಧಾನ' ಖಂಡ ಕಾವ್ಯಗಳು ಅಭ್ಯಾಸಕ್ಕೆ ಅರ್ಹವಾಗಿವೆ. ಶ್ರೀ ಪ್ಪಯ್ಯನವರು ಬಿಡಿ ಪದ್ಯಗಳನ್ನೂ ಸಾಕಷ್ಟು ರಚಿಸಿದ್ದಾರೆ. ಅವರ ಭಾಷೆ ಸುಲಭ, ಯಾಗಿದೆ.

'ಶಿವಸುಖದಾರಿಯ ನೋಡಂಣಾ।

ಅದು ಕೂಡಲಯಳಿಕಿಂತ ಬಹು ಸಂಣಾ।

ಮತ್ತು

ಜೀವನ ಕಳೆಗಳು ಮುಳುಗುವ ತನಕಾ

ಜೀವನ್ಮುಕ್ತನು ತಾನಲ್ಲಾ'

ದಲಾದ ಕವನಗಳನ್ನು ನೋಡಬಹುದು. ಅವರು 'ಶಂಕರ' 'ಗುರುಶಂಕರ' ಎಂಬ ಕಿತಗಳಿಂದ ಪದ, ಪದ್ಯಗಳನ್ನು, ಕಾವ್ಯಗಳನ್ನು ರಚಿಸಿದ್ದಾರೆ.

ಭೀಮಾಶಂಕರ ಮಠದ ಗುರು ಪರಂಪರೆ ಹೀಗಿದೆ. ಭೀಮಾಶಂಕರ-- ಪ್ಪಯ್ಯ-- ಜಗನ್ನಾಥ-- ಅಪ್ಪಯ್ಯ-- ಸದಾಶಿವ-- ಅಪ್ಪಯ್ಯ-- ಪ್ಪಯ್ಯ-- ದತ್ತಪ್ಪಯ್ಯ-- ಸದಾಶಿವಪ್ಪಯ್ಯ (ಇಂದಿನ ಮಠಾಧಿಪತಿಗಳು).

೩.೨.೪ ಅಗರಖೇಡದ ಆದ್ಯರು

ಅಗರಖೇಡದ ಆದ್ಯರೆಂದು, ಜಹಗೀರದಾರರೆಂದು ಪ್ರಸಿದ್ಧರಾದ ಕಲಬುರ್ಗಿ ಜಿಲ್ಲೆಯ ಹಿರೇಮಣ್ಣೂರಿನವರಾದ ಆದ್ಯರ ಮನೆತನವು ( ಸುಮಾರು ೫೦೦ ವರುಷಗಳ ಇತಿಹಾಸ ಆದ್ಯರ ಮನೆತನಕ್ಕಿದೆ. ಅಭ್ಯಾಸಕ್ಕೆಂದು ನಿಗದಿಪಡಿಸಿದ ಕಾಲಾವಧಿಯಲ್ಲಿ, ಮಹಿಪ ಸಮಕಾಲೀನರಾದ ಆದ್ಯರ ಕಿರುಪರಿಚಯದ ಪ್ರಯತ್ನವನ್ನು ಇಲ್ಲಿ ಮಾಡಲ

ಕುಂಭಕೋಣಂ ಚಿನಿವಾಲ ನಾಯಕರ ಮನೆತನದ ಶೇಷಾದ್ರಿಗಳು ನದಿಯ ದಂಡೆಯ ಮೇಲಿನ ಮಣ್ಣೂರು ಗ್ರಾಮದಲ್ಲಿ ಕ್ರಿ.ಶ.ಸು. ೧೩ ಅವಧಿಯಲ್ಲಿ ಬಂದು ನೆಲೆಸಿದರು. ಮಾಧ್ವ ಪರಂಪರೆಯ ಉತ್ತರಾದಿ ವ ವಿದ್ಯಾನಿಧಿ ತೀರ್ಥರ ವರಪ್ರಸಾದದಿಂದ ಹುಟ್ಟಿದ ಅವರ ವರದರಾಜಾಚಾರ್ಯರು ಪ್ರಕಾಂಡ ಪಂಡಿತರಾಗಿದ್ದರು. ಶ್ರೀಗಳವರ ಜೆ ಇರುತ್ತಿದ್ದರು. ಅವರ ಮಕ್ಕಳಾದ ನರಸಿಂಹಾಚಾರ್ಯರು ಹಾಗು ಕೇಶವಾಚ ತಂದೆಯ ಪಾಂಡಿತ್ಯವನ್ನು ಬಳುವಳಿಯಾಗಿ ಪಡೆದವರು. ಕೇಶವಾಚಾಯ ರಂಗನಾಥಾಚಾರ್ಯರು. ಅವರ ಮಗ ಇಮ್ಮಡಿ ಕೇಶವಾಚಾರ್ಯರು. ಈ ವಿಜಯನಗರದ ಪತನವಾಗಿ ದಕ್ಷಿಣದಲ್ಲೂ ಹಿಂದುಗಳಿಗೆ ನೆಲೆ ಇಲ್ಲದ ಇಮ್ಮಡಿ ಕೇಶವಾಚಾರ್ಯರ ಮಗ ಇಮ್ಮಡಿ ವರದರಾಜಾಚಾಯ ಅವಧಿಯಲ್ಲಿ ಇಲ್ಲಿಯ ಹಿಂದುಗಳಿಗೆ ಸ್ಥೈರ್ಯ -ಧೈರ್ಯಗಳನ್ನು ಒದ

ಇಮ್ಮಡಿ ವರದರಾಜಾಚಾರ್ಯರ ಕಾಲವು ಕ್ರಿ.ಶ.ಸು.೧೬೦೦ ರಿಂದ ರವರೆಗೆ ಎಂದು ಹೇಳಲಾಗುತ್ತದೆ.//೨೩// ಇವರು ತಮ್ಮ ಜೀವಿತಕಾಲದ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಅತ್ಯಂತ ಮಹತ್ವದ ಕೃ ಭಗವದ್ಗೀತೆಗೆ ರಚಿಸಿದ ಇವರ ಕನ್ನಡ ಟಿಪ್ಪಣಿ. ಭಗವದ್ಗೀತೆಗೆ ಕ ರಚಿತವಾದ ಮೊಟ್ಟಮೊದಲ ಟಿಪ್ಪಣಿ ಎಂಬುದು ಇದರ ಹೆಗ್ಗಳಿಕೆ.

ಇಮ್ಮಡಿ ವರದರಾಜಾಚಾರ್ಯರು ಅತ್ಯಂತ ವ್ಯವಹಾರ ಕುಶಲರು, ( ಚತುರರು ಮತ್ತು ದಕ್ಷ ಕಾರ್ಯಕರ್ತರಾಗಿದ್ದರು. ಅಂದಿನ ರ ವಾತಾವರಣದಲ್ಲಿ ಆಚಾರ್ಯರು ನೆರೆಹೊರೆಯ ರಾಜರುಗಳಿಗೆ, ನಾಯಕರ ಸೂಚನೆಗಳನ್ನು ಕೊಟ್ಟು ಹಿಂದುಗಳ ಸಂಘಟನೆಯನ್ನು ಮಾಡಿದ ಉಲ್ಲೆ ದೊರೆಯುತ್ತವೆ. ಧಾರ್ಮಿಕ ಹಾಗು ರಾಜಕೀಯ ಸಮಸ್ಯೆಗಳಲ್ಲಿ ಚಾಣಾಕ್ಷತೆಯನ್ನು ಮೆರೆದು ರಾಜರುಗಳೊಂದಿಗೆ ಸಹಕರಿಸುತ್ತಿದ್ದರು. ವಾತಾವರಣದಲ್ಲಿ ಹಿಂದುಗಳ ಸಂಘಟನೆಯೊಂದಿಗೆ ಅವರ ಸಂ ಅವಶ್ಯಕತೆಯೂ ಇತ್ತು. ಆಂತರಿಕ ಮತಭೇದಗಳಿಗೆ ಲಕ್ಷ್ಯ ಹಾಕುವ

ಲ್ಲ. ಅಂಥ ದಿನಗಳಲ್ಲಿ ಬೆಳೆದು ಅದಕ್ಕೆ ಚೆನ್ನಾಗಿ ಹೊಂದಿಕೊಂಡಿದ್ದ ರಾಜಾಚಾರ್ಯರ ದೃಷ್ಟಿಕೋನವು ಬಹುವಿಶಾಲವಾಗಿತ್ತು. ತಾವು ಸ್ವತ: ಸ್ವಮತದ ಪ್ರತಿಪಾದರಕಾಗಿದ್ದರೂ ಸಂದರ್ಭ ಬಂದಾಗಲೆಲ್ಲ ಬೇರೆ ಮತ ಹಾಗು ನವರಿಗೂ ತಮ್ಮ ಸಹಾಯ ಸಹಕಾರಗಳನ್ನು ನೀಡುತ್ತಿದ್ದರು. ಆದ್ದರಿಂದ ಇವರ ಸ್ಸು ಅಂದಿನ ಆಳರಸರಲ್ಲಿಯೂ -ಪರ ಮತಾನುಯಾಯಿಗಳಲ್ಲೂ ಬೆಳೆದಿತ್ತು. ತಲೆಮಾರಿನ ಆಧ್ವರ ಮನೆತನವು ಕೇವಲ ಮತ ಧರ್ಮಗಳ ಕ್ಷೇತ್ರಕ್ಕೆ ಬೀಳದೆ ರಾಜಕೀಯದಲ್ಲಿಯೂ ತಮ್ಮ ಬುದ್ಧಿ ಕೌಶಲವನ್ನು ತೋರಿದುದು ಷವಾಗಿದೆ. ಇವರಿಂದ ತರಬೇತಿ ಹೊಂದಿದ್ದ ಮಕ್ಕಳು -ಮೊಮ್ಮಕ್ಕಳಾದ ಾಚಾರ್ಯರು, ಮುಮ್ಮಡಿ ವರದರಾಜಾಚಾರ್ಯರು ಹಾಗು ದ್ವೈಪಾಯನಾಚಾರ್ಯರು ಪೇಶ್ವಾಯಿ ರಾಜ್ಯದಲ್ಲಿ ಬಹು ಮಹತ್ವದ ಕೀಯ ಪಾತ್ರವನ್ನು ವಹಿಸಿ ಒಳ್ಳೆಯ ಹೆಸರನ್ನು ಪಡೆದಿದ್ದರು.//೨೪//

ದ್ವೈತ -ಅದ್ವೈತದ ಸಾಮರಸ್ಯದ ದೃಷ್ಟಿಯಿಂದ ಅಂದಿನ ದಿನಗಳಲ್ಲಿ ನಡೆದ ು ಘಟನೆಯನ್ನು ನಿರೂಪಿಸುವುದು ಆವಶ್ಯವೆನಿಸುತ್ತದೆ.

ಮುಮ್ಮಡಿ ವರದರಾಜಾಚಾರ್ಯರು ಇತರ ಎಲ್ಲ ಮತ-ಪಂಥದವರನ್ನು ನಾಗಿ ನೋಡುತ್ತಿದ್ದರು. ಮರಾಠಾ ಸರದಾರರ ಜೊತೆಗಿದ್ದ ಇವರ ಸಂಬಂಧದಿಂದ ು ತಮ್ಮ ಪರಗಣೆಯಲ್ಲಿ ವಾಸಿಸುತ್ತಿದ್ದ ಇತರ ಪಂಥದವರ ಸಂಪರ್ಕದಿಂದ ಮತೀಯರಿಗೂ ಇವರು ಪ್ರಿಯರೂ ಪೂಜ್ಯರೂ ಆಗಿದ್ದರು. ವಿದ್ವತ್ ಸಭೆಗಳಲ್ಲಿ ಅದ್ವೈತದ ತತ್ವಗಳನ್ನು ತುಲನಾತ್ಮಕವಾಗಿ ವಿಶದಪಡಿಸಿ, ಕೊನೆಗೆ ಭಕ್ತಿ ವೇ ಪರಮಾತ್ಮನನ್ನು ಒಲಿಸಿಕೊಳ್ಳಲು ಸಾಮಾನ್ಯ ಜನರ ಉತ್ತಮ ಸಾಧನ ರ್ಗವೆಂದು ತಿಳಿಹೇಳುತ್ತಿದ್ದರು. ಇವರ ವಾದ ವೈಖರಿಗೆ ಮನ ಸೋತು ಅನೇಕ ್ಯತ ಪಂಡಿತರು ಇವರಲ್ಲಿಗೆ ಬಂದು ದ್ವೈತ ದೀಕ್ಷೆಯನ್ನು ಕೊಡಬೇಕೆಂದು ುತ್ತಿದ್ದರು. ಆದರೆ ವರದರಾಜಾಚಾರ್ಯರು ಅಂಥವರನ್ನು ತಡೆದು 'ಅದ್ವೈತದಲ್ಲಿ ಮಾರ್ಗಕ್ಕೆ ಆಸ್ಪದವಿಲ್ಲವೆಂದು ತಿಳಿಯಬಾರದು. ತಮ್ಮ-ತಮ್ಮ ಪಂಥಗಳನ್ನು ರಾಗಿ ತಿಳಿದುಕೊಳ್ಳದೆ, ಅದನ್ನು ಬಿಡುವ ಅಥವಾ ಇನ್ನೊಂದು ಮತದ ಯನ್ನು ಇಚ್ಛಿಸುವುದು ತಪ್ಪು! ಅದರಲ್ಲಿಯೇ ಮೋಕ್ಷದ ದಾರಿಯನ್ನು ುವದು ಸಾಧ್ಯವಿದೆ. ಇವುಗಳನ್ನೆಲ್ಲ ವಿಚಾರಿಸದೆ ಹಿರಿಯರು ಸಿದ್ಧಾಂತಗಳನ್ನು ಡಿಸಿಲ್ಲ. ಎಂದು ತಿಳಿಸಿ ಹೇಳುತ್ತಿದ್ದರು. ಹೀಗಾಗಿ ಅದ್ವೈತಿಗಳು ಕೂಡ ತಮ್ಮ ಸಂದೇಹಗಳ ಪರಿಹಾರಕ್ಕೆ ಇವರಲ್ಲಿ ಬರುತ್ತಿದ್ದರು.//೨೫//

ಇಂಥ ದೃಷ್ಟಾಂತಗಳಿಂದ ಸ್ಪಷ್ಟವಾಗುವ ವಿಷಯವೆಂದರೆ ಈ ಕಾಲದ ರಲ್ಲಿಯ ಮತ ಭೇದಗಳನ್ನು ತೊಡೆದು ಹಾಕಲು ಪ್ರಯತ್ನಿಸಿದ್ದು

ಮಹಿಪತಿರಾಯರು ಕೂಡ ತಮ್ಮ ಒಂಬು ಪಂದ್ಯದಲ್ಲಿ 'ದ್ವೈತ -ಅದ್ವೈತ ಎಂ
ಹೊಡದಾಡದಿರೋ ಪ್ರಾಣಿ। ಚೇತಿಸಿ ಬ್ಯಾರಿಹ ವಸ್ತು ಕಾಣಿ।। ಎಂದು ಹೇಳಿದ್ದಾರೆ.

ಶೃಂಗೇರಿಯ ಶ್ರೀ ಶಂಕರ ಭಾರತಿ ಸ್ವಾಮಿಗಳವರು ಸಂಚಾರದಲ್ಲಿದ್ದಾಗ ಒಂ
ಸಲ ಮಣ್ಣೂರಿಗೆ ಬಂದರು. ಆವರ ಆದರಾತಿಥ್ಯಗಳನ್ನು ವರದರಾಜಾಚಾರ್ಯ
ಮಾಡಿದರು. ಶ್ರೀಗಳವರು ವರದರಾಜಾಚಾರ್ಯರ ವಿಶಾಲ ದೃಷ್ಟಿಕೋನವನ
ಮನಸಾರೆ ಮೆಚ್ಚಿದರು. 'ಮಹ್ಮದೀಯರ ಹಾಗು ಇತರ ವಿಧರ್ಮಿಯರ (ಹಿಂದ
ಅಲ್ಲದ) ಆಕ್ರಮಣ ಹಾಗೂ ಬಲಾತ್ಕಾರದ ಮತಾಂತರಗಳನ್ನು ತಡೆಯ
ಹಿಂದುಗಳಲ್ಲಿ ಈ ವಿಶಾಲ ದೃಷ್ಟಿ ಅವಶ್ಯವಾಗಿದೆ.' ಎಂದು ಉಪದೇಶಿಸಿದರ
ವರದರಾಜಾಚಾರ್ಯರನ್ನು ಬಹುವಾಗಿ ಮೆಚ್ಚಿಕೊಂಡು ತಮ್ಮ ಮಠದ ಕೆಲ
ಸಮಸ್ಯೆಗಳನ್ನು ಆವರ ಜೊತೆಗೆ ಚರ್ಚಿಸಿದರು. ವಿಶೇಷವಾಗಿ ವರದರಾಜಾಚಾರ್ಯ
ಪರಗಣೆಯಲ್ಲಿ ಅದ್ವೈತ ಮತದವರಿಗೆ ಯೋಗ್ಯ ಮಾರ್ಗದರ್ಶನವಿಲ್ಲದೆ, ಅವರ
ಬಹುಜನರು ಬೇರೆ ಮತಗಳನ್ನು ಸ್ವೀಕರಿಸುವಂತಾಗಿತ್ತು. ಆದರಿಂದಾ
ಅನ್ಯಧರ್ಮದವರಲ್ಲದೆ, ಶಾಕ್ತರು, ಚಾರ್ವಾಕರು ಕೂಡ ಮತ್ತೆ ಪ್ರಬಲರಾಗು
ಭೀತಿಯುಂಟಾಗಿತ್ತು. ಆದ್ದರಿಂದ ಶ್ರೀಮಠದಿಂದ ಬೇರೊಂದು ವ್ಯವಸ್ಥೆಯನ
ಮಾಡುವವರೆಗೆ ವರದರಾಜಾಚಾರ್ಯರೇ ಅದ್ವೈತ ಮತದವರಿಗೂ ಕೂ
ಮಾರ್ಗದರ್ಶನ ಮಾಡಬೇಕೆಂದು ಶ್ರೀಗಳವರು ಅಪ್ಪಣೆ ಕೊಡಿಸಿದರು.

ಒಂದು ಮತದ ಸ್ವಾಮಿಗಳು, ಇನ್ನೊಂದು ಮತದ ವಿದ್ವಾಂಸನೊಬ್ಬನನ
ಮಾರ್ಗದರ್ಶಕನಾಗಬೇಕೆಂದು ಕೇಳಿಕೊಂಡ ಇಂಥ ಉದಾಹರಣೆಗಳು ಧಾರ್ಮಿ
ಇತಿಹಾಸದಲ್ಲಿ ಅಪರೂಪ ಎಂದು ಹೇಳಬಹುದು. ಈ ಕುರಿತು ಕಾಲಯುಕ
ಸಂವತ್ಸರದ ನಿಜ ಶ್ರಾವಣ ಬಹುಳ ೮ ಸ್ಥಿರವಾರದಂದು ಶ್ರೀ ಶೃಂಗೇರಿ ಮಠದಿಂ
ಅಕ್ಕಲಕೋಟೆ, ಹಲಸಂಗಿ, ಇಂಡಿ, ತಾಂಬೆ ಮತ್ತು ಆಲಮೇಲ ಭಾಗದ ಅದ್ವೈತಿಗಳ
ಅಧ್ಯ ವರದರಾಜಾಚಾರ್ಯರನ್ನು ಆ ಭಾಗದ ಮಠಪತಿಗಳೆಂದು ತಿಳಿಯಲ
ರಾಯಸವನ್ನು ಕಳಿಸಲಾಗಿದೆ.//೨೬//

ಕೃಷ್ಣದ್ವೈಪಾಯನರ ಕುರಿತು ಗೋಪಾಲದಾಸರು ತಮ್ಮ ಒಂದು ಕೃತಿಯಲ್ಲಿ
ಕಿತ್ರಿಸುತ್ತ 'ಭುವನದೊಳಗೆಣೆಗಾಣೆ ನಿಮಗೆ' ಎಂದು ಹೇಳುತ್ತ 'ಕರುಣಿ ಗೋಪಾ
ಠಲನ್ನ ದಾಸೋತ್ತಮನೆ' ಎಂದು ಸ್ತುತಿಸುತ್ತಾರೆ.//೨೭//

ಹೀಗೆ ಮಹಿಪತಿರಾಯರ ಸಮಕಾಲೀನ ಆದ್ಯರ ಮನೆತನವು ಸಾಮಾಜಿಕ
ಧಾರ್ಮಿಕ ಹಾಗು ರಾಜಕೀಯ ರಂಗಗಳಲ್ಲಿ ಮಹತ್ತರ ಪಾತ್ರವನ್ನು ವಹಿಸಿತ್ತು.

೩.೨.೫ ಗಲಗಲಿಯ ಅವ್ವನವರು ಹಾಗು ಪ್ರಯಾಗಬಾಯಿ

ಆದ್ಯರ ಮನೆತನದಂತೆ ವಿಜಾಪುರ ಜಿಲ್ಹೆಯಲ್ಲಿ ಪ್ರಸಿದ್ಧವಾದ ಇನ್ನೊ
ಮನೆತನ ಗಲಗಲಿ ಆಚಾರ್ಯರದು. ಪ್ರಕಾಂಡ ಪಂಡಿತರಿಂದೊಡಗೂಡಿದ ಮನೆತ
ಹಳೆಯ ಇತಿಹಾಸವೂ ಇದೆ. ಒಬ್ಬೊಬ್ಬರೂ ಸಂಸ್ಕೃತದಲ್ಲಿ ದಿಗ್ಗಜ ಪಂಡಿತ
ಷಟ್‌ಶಾಸ್ತ್ರ ಪಂಡಿತರು. ಕರ್ಮಠ ಬ್ರಾಹ್ಮಣ ಪಂಡಿತರ ಮನೆಯಲ್ಲಿ ಗಹನ
ಮಾಧ್ವ ತತ್ವಜ್ಞಾನದ ತಿರುಳನ್ನು, ದೇವರ ನಾಮಗಳನ್ನು ಅವರ ಮ
ಹೆಂಗಳೆಯರು ಕನ್ನಡ ಭಾಷೆಯಲ್ಲಿ ರಚಿಸಿದ್ದಾರೆ ಎಂಬುದು ಆಶ್ಚರ್ಯ
ವಿಷಯವಾಗಿದೆ.

ದೇಶಪಾಂಡೆ ಶ್ರೀಪತಿರಾಯ ಹಾಗು ನರಸಿಂಗರಾಯ ಎಂಬ ಇಬ್ಬರು ಸ್ಮಾ
ಬ್ರಾಹ್ಮಣ ಅಣ್ಣ ತಮ್ಮಂದಿರು ವಿಜಾಪುರದ ಎರಡನೆಯ ಅಲಿ ಆದಿಲಶಹ
(೧೫೫೬-೧೫೭೧) ಸರದಾರರಾಗಿದ್ದರು. ಒಂದು ಸಲ ಯುದ್ಧಕ್ಕೆಂದು ಬೆಳಗಾ
ಕಡೆಗೆ ಹೊರಟಾಗ ದಾರಿಯಲ್ಲಿ ಮಲಪ್ರಭೆಯ ದಂಡೆಯ ಯಕ್ಕುಂಡಿ ಗ್ರಾಮ
ಭಾಗವತ ಖ್ಯಾತಿಯ ಯಾದವಾರ್ಯರ ದರ್ಶನವಾಯಿತು. ಅವ
ಪ್ರಭಾವಿತರಾದ ಅಣ್ಣ ತಮ್ಮಂದಿರು ಐಹಿಕ ಸುಖೋಪಭೋಗಗಳನ್ನು ತ
ಪಾರಮಾರ್ಥ ಸಿದ್ಧಿಗಾಗಿ ಯಾದವಾರ್ಯರನ್ನು ಮೊರೆಹೊಕ್ಕರು. ಯಾದವಾ
ಅವರನ್ನು ಅಂದಿನ ಮಾಧ್ವ ಪರಂಪರೆಯ ಉತ್ತರಾದಿ ಮಠಾಧೀಶರಾದ
ವಿದ್ಯಾಧೀಶ ಶ್ರೀಗಳವರ ಹತ್ತಿರ ಕಳಿಸಿಕೊಟ್ಟರು. ಶ್ರೀಗಳವರಿಂದ ಮುದ್ರಾಧಾ
-ಮಂತ್ರೋಪದೇಶಗಳು ದೊರೆತವು. ಅವರ ಆಜ್ಞೆಯಂತೆ ಕೃಷ್ಣೆಯ ತೀರದ ಗ
ಗ್ರಾಮದಲ್ಲಿ ನೆಲೆಸಿ ಸಾಧನದಲ್ಲಿ ನಿರತರಾದರು. ಹೀಗೆ ಪ್ರಾರಂಭವಾದದ್ದು ಗ
ಮನೆತನ. ಶ್ರೀಪತಿಯ ಹಿರಿಯ ಮಗ ಗೋವಿಂದಾಚಾರ್ಯ, ಅವರ
ಮುದ್ಗಲಾರ್ಯರು. ಸಂಸ್ಕೃತ ಸಾಹಿತ್ಯ- ತರ್ಕಗಳಲ್ಲಿ ಅಗಾಧ ಪಂಡಿತರು./
ಮುದ್ಗಲಾರ್ಯರ ಪತ್ನಿ 'ಗಲಗಲಿ ಅವ್ವ' ಎಂದು ಹೆಸರಾದವರು.

ಭಕ್ತಿಪರವಾದ ಗೀತ ಪದ್ಯಗಳು ಮತ್ತು ಪ್ರಮೇಯ ಭಾಗಗಳನ್ನು
ಭಾಷೆಯಲ್ಲಿ ಪಾಮರರಿಗೂ ತಿಳಿಯುವಂತೆ ಹಾಡಿನ ರೂಪದಲ್ಲಿ
ಪ್ರಸಿದ್ಧರಾದವರು ಗಲಗಲಿ ಅವ್ವನವರು. ಅವರಿಗೆ ತರ್ಕ -ನ್ಯಾಯ ಶಾಸ್ತ್ರಗಳಲ್ಲಿ
ಪಾಂಡಿತ್ಯವಿದ್ದಿತು. ಅವರ ಪಾಂಡಿತ್ಯದ ಕುರಿತು ಪರಂಪರೆಯಿಂದ ಕೇಳಿ ಬಂದ
ದಂತಕಥೆಗಳಿವೆ. ನಿದರ್ಶನಕ್ಕಾಗಿ ಒಂದನ್ನು ಇಲ್ಲಿ ನೋಡಬಹುದು.

ಅವ್ವನವರಿಗೆ ಆರು ಜನ ಷಟ್‌ಶಾಸ್ತ್ರಪಂಡಿತರಾದ ಮಕ್ಕಳಿದ್ದರು. ಒಂದ
ಪುಣೆಯ ಪೇಶ್ವಾಯಿ ದರಬಾರಿನಲ್ಲಿ ಉತ್ತರದೇಶದ ಕಾಶಿಯಿಂದ

ಪಂಡಿತರೊಡನೆ ಈ ಆರು ಜನ ಮಕ್ಕಳು ವಾಕ್ಯಾರ್ಥ ಮಾಡುತ್ತಿದ್ದರು. ಒ
ಜನಾನಖಾನಾದಲ್ಲಿ ಅಪ್ಪನವರು ಕುಳಿತು ಮಕ್ಕಳ ವಾಕ್ಯಾರ್ಥವನ್ನು ಕೇಳುತ್ತಿ
ವಾದ ಮಧ್ಯದಲ್ಲಿ ಒಂದು ಪದದ ಅರ್ಥವನ್ನು ಬಿಡಿಸುವಾಗ ಮಕ್ಕಳು ತಡವರಿಸಿ
ಅಪ್ಪನವರು ಕೂಡಲೇ ಅದಕ್ಕೆ ಸರಿಯಾದ ಉತ್ತರವನ್ನು ಬರೆದು ಕಳಿಸಿದರು. ಆ
ನೋಡಿ ಆಶ್ಚರ್ಯಚಕಿತನಾದ ಪೇಶ್ವಾಯಿಯು ಅಪ್ಪನವರ ಹೆಸರಿನಿಂದಲೇ ಸ
ಹೊರಡಿಸಿ ವಾರ್ಷಿಕ ಅನುದಾನವನ್ನು ನೀಡಿದನು. ಅದು ಸಂಸ್ಥಾ
ವಿಲಿನೀಕರಣವಾಗುವವರೆಗೂ ಗಲಗಲಿ ಮನೆತನಕ್ಕೆ ದೊರೆಯುತ್ತಿತ್ತು.//೨೯//ಅ
ಅವರ ಪಾಂಡಿತ್ಯ - ಪ್ರಸಿದ್ಧಿಗಳನ್ನು ಕೇಳಿದ ಮೈಸೂರಿನ ಮಹಾರಾಜರೂ ಅ
ಭೂಮಿಗಳನ್ನಿತ್ತು ಗೌರವಿಸಿದ್ದರು. ಅಪ್ಪನವರು ಮುಖ್ಯದ ಹಾಡು, ಶ್ರ
ತಾರತಮ್ಯ, ಮೋರೆಗೆ ನೀರು ತರುವ ಹಾಡು ಮುಂತಾದ ಆಧ್ಯಾತ್ಮ ಪರವಾದ
ಕಾವ್ಯಗಳನ್ನು ಬರೆದಿದ್ದಾರೆ. ಅವರ ಅಂಕಿತ 'ಶ್ರೀರಾಮೇಶ' ಎಂದಾಗಿತ್ತು.

'ಅಪ್ಪನವರ ಕಾವ್ಯಗಳಲ್ಲಿ ನವರಸಗಳೆಲ್ಲ ಹರಿದರೂ ಅವುಗಳು ಭ
ಭಟ್ಟಿಯಲ್ಲಿ ಪುಟಗೊಂಡಿವೆ. ಉಪಮೆ, ಉತ್ಪ್ರೇಕ್ಷೆ, ಅಲಂಕಾರ, ವಕ್ರ
ವ್ಯಾಜೋಕ್ತಿ ಎಲ್ಲವೂ ಅವರ ಕಾವ್ಯದಲ್ಲಿ ನೀತಿ ಬೋಧಕವಾಗಿ ಪರಿ
ಕಾರಣವಾಗಿ ಬೆಳಗುತ್ತವೆ.' ಸಜ್ಜನರ ಸಹವಾಸದ ಮಹಿಮೆಯನ್ನು ಪಾಮರ
ತಿಳಿಸುವ ಅವರ ಸರಳ-ಸರಸ ದೃಷ್ಟಾಂತ ಪ್ರದರ್ಶನದ ಸುಂದರ ಪದ್ಧತಿಯ
ಮಾದರಿ.

ಭಾವಜ್ಞರ ಸಂಗ ಶಾವೀಗೆ ಉಂಡಂತೆ ಭಾವವರಿಯದಾ ಪಾಮರರ।
ಭಾವವರಿಯದಾ ಪಾಮರರ ಸಹವಾಸ ಬೇವಿನ ಹಾಲು ಕುಡಿದಂತೆ।।

ಅಪ್ಪನವರ ಶಿಷ್ಯೆ, ಪ್ರಯಾಗಬಾಯಿ ಗುರುವಿಗಿಂತ ಒಂದು ಹೆಜ್ಜೆ ಸ
ಹೋಗಿದ್ದಾರೆ. ಮಾಧ್ವ ತತ್ವಜ್ಞಾನದ ಬೋಧನ ಪ್ರಧಾನವಾದ 'ಶ್ರ
ತಾರತಮ್ಯ' ಮುಂತಾದ ಅಪ್ಪನವರ ಕೃತಿಗಳಿಂದ ಸ್ಫೂರ್ತಿಗೊಂಡು ಇವರ
ರಚನೆಗೆ ಕೈಹಾಕಿದರು. ಅಪ್ಪನವರ ಜೊತೆಗಿದ್ದು ಅವರು ಆಗಾಗ ಹೇಳುವ ಹ
ಪದಗಳನ್ನು ಬರೆದುಕೊಂಡು ತಾನೂ ಹಾಡುವುದೇ ಅವರ ಮುಖ್ಯ ಕೆಲಸವಾ
ಒಂದು ಸಂದರ್ಭದಲ್ಲಿ ಅವರಿಗೆ ಭಾಗವತ ತೃತೀಯ ಸ್ಕಂದವನ್ನು ಕನ್ನ
ಭಾಷಾಂತರಿಸಲು ಹೇಳಿದರು. ಆದರ ಅಣತಿಯಂತೆ ಪ್ರಯಾಗವ್ವ ಕ್ಲಿಷ್ಟಕ
ಭಾಗವತ ಅದರಲ್ಲೂ ತತ್ವಗಳಿಂದ ಕೂಡಿದ ತೃತೀಯ ಸ್ಕಂದವನ್ನು ಸರಳ ಕನ್ನ
ಅನುವಾದ ಮಾಡಿದರು.

'ತೃತೀಯ ಸ್ಕಂದದಲ್ಲಿ ರತಿಯಿಟ್ಟು ಮನದಲ್ಲೆ।
ಯತಿ ಮುನಿರಾಯಗೊಂದಿಸುವೆ ಅತಿ ಭಕ್ತಿಯಿಂದಲೆ।।

ರುಕ್ಷ ವಿಷಯದಲ್ಲಿ ತನ್ನ ವಾಣಿಯನ್ನು ಓಡಿಸಿದ್ದರೂ ಸಂದರ್ಭಕ್ಕೆ ಸರಿಯಾ
ನ್ನ ಸರಸ ಕವಿತ್ವವನ್ನು ಮರೆತಿಲ್ಲ. ಕರ್ದಮ ದೇವಹೂತಿಯರ ವಿವಾ
ದನಂತರದ ಪ್ರಣಯ ಪ್ರಸಂಗ, ಸರಸ ಸಂಭಾಷಣೆಯ ಸಂದರ್ಭಗಳನ್ನು ಸುಮಧ
ೃಲಿಯಲ್ಲಿ ಹೇಳಿದ್ದಾರೆ.

'ಬಂದ ಸ್ವಯಂಭು ಮನ ಮಂದಿರದೊಳಗಿದ್ದ ಛಂದುಳ್ಳಋಷಿಯ
ನೋಡಿ

ವಂದಿಸಿ ಚರಣಕ್ಕೆ ಹೊಂದಿಸಿ ದೇವಹೂತಿ ಆನಂದದಲ್ಲಿ ವಿವಾಹ
ಮಾಡಿದನ

ಮದುವೆಯಲ್ಲಿ ನಡೆದ ಭೋಜನ ಸಂಭ್ರಮ ಭಕ್ಷ್ಯ ಭೋಜ್ಯಗಳ ಬಣ್ಣನೆಯ
ನೋಡಬೇಕು.

'ಸಂಡಿಗೆ ಹಪ್ಪಳ ಮಂಡಿಗೆ ಗುಳ್ಳೋರಿಗಿ ದಿಂಡ ಸೂರಣಿ ಬಡಿಸುವರು।
ಬೆಂಡೆಕಾಯಿ ಶಾಖಸಂಡಿಗೆ ಹುಳಿಶಾಖ ಗಂಡಸರು ಭೂಮ ಬಡಿಸಿದರು।।
ಈ ಮದುವೆಯ ಸಂದರ್ಭವನ್ನು ಉಪಯೋಗಿಸಿಕೊಂಡು, ಉರುಟಣೆ, ಭೂ
ಸಾಡು, ಹಸೆಕರೆದ ಹಾಡುಗಳನ್ನು ಹೇಳುವಲ್ಲಿ ಹೊಸತನ ಇದೆ.

ಈ ಕವಯಿತ್ರಿಯ ಬೇರೆ ಕೃತಿಗಳು ಉಪಲಬ್ಧವಿಲ್ಲ ಈ ಕೃತಿಯನ್ನು ಅ
ಕಾಶಿಯಲ್ಲಿದ್ದು ಬರೆದರಂತೆ.

'ಕಾಶಿಪಟ್ಟಣದಲ್ಲಿ ವಾಸಾದ ಭಾಗಮ್ಮನು ಕಟ್ಟಿದ ಪದ್ಯವನು।
ಭೂಸುರರೆಲ್ಲರು ಉದಾಸೀನಮಾಡದೆ ಲೇಸಾಗಿ ತಿದ್ದುವದು।।
ಎಂದು ವಿನೀತರಾಗಿ ಹೇಳಿಕೊಂಡಿದ್ದಾರೆ. ಇವರಿಗೆ ಭಾಗಮ್ಮ ಎ
ಕರೆಯುತ್ತಿದ್ದರೆಂದು ಕಾಣುತ್ತದೆ. 'ಪಾಂಡುರಂಗ' ಅಂಕಿತದಿಂದ ಕೆಲವು ಭಕ್ತಿ
ಹಾಡುಗಳನ್ನು ಬರೆದಿದ್ದಾರೆಂಬ ನಂಬಿಕೆಯೂ ಇದೆ. ಈ ಉಭಯ ಕವಿಯಿತ್ರಿ
ಸಾಹಿತ್ಯ ಸಂಪಾದನೆಯ ಹಾಗು ಅಭ್ಯಾಸದ ಆಗತ್ಯವಿದೆ. ಕರ್ಮಠ ಬ್ರಾಹ್ಮ
ಮನೆಯಲ್ಲಿ ಬೆಳೆದು ಆ ದಿನಗಳಲ್ಲಿ ಕನ್ನಡದಲ್ಲಿ ಕೃತಿಗಳನ್ನು ರಚಿ
ವಿಶೇಷವಾಗಿದೆ.

ಇಂತು ಮಹಿಪತಿರಾಯರು ಬಾಳಿದ ಕಾಲಾವಧಿಯಲ್ಲಿ ಸ್ತ್ರೀ-ಪುರುಷರಿ
ಸಾಹಿತ್ಯ ರಚಿಸಿದ್ದರು. ಜೊತೆಗೆ ಮತಬೇಧಗಳನ್ನು ಮರೆತು ಹಿಂದು ಧ
-ಸಂಸ್ಕೃತಿಗಳನ್ನು ಉಳಿಸಲು -ಬೆಳೆಸಲು ಹೆಣಗಾಡಿದರು. ಈಗ ಮಹಿಪತಿರಾ
ಚರಿತ್ರೆ, ಹಾಗು ಅವರ ಸಾಹಿತ್ಯದ ಅವಲೋಕನದಿಂದ ಇನ್ನಷ್ಟು ವಿವರವಾ
ದಿನಗಳನ್ನು ಕಾಣಬಹುದು.

## ಟಿಪ್ಪಣಿಗಳು

ಿ.ಎ.ಕಿತ್ತೂರ: ಗಳಗನಾಥರು ಮತ್ತು ಅವರ ಕಾದಂಬರಿಗಳು: ಪುಟ ೧೧

ರಮನೆಯ ಆವರಣದಲ್ಲಿದ್ದ ನರಸಿಂಹ ದತ್ತ ಮಂದಿರದ ಉಲ್ಲೇಖ ಕಂದಾಯ ಇಲಾಖೆಯ ಇನಾಂ-ರಜಿಸ್ಟರದಲ್ಲಿ ತಿ ಇದೆ. ಮ್ಯಾನೆದರ: ಪಾವಡಿ ಬಿನ್ ನಿಂಗಪ್ಪ ಮತ್ತು ಅಮೀನುದ್ದೀನ ಅಲ್ಲೀಸಾಬ ಹೋಲ್ಡರ-ಶಾಮರಾವ ಜನಾ. ಾಟದಾರ-ಆಫತಾಬ ಮಹ್ಮದಸಾಹೇಬ ಖತೀಬ ಮತ್ತು ಸಯ್ಯದ ಶಹಾಬುದ್ದೀನ. ಎಕ್ರೆ-೦, ಗುಂಠೆ-೧೮, ರ -೦, ಪೈಸೆ - ೨೫

ರಿಚರ್ಡ ಈಟನ್: ಸೂಫೀಜ ಆಫ್ ಬಿಜಾಪುರ ಪುಟ ೧೧೦-೧೧೧ (೧೯೭೮)

ಪಿ.ಎಂ.ಜೋಶಿ: ಪೋದ್ದಾರ ಅಭಿನಂದನ ಗ್ರಂಥ (ಇಂಗ್ಲೀಷ) ಪುಟ ೧೯೩

ವ. ಆ. ದಿವಾಣಜಿ: ಪ್ರಸಾದ ಯೋಗ ಪುಟ

ರಾ.ಸ್ವಾ. ಪಂಚಮುಖಿ: ಹರಿದಾಸ ಸಾಹಿತ್ಯ ಉಪೋದ್ಘಾತ XXXVIII (೧೯೫೦)

ರಂ. ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಪುಟ ೨೭೭-೨೭೮ (೧೯೭೧)

ಪಂಡಿತ ಅವಳಿಕರ: ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ ಪುಟ ೯೯ ಸಂಪುಟ III ಸಂ. ೯

ರುಕ್ಮಾಂಗದ ಚರಿತ್ರೆ: ಅಧ್ಯಾಯ ೧೩ ಓವಿ ೧೦೪.

ರಿಚರ್ಡ ಈಟನ್: ಸೂಫಿಜ್ ಆಫ್ ಬಿಜಾಪುರ ಪುಟ ೧೦೯.

ಜಾಪುರದ ಸೂಫಿಸಂತರ ಚರಿತ್ರೆ 'ಶಾಹಿಫತ್ ಅಹ್-ಇ-ಹುದಾ' ಚರಿತ್ರೆ, ಸಂಕಲನವನ್ನು ಕ್ರಿ.ಶ. ೧೬೮೪-೮೫ ರ ೨೮ ಹಸನಕಾದಿರಿ ಅವರ ಮೊಮ್ಮಗನ ಟಿಪ್ಪಣಿಗಳ ಆಧಾರದಿಂದ ಕ್ರಿ.ಶ. ೧೭೯೬-೯೭ ರಲ್ಲಿ ಅವರ ಶಿಷ್ಯನೊಬ್ಬ ಗ್ರಹಿಸಿದ್ದಾನೆ. ಹಸ್ತಪ್ರತಿಯು ಹೈದರಾಬಾದಿನ ಸಾಲಾರಜಂಗ ವಸ್ತು ಸಂಗ್ರಹಾಲಯದಲ್ಲಿದೆ ಎಂದೂ ಹೇಳಲಾಗಿದೆ)

. ರುಕ್ಮಾಂಗದ ಚರಿತ್ರೆ, - ಅಧ್ಯಾಯ ೧೨ ಓವಿ ೮೬ ಹಾಗೂ ೯೩

. ರುಕ್ಮಾಂಗದ ಚರಿತ್ರೆ: ಅಧ್ಯಾಯ ೫ ಓವಿ ೩೬/೩೭

. ನಾ.ಬ.ಜೋಶಿ: ಸಂಶೋಧನ ಮಂಜರಿ (ಮರಾಠಿ) ಪುಟ ೧೧೧.

. ರುಕ್ಮಾಂಗದ ಚರಿತ್ರೆ: ಅಧ್ಯಾಯ ೨ ಓವಿ ೯೨ ರಿಂದ ೧೦೪

. ರುಕ್ಮಾಂಗದ ಚರಿತ್ರೆ: ಅಧ್ಯಾಯ ೨ ಓವಿ ೯೧, ೯೨

.. ಅದೇ : ಅಧ್ಯಾಯ ೨ ಓವಿ ೮೨, ೮೩

.. ರುಕ್ಮಾಂಗದರ ಕನ್ನಡ ಪದಗಳು: ಪುಟ ೩. ಕೀರ್ತನೆ -೪

ಿ. ನಾ.ಬ.ಜೋಶಿ: ಸಂಶೋಧನ ಮಂಜರಿ ಪುಟ ೯೯

': ರಾ.ಚಿಂ ಢೇರೆ - ಗುರು ಗೋರಕ್ಷನಾಥ ಪುಟ ೧೫೫

). ಸಿಂದಗಿ ಮಠದಿಂದ ಪ್ರಕಟಿತ 'ಶ್ರೀ ಸದ್ಗುರು ಭೀಮಾಶಂಕರ ಸ್ವಾಮಿಗಳ ಚರಿತ್ರೆ'ಯಲ್ಲಿ ಪುಟ ೨೪ರಲ್ಲಿ ಬರುವ ಹಿಪತಿಗುರು ವಿಠಲಾಂಕಿತ ೧೨ ನುಡಿಗಳ ಕನ್ನಡ ಪದ ಹಾಗು ಪುಟ ೨೯ ರಲ್ಲಿ ಬರುವ ಭೀಮಾಶಂಕರ ಅಂಕಿತದ ೫ ಡಿಗಳ. ಮರಾಠಿ ಪದ್ಯದಲ್ಲಿ ಈ ಚರಿತ್ರೆಯನ್ನು ಹೇಳಲಾಗಿದೆ.

ಿ. ಸದ್ಗುರು ಭೀಮಾಶಂಕರ ಸಂಕ್ಷಿಪ್ತ ಚರಿತ್ರೆ: ಪುಟ ೫೪ ಹಾಗೂ ೬೭

೨. ಸನದಿನ ಇಂಗ್ಲೀಶ್ ಅವತರಣಿಕೆಯನ್ನು -ಮೂಲ ಪರ್ಶಿಯನ್‌ದೊಂದಿಗೆ ಕ್ರಿ.ಶ. ೧೯೪೩ ರಲ್ಲಿ ವ್ಯಾಜ್ಯ ಒಂದರ ರಿತು ವಿಜಾಪುರ ಕಲೆಕ್ಟರನಿಗೆ ಸಲ್ಲಿಸಲಾಗಿತ್ತು. ಅದರಲ್ಲಿಯ ಕೆಲವು ಸಾಲುಗಳು ''... ... Accordingly to the ant made by former Officers, a piece of follow land in the Suburbs of Sindgi Village assigned to and continues to be assigned in the name of Sankhappayya Son of ankhappayya Mahapurush of the Hindu Communiry of Brahmin mendicants ... ... etc.,"

೩. ಆದ್ಯ ಅನಂತಾಚಾರ್ಯರು (ಸಂ): ಆದ್ಯ ವಂಶಪ್ರದೀಪ ಪುಟ ೫೬

೪. ಅದೇ ಪುಟ ೫೯

೫. ಅದೇ ಪುಟ ೮೩

೬. ಅದೇ ಪುಟ ೮೫ - ೮೬

೭. ಅದೇ ಪುಟ ೯೫

೮. ಭೀ.ಸ್ವಾ.ಕಮಲಾಪುರ: ಸತ್ಕಥಾ ಪುಟ ೨೦೩-೨೦೪ (೧೯೩೧)

೯. ಪಂಢರಿನಾಥಾಚಾರ್ಯ ಗಲಗಲಿ(ಸಂ): ಮಾಧ್ವ ವಾಙ್ಮಯ ತಪಸ್ವಿಗಳು ಪು.೧೧೦೪

ಕಾಖಂಡಕಿಯಲ್ಲಿಯ
ಶ್ರೀಮಹಿಪತಿರಾಯರ
ಅಲಂಕೃತ ವೃಂದಾವನ



ಶ್ರೀಮಹಿಪತಿರಾಯರ ಸುವರ್ಣಮುಖ,
ಯೋಗದಂಡ ಹಾಗು ಪಾದುಕೆಗಳು
ಜೊತೆಗ ಶ್ರೀಕೃಷ್ಣರಾಯರ ಪಾದುಕೆಗಳು



ಧ್ಯಾಯ - ನಾಲ್ಕು

# ಮಹಿಪತಿರಾಯರು

೧ ಚಾರಿತ್ರಿಕ ಅಂಶಗಳು:

ಜೀವನ ಚರಿತ್ರೆಗಳನ್ನು, ಇತಿಹಾಸಗಳನ್ನು ಒಂದು ದಾಖಲೆ ಎಂಬಂತೆ ಬರೆದಿಡುವ ಪಾತ ನಮ್ಮ ಹಿರಿಯರಲ್ಲಿ ಇರಲಿಲ್ಲ. ಅವರಿಗೆ 'ಇಹ'ದಕಿಂತ 'ಪರ'ದ ಚಿಂತೆ ಹತ್ವದ್ದಾಗಿತ್ತು. ಪರಮಾತ್ಮನನ್ನು ಕುರಿತು, ಪರಲೋಕದ ಕುರಿತು ಚಿಂತಿಸುತ್ತ ಆ ತನೆಯಲ್ಲಿ ತಾವು ಕಂಡ ಅನುಭವಗಳನ್ನು ಮಾತ್ರ ಬರೆದಿಟ್ಟರು. ಹೀಗಾಗಿ ತಾವು ಷ್ಟ ಜಗತ್ತು, ತಮ್ಮ ಸಂಬಂಧಿಕರು, ಹೆಂಡತಿ, ಮಕ್ಕಳು, ಬಂಧು ಬಳಗ, ತಾವು ಹೊಟ್ಟೆಯ ಪಾಡಿಗಾಗಿ ಮಾಡುವ ಕೆಲಸ, ತಮ್ಮ ಕಾಲದ ಸಮಾಜ ಇವುಗಳತ್ತ ಅವರ ಕ್ಷ್ಯವೇ ಇರಲಿಲ್ಲ. ಒಮ್ಮೆ ತಮ್ಮ ಮನಸ್ಸನ್ನು ಆಧ್ಯಾತ್ಮದತ್ತ ಹೊರಳಿಸಿದರೆ ಸಾಕು ಭಗವಂತನೇ ಅವರಿಗೆ ತಾಯಿ, ತಂದೆ, ಗುರು, ಮಡದಿ, ಮಕ್ಕಳು, ಬಂಧು-ಬಳಗ ಲ್ಲವೂ ಆದ. ಇದು ಆಧ್ಯಾತ್ಮದತ್ತ ಒಲಿದ ಅನುಭಾವಿಗಳ ವಿಷಯವಾದರೆ, -ಸಾಹಿತಿಗಳು ಕೂಡ ಇದಕ್ಕೆ ಹೊರತಾಗಲಿಲ್ಲ. ಅದರಿಂದಾಗಿ ನಮ್ಮವರ ಂಸ್ಕೃತಿಕ ಇತಿಹಾಸದ ಅನೇಕ ಉಜ್ವಲ ಪುಟಗಳು ಬರೆಯದೆ ಉಳಿದವು.

ರಾಜಕೀಯ ಇತಿಹಾಸ ಅಲ್ಲಲ್ಲಿ ಸಿಗುತ್ತದಾದರೂ ಅವುಗಳಲ್ಲಿ ಯುದ್ಧ ಸೋಲು- ಗೆಲುವುಗಳ ವ್ಯತಿರಿಕ್ತ ಬೇರೇನನ್ನೂ ಕಾಣೆವು. ಚಾರಿತ್ರಿಕ -ಕಾವ್ಯ ಟಕಗಳಲ್ಲಿ ಕೂಡ ಇದನ್ನೇ ಕಾಣುತ್ತೇವೆ. ಸಾಮಾಜಿಕ -ಸಾಂಸ್ಕೃತಿಕ ಇತಿಹಾಸಕ್ಕೆ ಲ್ಲಿಯೂ ಹೇಳಿಕೊಳ್ಳುವಂಥ ನೆಲೆ ಸಿಗಲಿಲ್ಲ. ಮಹಿಪತಿರಾಯರು ತಮ್ಮ ಕಾಲದ ಜಕೀಯದಲ್ಲಿ ಸಕ್ರಿಯ ಪಾತ್ರವಹಿಸಿ ಬಾದಶಹನ ವರೆಗೂ ಪರಿಚಿತರಾಗಿದ್ದರೆಂದು ಂಪರೆಯಿಂದ ಹೇಳಿಕೊಂಡು ಬಂದಿದ್ದಾರೆ. ಅವರು ವಿಜಾಪುರದ ಆದಿಲಶಾಹಿ ಸರ ಆಳ್ವಿಕೆಯಲ್ಲಿ ಆರನೆಯ ಬಾದಶಹ ಮಹ್ಮದ ಆದಿಲಶಹನ ೬೨೬-೧೬೫೬) ಆಸ್ಥಾನದಲ್ಲಿ ಕೋಶಾಧಿಕಾರಿಗಳಾಗಿದ್ದರೆಂದು ಒಂದು ನಂಬುಗೆ ಟ್ಟವಾಗಿದೆ. ಅವರು ಮಂತ್ರಿಗಳಾಗಿದ್ದರು ಎಂದೂ ಕೆಲವರು ಹೇಳುತ್ತಾರೆ. ಆದರೆ ಹಾಸಿಕ ದಾಖಲೆಗಳಲ್ಲಿ ಅವರ ಹೆಸರು ಮಾತ್ರ ಈವರೆಗೆ ದೊರೆತಿಲ್ಲ! ಬಹುಶಃ ವರು ಖಡ್ಗ ಹಿಡಿದು ದಾಳಿಗೆ ಇಳಿದಿಲ್ಲ. ಅಥವಾ ಯಾವೊಂದು ಯುದ್ಧದ ಸೋಲು ುವುಗಳಲ್ಲಿ ಅವರು ಪ್ರಮುಖ ಪಾತ್ರವನ್ನು ವಹಿಸಲಿಲ್ಲ. ಆದ್ದರಿಂದ ಅವರು ಹಾಸಿಕ ದಾಖಲೆಗಳಲ್ಲಿ ಕಂಡು ಬರಲ್ಲಿವೇನೋ? ಆದಿಲಶಾಹಿ ಅರಸರ ಕಾಲದ ಹಾಸದ ಪುಟಗಳಲ್ಲಿ ಅನೇಕ ಹಿಂದು-ಮುಸ್ಲಿಮರ ಹೆಸರುಗಳು ರೆಯುತ್ತವಾದರೂ ಮಹಿಪತಿರಾಯರ ಹೆಸರು ಕಾಣದೆ ಇರುವದಕ್ಕೆ ಇದುವೆ ರಣವಾಗಿರಬೇಕು. ಆದರೆ ಮಹಿಪತಿರಾಯರ ಕುರಿತು ಬಂದ ಇತ್ತೀಚಿನ ಹಿತ್ಯದಲ್ಲೆಲ್ಲ ಅವರು ಆದಿಲಶಹನ ಆಸ್ಥಾನದಲ್ಲಿ ಸಚಿವರಾಗಿದ್ದರೆಂಬ ಅಂಶವನ್ನು ಷ್ಟದೆ ಉಲ್ಲೇಖಿಸುತ್ತಾರೆ.

ಮಹಿಪತಿರಾಯರು ತಮ್ಮ ಜೀವಿತ ಕಾಲದಲ್ಲಿಯೇ ಪಂಡಿತರ ಪಾಮರರ-ವರೆಗೆ, ಜನಸಾಮಾನ್ಯನಿಂದ -ಆಳುವ ಅರಸನವ ಪರಿಚಿತರಾಗಿದ್ದರೆಂದು ಪರಂಪರೆ ಹೇಳಿದರೂ ಅವರು ಮಾತ್ರ ತಮ್ಮ ಚರಿತ್ರೆಯ ಅಪರಿಚಿತವಾಗಿಯೇ ಉಳಿಸಿ ಹೋಗಿದ್ದಾರೆ. ಅವರ ಊರು, ಕುಲ, ಗೋ ತಂದೆ-ತಾಯಿ, ಹೆಂಡತಿ-ಮಕ್ಕಳು, ಬಂಧು-ಬಳಗ ಇವುಗಳ ಕುರಿತು ಖಚಿತವ ಏನನ್ನೂ ಹೇಳಲಿಲ್ಲ. ಸಾವಿರಕ್ಕೆ ಹತ್ತಿರದ ಕೃತಿಗಳನ್ನು ರಚಿಸಿದ್ದರೂ ಅವುಗಳಲ್ಲಿ ತಮ್ಮ ಆಧ್ಯಾತ್ಮದ, ಯೋಗ-ಸಿದ್ಧಿಯ, ಅನುಭಾವದ ಸ್ವಾನಂದ ಸಾಮ್ರಾಜ್ಯವ ವಿಸ್ತರಿಸಿದರೇ ಹೊರತು, ತಮ್ಮ ಭೌತಿಕ ಸಾಮ್ರಾಜ್ಯದ ಮೇರೆಗಳ ರಹಸ್ಯವಾಗಿಯೇ ಇಟ್ಟರು. ಅವರ ಕುರಿತು ಕಿಂಚಿತ್ ತಿಳಿದುಕೊಳ್ಳಲು ಅವ ಕಾಲವಾದ ಅನಂತರ ಒಂದುನೂರು ವರುಷ ಕಾಯಬೇಕಾಗುತ್ತದೆ. ಅವರ ಮರಿವ ತನ್ನ ಮುತ್ತಜ್ಜನ ಕುರಿತು 'ಶ್ರೀಪತಿ ತನುಜ' ಅಂಕಿತದಿಂದ ೨೦ ನುಡಿಗಳನ್ನು ಅಥ ೮೦ ಸಾಲುಗಳನ್ನು ಬರೆದಿದ್ದಾನೆ. ಅದುವೆ ಮಹಿಪತಿರಾಯರ ಕುರಿತು ದೊರೆಯ ಪ್ರಥಮ ಚಾರಿತ್ರಿಕ ದಾಖಲೆ ಎನ್ನಬೇಕು. 'ಕರುಣಿಸಯ್ಯ ದಯವಾರಿ ಮಹಾರಾಯಾ' ಎಂಬುದು ಆ ಕೃತಿಯ ಮೊದಲ ಸಾಲು. ಅದರಲ್ಲಿ ಕೂಡ ಐತಿಹಾಸಿ ಅಥವಾ ಹೇಳಿಕೊಳ್ಳುವಂಥ ಚಾರಿತ್ರಿಕ ಅಂಶಗಳೇನೂ ಇಲ್ಲ. ಅವ ಕೋನೇರಿರಾಯರ ಮಗನೆಂದು, ವಿಜಾಪುರದಲ್ಲಿ ಜನಿಸಿದರೆಂದು ಗೊತ್ತಾಗುತ್ತ ಹೆಂಡತಿಯ ಹೆಸರು ತಿಮ್ಮವ್ವ, ಗುರು ಭಾಸ್ಕರಸ್ವಾಮಿ, ಗುರುಗಳ ವಾಸ್ತವ್ಯ ಸಾರವಾ ಎಂಬ ಗ್ರಾಮದಲ್ಲಿ, ಅತ್ತಿಗೆಯ ಹೆಸರು ತುಕ್ಕವ್ವ ಹಾಗು ಕೊನೆಯಲ್ಲಿ ಭಕ್ತ ಕರೆಯಲು, ಕಾಖಂಡಕಿ ಗ್ರಾಮಕ್ಕೆ ಬಂದು ನೆಲೆಸಿದ ವಿಷಯ ಮಾತ್ರ ತಿಳಿಯುತ್ತ ಅವರೆ ಇದು ನಡೆದ ಕಾಲವಾಗಲಿ, ಅವರು ಬೆಳೆದು ಬಂದ ಬಗೆ, ಇತ್ಯಾದಿಗಳ ವಿವ ಇಲ್ಲಿಲ್ಲ. ೨೦ ನುಡಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಅವರ ಯೋಗ ಸಾಧನೆ, ಸಿದ್ಧಿ ಹಾಗ ಉಳಿದ ಭಾಗದಲ್ಲಿ ಅವರು ಮಾಡಿದ ಪವಾಡಗಳು ತುಂಬಿಕೊಂಡಿವೆ. ಈ ಕಿರ ಚರಿತ್ರೆಯನ್ನು ಕ್ರಿ.ಶ. ಸುಮಾರು ೧೭೮೦-೯೦ರ ಮಧ್ಯ ರಚಿಸಿರಬಹುದೆಂದು ಅವ ಮನೆತನದ ವಂಶಾವಳಿಯಿಂದ ಊಹಿಸಬಹುದಾಗಿದೆ.

ಶ್ರೀಪತಿ ತನುಜರ ಕಾಲದಲ್ಲಿಯೆ 'ರುಕ್ಮಜದಾಸ' ಎಂಬ ಕವಿ ಮರಾ ಭಾಷೆಯಲ್ಲಿ ಮಹಿಪತಿರಾಯರ ಚರಿತ್ರೆಯನ್ನು ಬರೆದಿದ್ದಾನೆ. ಚರಿತ್ರೆಯ ಒಂದು ಅಧ್ಯಾಯ ಮಾತ್ರ ದೊರೆತಿದೆ. ಮುಂದಿನ ಅಧ್ಯಾಯಗಳನ್ನು ಆತನೇ ಬರೆಯಲಿಲ್ಲವೋ ಅಥವಾ ಬರೆದು ದೊರೆತಿಲ್ಲವೋ ಹೇಳಲು ಬರುವಂತಿಲ್ಲ. ಚರಿತ್ರೆಯು ಓವಿ ಪದ್ಧತಿಯಲ್ಲಿದೆ. ದೊರೆತ ಒಂದು ಅಧ್ಯಾಯದಲ್ಲಿ ೨೨೫ ಓವಿಗಳಿವೆ. ಅಂದರೆ ೪೫೦ ಸಾಲುಗಳು. ಈ ಒಂದು ಅಧ್ಯಾಯ ಕೂಡ ಈವರೆಗೆ ಪ್ರಕಟಿತವಾಗಿ ಉಳಿದಿದೆ. ಕನ್ನಡ ಕಿರುಚರಿತ್ರೆಗೂ -ಮರಾಠಿ ಚರಿತ್ರೆಗೂ ಇರುವ

ವೆಂದರೆ ಐಗಳಿ ವಿಪ್ರ, ಕೋನೇರಿ ಪಂತ, ಆತನ ಮಗ ಮಹಿಪತಿಯ ಜನನ
ಮಲ್ಲಿ. ಮಗ ದೊಡ್ಡವನಾದ ಮೇಲೆ ಅಶನಾರ್ಥವಾಗಿ ವಿಜಾಪುರಕ್ಕೆ ಆಗಮನ.
ಲು ಖವಾಸಖಾನ ಎಂಬ ಸರದಾರನಲ್ಲಿ ಕರಣಿಕ ವೃತ್ತಿ. ಈ
ಮಲ್ಲಿದ್ದಾಗಲೇ ಒಂದು ದಿನ ಬಾದಶಹನ ಭೆಟ್ಟಿ. ಬಾದಶಹನ ಅನುಗ್ರಹದಿಂದ
ರದಲ್ಲಿ 'ಕಾರಭಾರಿ' ಎಂಬ ಕೆಲಸ. 'ನಂಗಾಶಾಹ' ಎಂಬ ಫಕೀರನ ದರ್ಶನದಿಂದ
ದಿನ ಇಹದ ಕುರಿತು ಮೋಹತ್ಯಾಗ. ಸಾರವಾಡದ ಭಾಸ್ಕರ ಸ್ವಾಮಿಗಳ
. ಭಾಸ್ಕರ ಸ್ವಾಮಿಗಳು ಮೂಲತಃ ಲೋಕಾಪುರದವರು ಎಂಬ ಉಲ್ಲೇಖ.
ಯ ಹೆಸರು ಇಲ್ಲಿಯೂ ತಿಮ್ಮಾಬಾಯಿ, ಆದರೆ ತುಕ್ಕವ್ವ ಇಲ್ಲಿ 'ಬಹಿಣ'
ಆಕ್ಕ-ತಂಗಿ ಯಾಗಿದ್ದಾಳೆ. ಭಾಸ್ಕರ ಸ್ವಾಮಿಗಳ ಅನುಗ್ರಹದೊಂದಿಗೆ
ಯ ಒಂದು ಅಧ್ಯಾಯ ಕೊನೆಗೊಳ್ಳುತ್ತದೆ. ಈ ಮರಾಠಿ ಕೃತಿಯು ಕೂಡ
ನು ಶತಮಾನದ ಮಧ್ಯದಲ್ಲಿ ರಚಿತವಾದುದೆಂದು ಈ ಮೊದಲೇ ಉಲ್ಲೇಖಿಸಿದ
ರವಳೀಕರರು ಅಭಿಪ್ರಾಯಪಡುತ್ತಾರೆ.

ಹಿಪತಿರಾಯರ ಕುರಿತು ದೊರೆಯುವ ಮೂರನೆಯ ಉಲ್ಲೇಖವೆಂದರೆ ಕ್ರಿ.ಶ.
ರಲ್ಲಿ ಪ್ರಕಟವಾದ ಮುಂಬಯಿ ಇಲಾಖೆಯ ಗೆಝಿಟಿಯರದಲ್ಲಿ. ಪಾಶ್ಚಾತ್ಯರ
ನದಿಂದ ಭಾರತದಲ್ಲಿ ಇತಿಹಾಸದ ಪ್ರಜ್ಞೆ ಮೂಡಿದಾಗ ಪ್ರಾದೇಶಿಕ
ಕೆಗಾಗಿ ಹಾಗು ಆಡಳಿತಕ್ಕೆ ಅನುಕೂಲವಾಗುವಂತೆ ಬ್ರಿಟಿಶರು ಜಿಲ್ಲಾ
ಯರ್‌ಗಳನ್ನು ಪ್ರಕಟಿಸಲು ಪ್ರಾರಂಭಿಸಿದರು. ಕೆಲವು ಪ್ರಮುಖ ಘಟನೆಗಳು,
ಖ ವ್ಯಕ್ತಿಗಳು ಹಾಗು ಸ್ಥಳ ಮಹಾತ್ಮೆ ಇತ್ಯಾದಿಗಳ ವಿವರಗಳನ್ನು
ಸಿದರು. ವಿಜಾಪುರ ಜಿಲ್ಲೆಯ ಗ್ಯಾಝಿಟಿಯರದಲ್ಲಿ ಕಾಖಂಡಕಿ ಗ್ರಾಮದ
ಖ ವ್ಯಕ್ತಿ ಎಂದು ಉಲ್ಲೇಖಿಸುತ್ತ ಮಹಿಪತಿರಾಯರ ಕುರಿತು ಅಂದಿನ ಜನರಿಗೆ
ಮವಷ್ಟನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಗ್ಯಾಝಿಟಿಯರದಲ್ಲಿ ಕಾಣುವ ಹೊಸ
ವೆಂದರೆ ಮಹಿಪತಿರಾಯರು ಔರಂಗಜೇಬನಲ್ಲಿ (೧೬೮೬-೧೭೦೭)
ಾಗಿದ್ದರು. ಕೊನೆಗೆ ಕೊಲ್ಹಾರ ಗ್ರಾಮದಲ್ಲಿ ಕಾಲವಾದರು. ಅವರ ಪಾರ್ಥಿವ
ನ್ನು ಅವರ ಇಚ್ಛೆಯಂತೆ ಕಾಖಂಡಕಿಗೆ ತಂದು ಅಲ್ಲಿ ಸಮಾಧಿಯನ್ನು
ಯಿತು.

ಷ್ಟು ಉಳಿದದ್ದು ಸಂಸ್ಕೃತ ಸ್ತೋತ್ರ, ಕ್ರಿ.ಶ. ೧೮೮೬ರಲ್ಲಿ (ಗತಾಬ್ದಾ:೧೮೦೮)
ರಾಮ ಎಂಬ ಕವಿ ಮಹಿಪತಿರಾಯರ ಸ್ತೋತ್ರವನ್ನು ರಚಿಸಿದ್ದಾನೆ. ಅದರಲ್ಲಿ
ಶ್ಲೋಕಗಳಿವೆ. ಕನ್ನಡ ಕಿರುಚರಿತ್ರೆ, ಮರಾಠಿ ಚರಿತ್ರೆಯ ಒಂದು ಅಧ್ಯಾಯಗಳೇ
ಸ್ತೋತ್ರದ ಮುಖ್ಯ ಆಕರಗಳಾಗಿವೆ. ಸ್ತೋತ್ರದಲ್ಲಿ ಬರುವ ಹೊಸ
ವೆಂದರೆ ಮಹಿಪತಿರಾಯರು ಮಾಡಿದ ಒಂದು ಪವಾಡ. ಆಗಲೇ ಸುಮಾರು

ನ ಸಾಧು ಸಂತರು ಸ್ವಾಮಿಗಳ ಚರಿತ್ರೆಗಳಲ್ಲಿ ಬರುವ ಮಾಂಸದ ನೈವೇದ್ಯವನ್ನು ಲ-ಪುಷ್ಪಗಳನ್ನಾಗಿ ಪರಿವರ್ತಿಸಿದ ಪವಾಡ ಇಲ್ಲಿಯೂ ನಡೆಯುತ್ತದೆ. ಪಠಣಕ್ಕೆ ನುಕೂಲವಾಗಿದ್ದರೂ ಸ್ತೋತ್ರವು ಪ್ರಚಲಿತದಲಿಲ್ಲ. ಪ್ರಕಟವೂ ಆಗಿಲ್ಲ.

ಹೀಗೆ ಮಹಿಪತಿರಾಯರ ಚಾರಿತ್ರಿಕ ಅಂಶಗಳುಳ್ಳ ನಾಲ್ಕು ದಾಖಲೆಗಳು ಬಾಹ್ಯ ಪ್ರಮಾಣಗಳಾಗಿ ದೊರೆಯುತ್ತವೆ. ಇವುಗಳೆಲ್ಲೆಲ್ಲ ಕಾಣುವ ಒಂದು ಮುಖ್ಯ ಂಶವೆಂದರೆ ಚರಿತ್ರೆಯನ್ನು ಹೇಳುವಾಗ ಭಾವುಕತನಕ್ಕೆ ಹೆಚ್ಚು ಒತ್ತು ಕೊಟ್ಟುದು. ದರಿಂದಾಗಿ ನಮಗೆ ದೊರೆಯುವ ಕಥಾನಕಗಳಲ್ಲಿ ವಾಸ್ತವಿಕಕ್ಕಿಂತ ಕಲ್ಪನೆಗೆ ಹೆಚ್ಚು ಮಹತ್ವ ಕೊಟ್ಟದ್ದು ಕಂಡು ಬರುತ್ತದೆ. ಆದ್ದರಿಂದ ಇಂಥವುಗಳಲ್ಲಿ ಉಲ್ಲೇಖಿತವಾದ ಲವು ಅತಿರಂಜಿತ ಕಲ್ಪನೆಗಳನ್ನು, ಅಸಾಧ್ಯದ ಪವಾಡಗಳನ್ನು ಅವಾಸ್ತವಿಕ ದೃಷ್ಟಿಯಿಂದ ಬದಿಗೆ ಸರಿಸಬೇಕಾಗುತ್ತದೆ. ಆದರಿಂದಾಗಿ ಮಹಾಪುರುಷರ ಲೌಕಿಕತೆಯನ್ನು ಪ್ರಶ್ನಿಸಿದ ಹಾಗೆ ಎಂದು ಯಾರೂ ಭಾವಿಸಬೇಕಾಗಿಲ್ಲ.

ಇನ್ನು ಮಹಿಪತಿರಾಯರ ಜೀವನದ ಮೇಲೆ ಬೆಳಕು ಬೀರಲು ಸಹಾಯವಾಗುವ ಲವು ಅಂತರಿಕ ಪ್ರಮಾಣಗಳೂ ದೊರೆಯುತ್ತವೆ. ಅವುಗಳಲ್ಲಿ ಅವರೇ ರಚಿಸಿದ ನೆದು ನಮಿಸುವೆನು ವಾರಂ ವಾರ' ಎಂಬ ಸ್ತೋತ್ರ ಪದ್ಯ, ಅವರ ಮಗ ಷ್ಣರಾಯರು ರಚಿಸಿದ ಖಂಡಕಾವ್ಯ 'ಆನಂದ ಲಹರಿ'ಯ ಕೊನೆಯ ಪದ್ಯ ಹಾಗು ೂರೆತ ಹಸ್ತಪ್ರತಿಗಳಲ್ಲಿ ಕೆಲವೆಡೆ ನಮೂದಿತವಾದ ಕಾಲ ನಿರ್ದೇಶನಗಳು ಮುಖವಾಗಿವೆ.

ಈ ಬಾಹ್ಯ ಹಾಗು ಆಂತರಿಕ ಪ್ರಮಾಣಗಳ ಆಧಾರದಿಂದ ಹಾಗು ರಂಪರೆಯಿಂದ ಕೇಳಿ ಬಂದ ಸಂಗತಿಗಳಿಂದ ಈ ಶತಮಾನದಲ್ಲಿ ಕೂಡ ಹಿಪತಿರಾಯರ ಚರಿತ್ರೆಯನ್ನು ಹಲವೆಡೆ ಬರೆದು ಪ್ರಕಟಿಸಿದ್ದಾರೆ. ಅವುಗಳಲ್ಲಿ ಮುಖವಾದವುಗಳು ಶ್ರೀ ಬೇಲೂರ ಕೇಶವದಾಸರ 'ಕರ್ಣಾಟಕ ಭಕ್ತ ಜಯ'ದಲ್ಲಿ ಬರುವ ರಾಯರ ಚರಿತ್ರೆ, ಅವರ ಮನೆತನದವರೇ ಆದ ಶ್ರೀ ಷ್ಣಪ್ಪಯ್ಯ ಹರಿದಾಸರು ಸಂಪಾದಿಸಿದ 'ಶ್ರೀ ಮಹಿಪತಿರಾಯರ ಕೀರ್ತನೆಗಳ ಗ್ರಹ' (೧೯೫೩) ಹಾಗೂ ಶ್ರೀ ಶ್ರೀಪತಯ್ಯ ಹರಿದಾಸರು ಸಂಗ್ರಹಿಸಿದ ವಾತತ್ವ' (೧೯೬೩) ಗಳ ಪೀಠಿಕೆಗಳಲ್ಲಿ ಬರುವ ರಾಯರ ಸಂಕ್ಷಿಪ್ತ ಚರಿತ್ರೆ. ಮ.ಶ್ರೀ. ದೇಶಪಾಂಡೆ ಅವರ 'ಸ್ವಾನಂದ ಸಾಮ್ರಾಜ್ಯ' (೧೯೬೨) ಹಾಗು ಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಡಾ. ಜ. ದರಾಜರಾವ ಅವರು ಸಂಪದಾಸಿದ 'ಶ್ರೀ ಮಹಿಪತಿ ರಾಯರ ಕೀರ್ತನೆಗಳು' ೯೭೬) ಸಂಗ್ರಹದ ಪೀಠಿಕೆಯಲ್ಲಿ ಬಂದ ಚರಿತ್ರೆ ಇವುಗಳಲ್ಲದೆ ಸಾಂದರ್ಭಿಕವಾಗಿ ಯತಕಾಲಿಕೆಗಳಲ್ಲಿ ಕೆಲವು ಬಿಡಿ ಲೇಖನಗಳೂ ಪ್ರಕಟವಾಗಿವೆ.

ಈಗ ಇವೆಲ್ಲವುಗಳ ಆಧಾರಗಳಿಂದ ಮಹಿಪತಿರಾಯರ ವಸ್ತು ನಿಷ್ಠವಾದ ರಿತ್ರೆಯನ್ನು ನೋಡುವ ಮೊದಲು ಅವರ 'ಕಾಲ ವಿಚಾರ'ವನ್ನು ಚರ್ಚಿಸಬಹುದು.

.೨ ಕಾಲ-ವಿಚಾರ

ಪೂರ್ವೋಕ್ತ ಚಾರಿತ್ರಿಕ ಅಂಶಗಳುಳ್ಳ ಕೃತಿಗಳಲ್ಲಿ ಶ್ರೀ. ಮ.ಶ್ರೀ. ದೇಶಪಾಂಡ ವರು ಹಾಗೂ ಶ್ರೀ ಶ್ರೀಪತಯ್ಯ ಹರಿದಾಸರು ತಮ್ಮ ಕೃತಿಗಳಲ್ಲಿ ಮಹಿಪತಿರಾಯ ುಲ ವಿಚಾರದ ಕುರಿತು ಚರ್ಚಿಸಿದ್ದಾರೆ. ಅವುಗಳನ್ನು ಡಾ. ಜಿ. ವರದರಾಜರಾವ್ ವರು ವಿಶೇಷ ಚರ್ಚೆ ಇಲ್ಲದೆ ಒಪ್ಪಿಕೊಂಡಿದ್ದಾರೆ.//೧// ಇವರುಗಳ ಪ್ರಕಾರ,

| | | |
|---|---|---|
| ಮಹಿಪತಿರಾಯರ ಜನನ | ಕ್ರಿ.ಶ.ಸು. | ೧೬೧೧ |
| ಸಚಿವರಾದದ್ದು | ,, | ೧೬೩೫ |
| ಗುರುಗಳ ಅನುಗ್ರಹ | ,, | ೧೬೫೧ |
| ವಿಜಾಪುರ ತ್ಯಾಗ | ,, | ೧೬೫೫ |
| ಕಾಖಂಡಕಿಯಲ್ಲಿ ನೆಲೆಸಿದ್ದು | ,, | ೧೬೫೯ |
| ಮಗ ಕೃಷ್ಣರಾಯರ ಜನನ | ,, | ೧೬೬೩ |
| ಮಹಿಪತಿರಾಯರ ಮರಣ | ,, | ೧೬೮೧ |

ಿಗೆ ಕ್ರಿ.ಶ.ಸು ೧೬೧೧ ರಿಂದ ೧೬೮೧ರ ವರೆಗೆ ಅಂದರೆ ೭೦ ವರುಷಗಳವರೆ ಜೀವಿಸಿದ್ದರೆಂದು ಹೇಳಲಾಗಿದೆ.

ಮೊದಲು ಅವರುಗಳು ಆಧರಿಸಿದ ಗ್ರಂಥಗಳನ್ನು ನೋಡಬಹುದು.

'ಮಹಿಪತಿರಾಯರು ಖವಾಸಖಾನನೆಂಬ, ಬಾದಶಹನ ಅಧಿಕಾರಿಯ ನೊದಲು ಕಾರಕೂನನಾಗಿ ಕೆಲಸ ಮಾಡಹತ್ತಿದರೆಂದು 'ಗುರು ಮಾಲಿಕೆ'ಯ ಹೇಳುತ್ತದೆ. ಈ ಖವಾಸಖಾನನು ವಿಜಾಪುರದಲ್ಲಿ ಕ್ರಿ.ಶ. ೧೬೨೬ರಿಂದ ೧೬೫೬ ನರೆಗೆ ಆಳಿದ ಮಹ್ಮದಶಹನ ದಿವಾಣನೇ ಇರುವ ಸಂಭವವಿದೆ. ಅವನನ್ನು ಶಾಹ ಕ್ರಿ.ಶ. ೧೯೩೫ರಲ್ಲಿ ಪಿತೂರನೆಂದು ಕೊಲ್ಲಿಸಿದನು ಎಂದು ಇತಿಹಾಸ ಹೇಳುತ್ತ ಎಂದು ಶ್ರೀ ಮ.ಶ್ರೀ. ದೇಶಪಾಂಡೆ ಅವರು ಮಹಿಪತಿರಾಯರ ಮರಾಠಿ ಚರಿತ್ರೆಯ ಬಂದ ವಿಷಯವನ್ನು ಇತಿಹಾಸದೊಂದಿಗೆ ಜೋಡಿಸಿದ್ದಾರೆ.//೨//

ವಿಜಾಪುರದ ಎರಡುನೂರು ವರುಷಗಳ ಆದಿಲಶಾಹಿ ರಾಜ್ಯದಲ್ಲಿ ಇಬ್ಬ ಖವಾಸಖಾನರು ಆಗಿಹೋದರೆಂದು ಚರಿತ್ರೆ ಹೇಳುತ್ತದೆ. ಒಬ್ಬ ಖವಾಸಖಾನನು ದೇಶಪಾಂಡೆ ಅವರು ಹೇಳುವ ಮಹ್ಮದ ಆದಿಲಶಹನ (೧೯೨೬-೧೯೫ ಕಾಲದಲ್ಲಿ ಇದ್ದದ್ದು ನಿಜ. ಇನ್ನೊಬ್ಬ ಖವಾಸಖಾನನು ೨ನೆಯ ಅಲಿ ಆದಿಲ

೧೬-೧೬೨೯) ಹಾಗು ಸಿಕಂದರ ಆದಿಲಶಹನ (೧೬೨೯-೧೬೮೬)
'ಲ್ಲಿ ಇದ್ದನು.//೩// ಈ ಇಬ್ಬರು ಖವಾಸಖಾನರಲ್ಲಿ ಮೊದಲನೆಯವನ
) ಹೆಸರು ದೌಲತಖಾನ ಎಂದಾಗಿತ್ತು. ಮಹ್ಮದ ಆದಿಲಶಹನು ಪಟ್ಟಕ್ಕೆ
ಲ್ಲಿ ಈತ ಸಹಾಯ ಮಾಡಿದನೆಂದೂ, ಅನಂತರ ಅವನಿಗೆ 'ಖವಾಸಖಾನ'
ಬಿರುದನ್ನು ಕೊಡಲಾಗಿತ್ತು.//೪// ಶ್ರೀ ದೇಶಪಾಂಡೆಯವರು ಹೇಳುವಂತೆ
ಬಾದಶಹನಿಂದ ಕೊಲ್ಲಲ್ಪಡಲಿಲ್ಲ. ಕೊನೆಯವರೆಗೂ ಬಾದಶಹನ
ಮನ್ನು ಸಂಪಾದಿಸಿದ್ದನು. ಆದರೆ ಸಿಕಂದರನ ಕಾಲದಲ್ಲಿದ್ದ ಖವಾಸಖಾನನು
ಟ್ಟನು. ಅದು ಸುಮಾರು ೧೬೭೪-೭೫ ರಲ್ಲಿ ನಡೆದ ಘಟನೆ.//೫//

ರುಮಾಲಿಕೆಯಲ್ಲಿ ಮಹಿಪತಿರಾಯರು ಖವಾಸ ಖಾನನಲ್ಲಿ
ಾಗಿದ್ದರೆಂತಲೂ ಮುಂದೆ ಅವನ ಹಾಗು ಬಾದಶಹನ ಪ್ರೀತ್ಯಾದರಗಳಿಗೆ
ಗಿ ದಿವಾನ (ಸಚಿವ) ಪದವಿಗೆ ಏರಿದರೆಂತಲೂ ಹೇಳಿದೆ ಎಂದು ಶ್ರೀ
ಂಡೆ ಅವರು ಸ್ವಾನಂದ ಸಾಮ್ರಾಜ್ಯದಲ್ಲಿ ಹೇಳಿದ್ದನ್ನು ಡಾ. ವರದರಾಜರಾವ್
ಅನುಮೋದಿಸಿದ್ದಾರೆ.//೬// ಆದರೆ ಗುರುಮಾಲಿಕೆ ಎಂದು ಕರೆಯುವ
ಚರಿತ್ರೆಯಲ್ಲಿ ದಿವಾನ ಪಟ್ಟಕ್ಕೆ ಏರಿದರೆಂದು ಹೇಳಿಲ್ಲ. ಒಂದು ದಿನ ತನ್ನ
ಬಾದಶಹನ ಮಧ್ಯದ ಲೆಕ್ಕಪತ್ರದ ವಿಷಯದಲ್ಲಿ ವಿವರಣೆ ಕೊಡಲು
ತಿರಾಯರನ್ನು ಬಾದಶಹನ ಹತ್ತಿರ ಕಳಿಸಿದನು. ರಾಯರ ವಿವರಣೆಯಿಂದ
ರ ತೃಪ್ತಿಪಟ್ಟು, ಇಂಥ ವ್ಯಕ್ತಿ ತನ್ನ ಆಸ್ಥಾನದಲ್ಲಿರಬೇಕೆಂದುಕೊಂಡು
ಬಾರ'ನೆಂದು ನಿಯಮಿಸಿದ.//೭//

ದೇಶಪಾಂಡೆ ಹಾಗೂ ಶ್ರೀ ಶ್ರೀಪತಯ್ಯನವರು ಈ ಐತಿಹಾಸಿಕ ಆಧಾರಗಳ
ಶ್ರೀಪತಿತನುಜರು ಬರೆದ ಕನ್ನಡ ಕಿರುಚರಿತ್ರೆಯಲ್ಲಿಯ ಕೆಲವು
ಗಳನ್ನು ಸೇರಿಸಿ ಕಾಲ ನಿರ್ಣಯಿಸಲು ಪ್ರಯತ್ನಿಸಿದ್ದಾರೆ.//೮//
ಂದ ತೆಗೆದುಕೊಂಡ ನುಡಿಗಳು ಹೀಗಿವೆ.

'ಅಂತರಂಗದಲ್ಲಿ ತಿಳಿಯುತಲಾಗ್ರಾಮಾ। ತ್ಯಜಿಸಿದ್ಯೋ ನಿಸ್ಸೀಮಾ।।
ಸಂತಸದಲ್ಲಿ ಶಾಪೂರಕ್ಹೋಗುತ ಧಾಮಾ। ಮಾಡಿದ್ಯೋ
ನಿಷ್ಕಾಮಾ।।೧೧।।

ಅಲ್ಲಿ ಮೂರು ಸಂವತ್ಸರ ಇರಲಾಗಿ। ಶರಣಾಳಿಯು ಬಾಗಿ।।
ಇಲ್ಲಿ ನೀವು ದಯಮಾಡುವುದೊಳಿತಾಗಿ। ಸರಿಬಾರದಾಗಿ।।
ಅಲ್ಲಿಂದ ಪಯಣಮಾಡುತ ಪಥಸಾಗಿ। ಬಂದ್ಯೋ ಮಹಾತ್ಮಾಗಿ।।
ಮೆಲ್ಲನೆ ಕಾಖಂಡಕಿ ಸ್ಥಳಕನುವಾಗಿ। ಬರಲು ವರಯೋಗಿ।।೧೨।।'

ಲ್ಲಿ ಗಮನಿಸಬೇಕಾದ ಅಂಶವೆಂದರೆ, ಮರಾಠಿ ಚರಿತ್ರೆಯನ್ನು ಬರೆದ
ಶಾಸನ ಸಮಕಾಲೀನರು ಅಥವಾ ತುಸು ಮೊದಲಿನವರೇ ಆದ ಶ್ರೀಪತಿ
ತಮ್ಮ ಮುತ್ತಜ್ಜನ ಈ ಚರಿತ್ರರೂಪದ ಪದ್ಯಗಳಲ್ಲಿ ಮಹಿಪತಿರಾಯರು
ಇದ್ದುದನ್ನಾಗಲೀ, ಅನಂತರ ದಿವಾಣ ಪದವಿಗೆ ಏರಿದರೆಂದಾಗಲೀ
ಲ್ಲ. ನೇರ ಸಂಬಂಧವುಳ್ಳ ಶ್ರೀಪತಿ ತನುಜರು ಈ ವಿಷಯದಲ್ಲಿ ಹೆಚ್ಚಿನ
ಚೆಲ್ಲಬಹುದಾಗಿತ್ತು. ಮಹಿಪತಿರಾಯರ ಜೀವನದ ಪ್ರಾರಂಭದ ದಿನಗಳನ್ನು
ಾಗ ಅವರು ಕೊಡುವ ಚಿತ್ರ ಹೀಗೆ ಇದೆ.

'ಜನಿಸಿದೆ ಮೊದಲೇ ವಿಜಾಪುರದಲಿ ನೀನು। ಭಕ್ತರ ಸುರಧೇನು।।
ಜನದೊಳೆನಿಸಿ ಕೋನೇರಿರಾಯನ ಮಗನು। ಐಗಳಿ ವೃತ್ತಿಯನು।।
ಮನಕೆ ತಾರದೆ ಘನ ವ್ಯಾಪಾರವನು। ಮಾಡುತ ಭಾಗ್ಯವನು।।
ಅನುಭವಿಸುತಲಿರೆ ಸುತರಾಪೇಕ್ಷೆಯನು। ಮಾಡಲು ತಿಮ್ಮವ್ವನು।।೧।।

ಲ್ಲಿ ಬರುವ ಅರ್ಥ- ಮಹಿಪತಿರಾಯರು - ಐಗಳಿ ವೃತ್ತಿ (ಐಗಳ -ವೃತ್ತಿ
ಕ್ಷವೃತ್ತಿ) ಯನ್ನು ಬಿಟ್ಟು ಘನ ವ್ಯಾಪಾರವನ್ನು ಮಾಡುತ್ತ ಭಾಗ್ಯವನ್ನು
ವಿಸುತ್ತಿರುವಾಗ ಅವರ ಹೆಂಡತಿ ತಿಮ್ಮವ್ವನು ಮಕ್ಕಳ ಅಪೇಕ್ಷೆಯನ್ನು ಮಾಡಿ
ಡದಲ್ಲಿದ್ದ ಭಾಸ್ಕರ ಸ್ವಾಮಿಗಳ ಸೇವೆಯನ್ನು ಮಾಡಿದಳೆಂದು ಕಥೆ ಸಾಗುತ್ತದೆ.

ಲ್ಲಿಯ 'ಅಂತರಂಗದಲ್ಲಿ ತಿಳಿಯುತಲಾಗ್ರಾಮಾ' ಎನ್ನುವ ವಿಷಯವನ್ನು
೧೬೫೬ ರಲ್ಲಿ ಔರಂಗಜೇಬನು ವಿಜಾಪುರದ ಮೇಲೆ ದಂಡೆತ್ತಿ ಬಂದುದನ್ನು
ಸಿ, ರಾಯರು ಈ ದಂಡು ದಾಳಿಯೇ ವಿಪತ್ತು ಎಂದು ತಮ್ಮ
ಜ್ಞಾನದಿಂದ ತಿಳಿದು ಇನ್ನು ಇಲ್ಲಿರುವುದು ಉಚಿತವಲ್ಲವೆಂದು 'ಶಾಪೂರ'ಕ್ಕೆ
ದರೆಂದು ಶ್ರೀ ಶ್ರೀಪತಯ್ಯನವರು ಹೇಳುತ್ತಾರೆ.//೯// ಕ್ರಿ.ಶ. ೧೬೫೬ರಲ್ಲಿ
ಜೇಬನು ವಿಜಾಪುರದ ಮೇಲೆ ದಂಡೆತ್ತಿ ಬಂದುದು ನಿಜ. ಆದರೆ ಶಾಹಜಹಾನನ
ತೆಯನ್ನು ಕೇಳಿ ತನ್ನ ಸಿಂಹಾಸನ ಹೋದೀತೆಂದು ವಿಜಾಪುರದ ದಾಳಿಯನ್ನು
ನಿಲ್ಲಿಸಿ ಅವನು ದಿಲ್ಲಿಗೆ ಮರಳಿದನು.//೧೦// ಹೀಗಾಗಿ ಬಂದ ವಿಪತ್ತು
ಾಯಿತು. ಆದ್ದರಿಂದ ಈ ಸಮಯದಲ್ಲಿ ಮಹಿಪತಿರಾಯರು ವಿಜಾಪುರವನ್ನು
ಶಾಹಪುರಕ್ಕೆ ಹೋಗಿ ಅಲ್ಲಿ ಮೂರುವರ್ಷ ಇರುವ ಅವಶ್ಯಕತೆ ಇರಲಿಲ್ಲ.
ಶ್ರೀಪತಿತನುಜರು ಹೇಳಿದಂತೆ 'ಶಾಹಪುರಕ್ಕೆ ಹೋಗಿ ಮೂರು ವರುಷ ಅವರು
ಇದ್ದುದನ್ನು ಅಲ್ಲಗಳೆಯುವಂತಿಲ್ಲ. ಅವರು ಶಾಹಪುರಕ್ಕೆ ಹೋಗಿದ್ದು ನಿಜ.
ಗಿ ಜಿಲ್ಲೆಯ ತಾಲೂಕಿನ ಸ್ಥಳ ಶಾಹಪುರದಲ್ಲಿ ಇಂದಿಗೂ ಅವರು
ಕೊಂಡಿದ್ದ ಕುರುಹುಗಳು ಇವೆ. ಆದ್ದರಿಂದ ಒಂದು ದೊಡ್ಡ ವಿಪತ್ತನ್ನು
ಗಿಟ್ಟುಕೊಂಡು ಅವರು ಶಾಹಪುರಕ್ಕೆ ಹೋಗಿರಬೇಕು. ಪ್ರಸ್ತುತ ವಿಜಾಪುರಕ್ಕೆ

ಅಂಥ ದೊಡ್ಡ ವಿಪತ್ತನ್ನು ಗುರುತಿಸಬೇಕು.

,.ಶ. ೧೬೮೪ರಲ್ಲಿ ಔರಂಗಜೇಬನು ಮತ್ತೆ ದಕ್ಷಿಣಕ್ಕೆ ದಂಡೆತ್ತಿ ಬಂದನು. ಗಟ್ಟಲೇ ಕಾಡಾಡಿ, ಮರಾಠಾ, ಮೊಗಲ ಹಾಗೂ ವಿಜಾಪುರಗಳಲ್ಲಿ ಪರಸ್ಪರ ಒಡಕುಗಳನ್ನು ಸೃಷ್ಟಿಸಿ ಕೊನೆಗೆ ೧೬೮೬ರಲ್ಲಿ ವಿಜಾಪುರವನ್ನು ಆತ ಸಿಕೊಂಡನು. ವಿಜಾಪುರದ ಕೊನೆಯ ಬಾದಶಹ ತರುಣ ಸಿಕಂದರನನ್ನು ಕೈದು ಕೊಂಡು ಹೊರಟಾಗ ನಗರದ ಜನತೆ ಕಣ್ಣೀರು ಹರಿಸಿತೆಂದು ಇತಿಹಾಸದ ಸು ಹೇಳುತ್ತವೆ. ಅಂತು ಹೀಗೆ ವಿಜಾಪುರದ ಪತನವಾದಾಗ ಆದರ ಬೆನ್ನ ಮೇ ಕ್ರಿ.ಶ. ೧೬೮೬ ರಿಂದ ೧೬೮೯ರ ವರೆಗೆ ಮೂರು ವರುಷ ವಿಜಾಪುರ ) ಪ್ಲೇಗಿನಿಂದ ಧಗಧಗಿಸಿತು.//೧೧// ಇದು ವಿಜಾಪುರಕ್ಕೆ ಬಂದ ಬಹುದೊಡ್ಡ , ಎಂದು ಹೇಳಬೇಕು. ಇದಕ್ಕೆ ಪೂರಕವಾಗಿ ಶ್ರೀಪತಿ ತನುಜರು ತಮ್ಮ ಪ್ಪನ ಕಿರುಚರಿತ್ರೆಯ ಹತ್ತನೆಯ ನುಡಿಯ ಕೊನೆಯ ಸಾಲಿನಲ್ಲಿ ಹಾಗೂ ಂದನೆಯ ನುಡಿಯ ಮೊದಲನೆಯ ಸಾಲು ಈ ವಿಷಯವನ್ನು ಒತ್ತಿ ್ನು ಶ್ರೀ ದೇಶಪಾಂಡೆ ಅವರಾಗಲಿ, ಶ್ರೀ ಶ್ರೀಪತಯ್ಯ ಹರಿದಾಸರಾಗಲಿ ದಂತಿಲ್ಲ.

'ಅನಿತರೊಳಗೆ ನೀ ಆ ನಗರಕೆ ತ್ವರಿತ। ವೇಧಿಯು ಬಂತೆನುತ ।।೧೦।।
ಅಂತರಂಗದಲಿ ತಿಳಿಯುತಲಾಗ್ರಾಮಾ। ತ್ಯಜಿಸಿದ್ಯೋ ನಿಸ್ಸೀಮಾ।

ಇದ್ದರಿಂದ ಈ ಅವಧಿಯಲ್ಲಿ ಅಂದರೆ ಕ್ರಿ.ಶ. ಸುಮಾರು ೧೬೮೫-೮೬ರ ಗೆ ಮಹಿಪತಿರಾಯರು ವಿಜಾಪುರವನ್ನು ಬಿಟ್ಟು ಶಾಪುರಕ್ಕೆ ಹೋಗಿರಬಹುದು. ಲ್ಲಿ ಊರು ಬಿಟ್ಟು ಹೋಗುವದು ಸಹಜ ವಿಷಯ. 'ವೇಧಿಯು ಬಂತೆನುತ' ರಂಗದಲಿ ತಿಳಿಯುತಲಾಗ್ರಾಮಾ' ಹಾಗೂ 'ಅಲ್ಲಿ ಮೂರು ಸಂವತ್ಸರ ಗಿ' ಎಂಬ ಪದಗಳು ಇಲ್ಲಿ ಸಾಕಷ್ಟು ಅರ್ಥಪೂರ್ಣವೆನಿಸುತ್ತವೆ. ಶಾಪುರದಲ್ಲಿ ) ವರುಷ ಇದ್ದು ತಿರುಗಿ ವಿಜಾಪುರಕ್ಕೆ ಬಂದಾಗ, ಹಾಳು ಬಿದ್ದ ವಿಜಾಪುರವನ್ನು , ಅಲ್ಲಿರದೆ ಸಮೀಪದ ಕಾಖಂಡಕಿ ಎಂಬ ಗ್ರಾಮಕ್ಕೆ ಪ್ರಯಾಣ ಬೆಳೆಸಿ ), ಸ್ಥಾಯಿಯಾಗಿ ಉಳಿದಿರಬಹುದು. ಈ ಕಾರಣಗಳಿಂದ ಮಹಿಪತಿರಾಯರು ನಶಾಹನ , (೧೬೨೬-೧೬೫೬) ಕಾಲದಲ್ಲಿರದೆ ಸಿಕಂದರನ ೨-೧೬೮೬) ಕಾಲದಲ್ಲಿ ಇದ್ದರೆಂದು ಹೇಳುವದು ಸೂಕ್ತವೆನಿಸುತ್ತದೆ.

ಈಗ ಶ್ರೀ ದೇಶಪಾಂಡೆ ಹಾಗೂ ಶ್ರೀ ಶ್ರೀಪತಯ್ಯನವರು ಚಾರಿತ್ರಿಕ ಗಳಲ್ಲಿ ಇರದ ಆದರೆ ಪರಂಪರೆಯಿಂದ ಕೇಳಿಕೊಂಡ ಬಂದ ಒಂದು ುನ್ನು ತಮ್ಮ ಚರಿತ್ರೆಗಳಲ್ಲಿ ಉಲ್ಲೇಖಿಸಿದ್ದನ್ನು ಗಮನಿಸೋಣ.

ಮಹಿಪತಿರಾಯರ ಗುರುಗಳೆಂದು ಹೇಳಿಕೊಳ್ಳುತ್ತ ಬಂದ ಉಮರ್ಜಿ
ೃಚಾರ್ಯರ ಹೆಸರನ್ನು ಶ್ರೀ ದೇಶಪಾಂಡೆ, ಶ್ರೀ ಶ್ರೀಪತಯ್ಯ ಹಾಗೂ ಡಾ. ಜಿ.
ದರಾಜರಾವ ತಂತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ.//೧೨// ಆದರೆ ಅವರ
ವನ್ನು ಗಮನಿಸಿದಂತಿಲ್ಲ. ಈ ಉಮರ್ಜಿಯವರು ಯಾರು?

ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರು ಉತ್ತರಾದಿಮಠದ ಶ್ರೀ ಸತ್ಯಾಭಿನವ
ರ್ಥರೊಡನೆ ಇರುತ್ತಿದ್ದರು. ಶ್ರೀ ಸತ್ಯಾಭಿನವ ತೀರ್ಥರು ಉತ್ತರಾದಿ ಮಠವನ್ನು
ದ್ದು ಕ್ರಿ.ಶ. ೧೬೭೩ ರಿಂದ ೧೭೦೩.//೧೩// ಈ ಕಾಲದಲ್ಲಿ
ಮರ್ಜಿಯವರು ಇದ್ದರೆನ್ನಬಹುದು. ಆದರೆ ಗ್ರಹಿತ ಕ್ರಿ.ಶ. ೧೬೧೧ ರಲ್ಲಿ
ಟ್ಟಿರಬಹುದಾದ 'ಬಾಲ ಮಹಿಪತಿಯ ಜಾತಕವನ್ನು ಪ್ರಲ್ಹಾದ ಕೃಷ್ಣಾಚಾರ್ಯರ
ೀಡಿದರು' ಎಂಬ ಶ್ರೀಪತಯ್ಯನವರ ಹೇಳಿಕೆ,//೧೪// 'ಒಂದು ದಿನ ಏನೊ
ರಣದಿಂದ ಮಹಿಪತಿಯ ಜನ್ಮ ಪತ್ರಿಕೆಯನ್ನು ನೋಡುವ ಕುತೂಹಲ
ಕಾರ್ಯರಿಗುಂಟಾಯಿತು' ಎಂಬ ಶ್ರೀ ದೇಶಪಾಂಡೆಯವರ ಹೇಳಿಕೆ//೧೫/
ಗೂ 'ಬಾಲಕ ಮಹಿಪತಿಯ ಜಾತಕವನ್ನು ಕಂಡ ಆಚಾರ್ಯರು .... .. ' ಎಂ
. ಜಿ. ವರದರಾಜರಾವ ಅವರ ಹೇಳಿಕೆಗಳು //೧೬// ಅಸಂಗತವೆನಿಸುತ್ತ
ಪ್ಪಾಗಿಯೂ ಉಮರ್ಜಿ ಅವರ ಹೆಸರು ಗ್ರಂಥಸ್ಥವಾಗಿ ಈ ವರೆಗೆ ಎಲ್ಲಿಯ
ರೆತಿಲ್ಲ. ಶ್ರೀಪತಿ ತನುಜರಾಗಲಿ, ರುಕ್ಮಜದಾಸನಾಗಲಿ, ತಮ್ಮ ಚರಿತ್ರೆಗಳ
ಮರ್ಜಿ ಅವರ ಹೆಸರನ್ನು ಉಲ್ಲೇಖಿಸುವುದಿಲ್ಲ. ಮಹಿಪತಿರಾಯರು ತಮ್ಮ ಗು
ಸ್ಕರ ಸ್ವಾಮಿಗಳ ಕುರಿತು ನೂರಾರು ಪದಗಳನ್ನು ಬರೆದಿರುವರಾದರೂ ಉಮಜಿ
ವರ ಹೆಸರನ್ನು ಎಲ್ಲಿಯೂ ಉಲ್ಲೇಖಿಸದೇ ಇದ್ದುದು ಗಮನಾರ್ಹವಾಗಿದೆ.

ಈವರೆಗೆ ಚರ್ಚಿಸಿದ ವಿಷಯಗಳಿಂದ ಮಹಿಪತಿರಾಯರು ೧೭ನೆಯ ಶತಮಾನ
ದಿಯಲ್ಲಿರದೆ - ಆ ಶತಮಾನದ ಅಂತ್ಯ ಹಾಗೂ ೧೮ನೆಯ ಶತಮಾ
ದಿಯಲ್ಲಿರಬಹುದೆಂದು ಊಹಿಸಲು ಅವಕಾಶವಿದೆ. ಈ ಬಾಹ್ಯ ಪ್ರಮಾಣ
ೊತೆಗೆ, ಈಗ ಕೆಲವು ಆಂತರಿಕ ಪ್ರಮಾಣಗಳನ್ನು ಚರ್ಚಿಸುತ್ತ ರಾಯರ ಸಂಭಾ
ಲವನ್ನು ನಿರ್ಧರಿಸಬಹುದು.

ಮಹಿಪತಿರಾಯರ ಮಗ ಕೃಷ್ಣರಾಯರು ರಚಿಸಿದ 'ಆನಂದ ಲಹರಿ' ಖ
ವ್ಯದ ಕೊನೆಯ ಪದ್ಯ ಹೀಗಿದೆ.

'ಸುಭಾನು ಸಂವತ್ಸರದ ಆ ಭಾದ್ರಪದ ಮಾಸ।
ಶಭವಾರ ದಶಮಿ ಗುರುವಾರದಿನ ದೇವ।
ಪ್ರಭುವಿನ ದಯದಿಂದ ಸಂಪೂರ್ಣ ।।೧೧೫।।

ಇಲ್ಲಿ ಹೇಳಿದ ಸುಭಾನು ಸಂವತ್ಸರದ ಭಾದ್ರಪದ ಮಾಸದ ಶುದ್ಧ ದ

ಗುರುವಾರವು ಕ್ರಿ.ಶ. ೧೭೦೫ರ ಸಪ್ಟಂಬರ ಏಳನೆಯ ದಿನಾಂಕಕ್ಕೆ ಸರಿ
ಹೊಂದುತ್ತದೆ.//೧೭// ಆದ್ದರಿಂದ ಕ್ರಿ.ಶ. ೧೭೦೫ ರಲ್ಲಿ ಕೃಷ್ಣರಾಯರು ೬
ಲಹರಿಯನ್ನು ರಚಿಸಿದರು ಎಂಬುದು ಖಚಿತವಾಗುತ್ತದೆ. ಇದಕ್ಕೆ ಪೂರಕವಾಗಿ ದ
ಹಸ್ತ ಪ್ರತಿಗಳಲ್ಲಿಯ 'ಆ' ಪ್ರತಿಯಲ್ಲಿ ಕೃಷ್ಣರಾಯರ ಮಗ ಯತಿರಾಯರು
ತಂದೆ ಬರೆದ ಭಾವಾರ್ಥ ರಾಮಾಯಣ ಕಾವ್ಯವನ್ನು ನಕಲು ಮಾಡಿ
ಹೇಳುತ್ತಾರೆ. ನಕಲು ಮಾಡಿದ ಕಾಲವನ್ನು ಊಹಿಸಲು ಅದೇ ಹಸ್ತಪ್ರ
೮೦ನೆಯ ಪುಟದಲ್ಲಿ ಅವರ ಮನೆಯಲ್ಲಿ ಹುಟ್ಟಿದ ಒಂದು ಮಗುವಿನ ಜನನ
ಸಹಾಯವಾಗುತ್ತದೆ. ಅದು 'ಶಕೆ ೧೬೫೪ ಪರಿಧಾವಿ ಸಂವತ್ಸರ ಆಷಾಢ
ದಶಮಿ ಬುಧವಾರ ಸ್ವಾತಿ ನಕ್ಷತ್ರ ದ್ವಿತೀಯ ಚರಣ ಘಟಿಕಾ.....' ಇತ್ಯಾ
ಉಲ್ಲೇಖವಿದೆ. ಇದು ಕ್ರಿ.ಶ. ದಿನಾಂಕ ೨೧-೬-೧೭೩೨ ಕ್ಕೆ ಸರಿ
ಹೊಂದುತ್ತದೆ. ಆದ್ದರಿಂದ ಹಸ್ತಪ್ರತಿಯು ಕ್ರಿ.ಶ. ೧೭೩೨ರ ಯತಿರಾಯರ ಹಸ
ಎಂಬುದು ಖಚಿತವಾಗುತ್ತದೆ. ಅಂದರೆ ಕ್ರಿ.ಶ. ೧೭೦೫ ರಲ್ಲಿ ಕೃಷ್ಣರಾಯರು,
ಮಗ ಯತಿರಾಯ ಕ್ರಿ.ಶ. ೧೭೩೨ರಲ್ಲಿ ಇದ್ದರು.

ಈಗ 'ನೆನೆದು ನಮಿಸುವೇನು ವಾರಂ ವಾರ' ಎಂಬ ಕೀರ್ತನೆಯನ್ನು ನೋ
ಇದೊಂದು ಸ್ತುತಿ ಕೀರ್ತನೆ. ಇದು ಮಹಿಪತಿರಾಯರ ಮಗ ಕೃಷ್ಣರಾಯರು ರ
ಕೀರ್ತನೆ ಎಂದು ಈವರೆಗೆ ಗೃಹಿತವಾಗಿದೆ. ಆದರೆ ಕೀರ್ತನೆಯ ಕೊನೆಯಲ್ಲಿ ಬ
ಅಂಕಿತ 'ಮಹಿಪತಿಗುರು' ಎಂದಾಗಿದ್ದು ಇದು ಮಹಿಪತಿರಾಯರ ಅಂಕಿತ ಎನ್ನು
ಗ್ರಾಹ್ಯವಾಗಿದೆ. ಆದರೆ ಈ ಕೀರ್ತನೆಯ ಅನೇಕ ಮುದ್ರಿತ ಹಾಗು ಹಸ್ತಪ್ರ
ಪಾಠದಲ್ಲಿ ಪ್ರಕ್ಷಿಪ್ತ ಸಾಲುಗಳು ಸೇರಿಕೊಂಡು ಕೃತಿಕಾರನ ಕುರಿತು ಅನುಮಾನಕ್ಕೆ
ಮಾಡಿ ಕೊಟ್ಟಿದೆ. ಈ ಕುರಿತು 'ಅಂಕಿತ – ಕೃತಿ ಸಂಖ್ಯೆ' ಅಧ್ಯಾಯದಲ್ಲಿ ಸವಿವರ
ಚರ್ಚಿಸಲಾಗಿದೆ. ಪ್ರಸ್ತುತ ಕೀರ್ತನೆಯ ಮೂಲ ಪಾಠದ ಎರಡನೆಯ ನುಡಿ
ಹೀಗಿದೆ.

'ಇತ್ತ ವಿಧ್ಯಾದೀಶ ಈ ವೇದ ನಿಧಿ ಘೋಷ।
ಸತ್ಯವ್ರತರ ನಾಮ ಸತ್ಯನಿಧಿಯ ನೇಮ।
ಸತ್ಯ ನಾಥಾಖ್ಯಾತ ಸತ್ಯಾಭಿನವ ತೀರ್ಥ।
ಮತ್ತಿಳೆಯೊಳಗಿರ್ಪ ಮನಕೆ ಸೂಚಿಸಿ ಬಪ್ಪ।
ಕೃತ್ಯಮ್ ಸುಜ್ಞಾನ ಕೃಷ್ಣ ದ್ವೈಪಾಯನ।
ಇತ್ಯಧಿಕ ಸರ್ವರ ಜನದಲಿ -----।
ಉತ್ತುಮದಲಿರುವರಾ ---- ವಾರಂ --- ವಾರಂ' ।।೨।।

ಇಲ್ಲಿ ಹಾಗೂ ಮೊದಲನೆಯ ನುಡಿಯಲ್ಲಿ ಬರುವ ಹೆಸರುಗಳು ವ
ಪರಂಪರೆಯಲ್ಲಿ ಬಂದ ಉತ್ತರಾದಿ ಮಠದ ಪೀಠವನ್ನೇರಿದ ಎಲ್ಲ ಸ್ವಾಮಿಗ

ುವಾಗಿ ನಮಿಸಿದ್ದಾರೆ. ಕೊನೆಯಲ್ಲಿ ಬರುವ ಶ್ರೀ ಸತ್ಯಾಭಿನವ ತೀರ್ಥರು
ತ್ತರಾದಿಮಠದ ಸಂಸ್ಥಾನವನ್ನು ಕ್ರಿ.ಶ. ೧೬೭೩ ರಿಂದ ೧೭೦೬ ರವರೆಗೆ
ದರೆಂದು ಈ ಹಿಂದೆ ನೋಡಿದ್ದೇವೆ. ಅನಂತರ ಉಲ್ಲೇಖಿತ ಕೃಷ್ಣದ್ವೈಪಾಯನರು
ುಕಾಲೀನ ಬಿಡಿ ಸನ್ಯಾಸಿಗಳು. ಮಹಿಪತಿರಾಯರು ಶ್ರೀ ಸತ್ಯಾಭಿನವ ತೀರ್ಥರನ್ನು
ಲ್ಲೇಖಿಸಿದ್ದರಿಂದ ಅವರು ಕ್ರಿ.ಶ. ೧೬೭೩ ಹಾಗೂ ೧೭೦೬ ರ ಮಧ್ಯೆ
ುವಿಸಿದ್ದರೆಂದೂ ಮತ್ತು ಕ್ರಿ.ಶ. ೧೭೦೬ ರ ಮೊದಲು ಕಾಲವಾಗಿರಬೇಕೆಂದೂ
ುಹಿಸಬಹುದು. ಯಾಕೆಂದರೆ ಕ್ರಿ.ಶ. ೧೭೦೬ ರನಂತರ ಜೀವಿಸಿದ್ದರೆ ಅವರೆಗೆ
ಲ್ಲೇಖಿಸಿದ ಉತ್ತರಾದಿ ಮಠದ ಎಲ್ಲ ಸ್ವಾಮಿಗಳ ಜೊತೆಗೆ ಶ್ರೀ ಸತ್ಯಾಭಿನವ
ರ್ಥರ ಅನಂತರ ಪೀಠಕ್ಕೆ ಬಂದ ಶ್ರೀ ಸತ್ಯಪೂರ್ಣ ತೀರ್ಥರನ್ನೂ ಸ್ತುತಿಸುತ್ತಿದ್ದರು.

ಮಹಿಪತಿರಾಯರಿಗೆ ಇಬ್ಬರು ಗಂಡುಮಕ್ಕಳು ಅವಳಿ ಜವಳಿ ಎಂದು
ಬಲಾಗಿದೆ. ದೇವರಾಯ ಹಾಗೂ ಕೃಷ್ಣರಾಯ ಎಂದು ಅವರ ಹೆಸರುಗಳು.
ವರಾಯನು ಕ್ಷಾತ್ರ ತೇಜದಿಂದ ದೇಸಗತಿಯನ್ನು ಸಂಪಾದಿಸಿ ಜಾಲವಾದಿಯಲ್ಲಿ
ಸಿದನು. ಕೃಷ್ಣರಾಯರು ಹರಿದಾಸ ಪರಂಪರೆಯನ್ನು ಮುಂದುವರಿಸಿ
ಖಂಡಕಿಯಲ್ಲಿಯೇ ನೆಲೆಸಿದರು. ಅವರಿಗೆ ಏಳು ಜನ ಗಂಡು ಮಕ್ಕಳು.
ವರುಗಳಲ್ಲಿ ಮೊದಲನೆಯವ ರಾಮಯ್ಯ, ಎರಡನೆಯವ ಯಾದಪ್ಪ
ೂರನೆಯವನ ಹೆಸರು ಗುರು ಅಥವಾ ಗುರುರಾಯ. ಈ ಮೂರನೆಯ ಮಗ
ುಟ್ಟುವ ಹೊತ್ತಿಗೆ ಮಹಿಪತಿರಾಯರು ಕಾಲವಾಗಿರಬೇಕು. ಅವರ ನೆನಪಿನಲ್ಲಿಯೇ
ಮಗುವಿಗೆ 'ಗುರು' ಎಂದು ನಾಮಕರಣ ಮಾಡಿದ್ದಾರೆ. ಮಹಿಪತಿ ಎಂಬ ಹೆಸರನ್ನು
ು ತಲೆಮಾರಿನವರೆಗೆ ಅವರ ಮನೆತನದಲ್ಲಿ ಇಟ್ಟಿಲ್ಲ. ಅದಕ್ಕೆ ಬದಲಾಗಿ ಹಿರಿಯರ
ನಪಿಗೆ 'ಗುರು' ಎಂದು ಕರೆದಿದ್ದಾರೆ.

ಕೃಷ್ಣರಾಯರ ನಾಲ್ಕನೆಯ ಮಗ ಯತಿರಾಯ ಐದು; ಆರನೆಯವರು ಶ್ರೀಪತಿ
ಾಗೂ ಗಿರಿಯಪ್ಪ ಕೊನೆಯವನ ಹೆಸರು ದೇವರಾಯ. ಈ ಹೊತ್ತಿಗೆ ಕೃಷ್ಣರಾಯರ
ಹೋದರ ದೇವರಾಯನ ಕಾಲವಾಗಿರಬೇಕು. ಅವನ ನೆನಪಿನಲ್ಲಿ ಕೊನೆಯ ಮಗ
ೇವರಾಯನಾಗಿದ್ದಾನೆ. ಅದರಂತೆ ಕೃಷ್ಣರಾಯರ ಜೇಷ್ಠ ಪುತ್ರ ರಾಮನ ಮಗ
ಷ್ಣನಾಗಿದ್ದಾನೆ. ಈ ಹೊತ್ತಿಗೆ ಕೃಷ್ಣರಾಯರೂ ಕಾಲವಾಗಿರಬೇಕು. ಯತಿರಾಯರ
ಬ್ಬನೇ ಮಗ ರಾಮನೆಂದು ಇದೆ. ಇದು ಅಣ್ಣನ ನೆನಪಿನಲ್ಲಿ ಇಟ್ಟ ಹೆಸರು. ದೊರೆತ
ಸ್ತಪ್ರತಿಯಲ್ಲಿ ಯತಿರಾಯರ ಕೈಬರಹದ ಜನ್ಮ ವಿವರ ಈ ಮಗುವಿನದಾಗಿದ್ದರ
ದು ೨೧-೬-೧೭೩೨ ಎಂದಾಗುತ್ತದೆ. ಆ ಹೊತ್ತಿಗೆ ಕೃಷ್ಣರಾಯರ ಹಿರಿಯ ಮಗ
ಮಚಂದ್ರ ತೀರಿಕೊಂಡಿದ್ದರು.

ಕಾಖಂಡಕಿಯ ಹರಿದಾಸರ ಮನೆತನದಲ್ಲಿ ಭಾಸ್ಕರ, ಮಹಿಪತಿ, ಕೃಷ್ಣ,

ರಾಮ ಹಾಗೂ ಯತಿ ಈ ಐವರು ಪ್ರಾತ: ಸ್ಮರಣೀಯರು. ಅವರುಗಳಲ್ಲಿಯ ಭಾಸ್ಕರ
ಎಂಬ ಹೆಸರನ್ನು ಯಾರಿಗೂ ಕರೆದಿಲ್ಲ. ಉಳಿದ ನಾಲ್ವರಲ್ಲಿ, ಕೃಷ್ಣರಾಯರ ಏಳು
ಮಕ್ಕಳ ಏಳು ತಲೆಮಾರುಗಳಲ್ಲಿ (ಈಗ ನಡೆದದ್ದು ೮ನೆಯದು) ಬರುವ ೧೧೯
ಗಂಡುಮಕ್ಕಳ ಹೆಸರುಗಳಲ್ಲಿ ೨೫ ಸಲ ಗುರು, ೨೧ ಸಲ ಕೃಷ್ಣ, ೧೯ ಸಲ ರಾಮ
ಎಂಬ ಹೆಸರುಗಳನ್ನು ಇಟ್ಟಿದ್ದಾರೆ. ಅನಂತರ ಪ್ರಮುಖವಾಗಿ ಕೇಳಿಬರುವ ಹೆಸರು
ಅವರ ಕುಲದೈವತವಾದ 'ವೆಂಕಟೇಶ' ಎಂಬ ಹೆಸರು. ಅದನ್ನು ೧೬ ಸಲ ಇಟ್ಟಿದ್ದಾರೆ.
ಇನ್ನುಳಿದವುಗಳಲ್ಲಿ ೧೩ ಸಲ ಅಣ್ಣಪ್ಪಯ್ಯ ೮ ಸಲ ದೇವಪ್ಪಯ್ಯ ಉಳಿದ ಕೇವಲ
೭ ಹೆಸರುಗಳು ಒಂದೊಂದು ಅಥವಾ ಎರಡು ಸಲ ಬಂದಿವೆ. ಕೃಷ್ಣರಾಯರ
ನಾಲ್ಕನೆಯ ಮಗ ಯತಿರಾಯರ ಮನೆತನದಲ್ಲಿ ಇಂದು ಜೀವಂತ ಇದ್ದ ಹಿರಿಯರಾದ
ರಪ್ಪಯ್ಯ ಹುಟ್ಟಿದ್ದು ೧೯೧೬ ರಲ್ಲಿ ಅವರು ನೇರವಾದ ಏಳನೆಯ
ಲೆಮಾರಿನವರು.

ಹೀಗೆ ಈವರೆಗೆ ಚರ್ಚಿಸಿದ ಆಧಾರಗಳಿಂದ ಮಹಿಪತಿರಾಯರ ಸಂಭಾವ್ಯ
ಾಲವನ್ನು ಬೇರೆ ಪ್ರಮಾಣಗಳು ದೊರೆಯುವವರೆಗೆ ಈ ರೀತಿಯಾಗಿ
ರ್ದೇಶಿಸಬಹುದು.

| | | |
|---|---|---|
| ಮಹಿಪತಿರಾಯರ ಜನನ | ಕ್ರಿ.ಶ.ಸು | ೧೬೪೦ |
| ಖವಾಸಖಾನನ ಹತ್ತಿರ ಕರ್ಣಿಕ | " | ೧೬೫೮-೫೯ |
| ಬಾದಶಹನ ಭೆಟ್ಟಿ ಪ್ರಿತ್ಯಾದರ | " | ೧೬೬೦ |
| ಭಾಸ್ಕರ ಸ್ವಾಮಿಗಳ ಅನುಗ್ರಹ | " | ೧೬೭೦ |
| ಅವಳಿ ಮಕ್ಕಳ ಜನನ | " | ೧೬೭೨-೭೩ |
| ಶಾಹಪುರ (ಕಲಬುರ್ಗಿ) ವಾಸ | " | ೧೬೮೬-೮೯ |
| ಕಾಖಂಡಕಿಗೆ ಆಗಮನ | " | ೧೬೯೦ |
| ಕೃಷ್ಣರಾಯರಿಂದ ಆನಂದಲಹರಿ ರಚನೆ | " | ೯-೯-೧೭೦೩ |
| ಮಹಿಪತಿರಾಯರ ಮರಣ | " | ೧೭೦೫ |

ೀಗೆ ಮಹಿಪತಿರಾಯರ ಕಾಲವನ್ನು ಕ್ರಿ.ಶ. ಸು ೧೬೪೦ ರಿಂದ ೧೭೦೫ ರವರೆಗೆ ಎಂ
ಶಿಸಬಹುದು. ಅಂದರೆ ಅವರು ಸುಮಾರು ೬೫ ವರುಷ ಬದುಕಿರಬಹುದು. ಅದರ
ಇಬ್ಬರು ಮಕ್ಕಳಲ್ಲಿ ದೇವರಾಯ ಕ್ರಿ.ಶ. ಸು ೧೬೭೩ ರಿಂದ ೧೭೧೪ ವರೆಗೆ ಸುಮಾ
ರುಷ ಬದುಕಿದ್ದರೆ ಕೃಷ್ಣರಾಯರು ಕ್ರಿ.ಶ. ಸು ೧೭೨೯ ರವರೆಗೆ ಸುಮಾರು ೫೪ ವರು
ರುವ ಸಾಧ್ಯತೆ ಇದೆ. ಅದರಂತೆ ಮತ್ತೆ ಕೃಷ್ಣರಾಯರ ಮಕ್ಕಳಲ್ಲಿ ಹಿರಿಯ
ತಂದ್ರ, ಅಲ್ಪಾಯುವಾಗಿ ೪೦ ವರುಷ (೧೬೯೨-೧೭೩೨) ಯತಿರಾಯ
ರ್ಯಯುಗಳಾಗಿ ಸುಮಾರು ೬೦ ವರುಷ (೧೭೦೮-೧೭೬೮) ಬದುಕಿದ್ದರೆಂ
ಹುದು.

ೀವನ ಚರಿತ್ರೆ

ಗಾವಿ ಜಿಲ್ಲೆಯ ಅಥಣಿ ತಾಲೂಕಿನ ಐಗಳಿ ಎಂಬ ಗ್ರಾಮದಲ್ಲಿ ೧೭ ನೇ
ದ ಮಧ್ಯದಲ್ಲಿ ಮೌನಭಾರ್ಗವ ಗೋತ್ರದ ಕೋನೇರಿರಾಯನೆಂಬ ವೈಷ
ಇನಿದ್ದನು. ಸದಾಚಾರ ಸಂಪನ್ನನಾದ ವಿಪ್ರನು ಐಗಳಿಯ ವೆಂಕಟೇಶ ದೇವರ
ತ್ತ ಕರ್ಣಿಕ ವೃತ್ತಿಯೊಂದಿಗೆ ಸುಖವಾಗಿ ಕಾಲಕಳೆಯುತ್ತಿದ್ದನು.//೧೮// ಅವ
ನೂ, ಷಟ್‌ಶಾಸ್ತ್ರ ಪಂಡಿತನೂ ಆಗಿದ್ದನು. ಸಾಹಿತ್ಯ ಸಂಗೀತಗಳಲ್ಲಿ ತುಂಬ ಆ
ಕನ್ನಡ -ಮರಾಠಿ ಭಾಷೆಗಳಲ್ಲಿ ಕೃತಿಗಳನ್ನು ರಚಿಸುತ್ತಿದ್ದನೆ
ತ್ತದೆ.//೧೯// ಅವನಿಗೆ ಇಬ್ಬರು ಗಂಡು ಮಕ್ಕಳು. ಹಿರಿಯವ
ಶನೆಂದೂ, ಎರಡನೆಯ ಮಗನಿಗೆ ಗುರುರಾಯನೆಂದೂ ಹೆಸರನ್ನಿಟ್ಟಿದ್ದ
ಯ ಹುಟ್ಟಿದ್ದು ಕ್ರಿ.ಶ. ಸು. ೧೬೪೦ರಲ್ಲಿ. ಮಕ್ಕಳ ಆಟ-ಪಾಟಗಳಲ್ಲಿ ವೆಂಕ
ಅರ್ಚನೆಯೊಂದಿಗೆ ಕೋನೇರಿರಾಯ ಸಂಭ್ರಮದಿಂದ ಕಾಲ ಕಳೆಯುತ್ತಿದ್ದರೂ, ೧
ಇಬ್ಬರು ಮಕ್ಕಳ ಉದರ ನಿರ್ವಹಣೆಗೆ ತೊಂದರೆಯಾಗುತ್ತಿತ್ತು. ಮ
ತ್ತಿದ್ದಂತೆ ಅವರುಗಳ ಉಪನಯನ, ವಿದ್ಯಾಭ್ಯಾಸದ ಚಿಂತೆಯೂ ಕಾಡುತ್ತಿ
ಐಗಳಿಯಲ್ಲಿ ಸಾಧ್ಯವಾಗಲಾರದೆಂದು ಅನಿಸಿತು. ಅಂತೆಯೇ ಊರು ಬಿಡುವುದೆ
ಸಿದನು. ಹತ್ತಿರದಲ್ಲಿಯ ವಿಜಾಪುರ ನಗರವು ಆದಿಲಶಾಹಿ ಅರಸರ ರಾಜಧ
ಲೀನ ವಿಶ್ವದ ದೊಡ್ಡ ನಗರ, ವಿಜಯಪುರವು ವಿದ್ಯಾಪುರವೆಂದೂ ಹೆಸರಾಗಿತ್ತು. ೯
ನರದಾಗಿದ್ದರೂ ಹಿಂದು -ಮುಸ್ಲಿಮ ಉಭಯತರಲ್ಲಿ ದ್ವೇಷದ ವಾತಾವರಣ ೯
ರಲಿಲ್ಲ. ಅನೇಕ ಹಿಂದುಗಳು ಬಾದಶಹನ ಆಸ್ಥಾನದಲ್ಲಿ ಹೆಸರಾಂತ ಯೋಧ್ದ
ರ - ಸೇನಾಪತಿಗಳೂ ಆಗಿದ್ದರು. ಅಲ್ಲದೆ ಮುಸ್ಲಿಮರು ಕೂಡ ಬ್ರಾಹ್ಮಣ
ದಿಂದ ಕಾಣುತ್ತಿದ್ದರು. ಆದ್ದರಿಂದ ಕೋನೇರಿರಾಯನು ವಿಜಾಪುರಕ್ಕೆ ಹೆ
ವುದೆಂದು ನಿರ್ಧರಿಸಿದ. ಆಗ ವಿಜಾಪುರದಲ್ಲಿ ಮಹ್ಮದ ಆದಿಲ
೨೬-೧೬೫೬) ರಾಜ್ಯವಾಳುತ್ತಿದ್ದನು. ಕೋನೇರಿರಾಯನು ತನ್ನ ಕರ್ಣಿಕ ವೃತ್ತಿ
ು ವೆಂಕಟೇಶ ದೇವರ ಅರ್ಚಕ ವೃತ್ತಿಯನ್ನು ಸಂಬಂಧಿಕರೊಬ್ಬರಿಗೆ ಕೆ
ಟುಂಬ ವಿಜಾಪುರಕ್ಕೆ ಬಂದು ನೆಲೆಸಿದನು.

ಕೋನೇರಿರಾಯ ವಿಜಾಪುರಕ್ಕೆ ಬಂದ ದಿನಗಳಲ್ಲಿ ಬಾದಶಹನ ಆಸ್ಥಾ
ಾರಿಪಂತ, ಶಹಾಜಿ ಭೋಸಲೆ ಅವರಂಥ ಹಿಂದುಗಳು ಪ್ರಭಾವಯುತರಾಗಿ
ಂದ ಬ್ರಾಹ್ಮಣ ವಿದ್ವಾಂಸರಿಗೆ ಆದರವಿರುವುದು ಸಹಜವಾಗಿತ್ತು. ಸದ
ಣಿಯಾದ ಕೋನೇರಿರಾಯನು ವಿಜಾಪುರಕ್ಕೆ ಬಂದ ಆರು ತಿಂಗಳುಗಳಲ್ಲಿ ತನ್ನ ಸ್ನೆ
ಯಿಂದ ಸುಮಾರು ಜನರೊಡನೆ ಗೆಳತನವನ್ನು ಬೆಳೆಸಿಕೊಂಡು ಕುಟುಂಬದ

ೀಷಣೆಯ ಭಾರವನ್ನು ಹಗುರು ಮಾಡಿಕೊಂಡಿದ್ದನು.//೨೦// ಹಲವು ಸಿರಿ
ಕಾರವೂ ದೊರೆಯಿತು. ಈ ದಿನಗಳಲ್ಲಿಯೇ ಬೆಳೆದು ನಿಂತ ಮಕ್ಕ
ಶನಯನವನ್ನು ಸ್ನೇಹಿತರ - ಉದಾರಿಗಳ ನೆರವಿನಿಂದ ಮಾಡಿದನು.//೨೧//

ಮಕ್ಕಳಿಬ್ಬರೂ ತಂದೆಯ ಕಣ್ಣರಿಕೆಯಲ್ಲಿ ಬೆಳೆದು ವಿದ್ಯಾಭ್ಯಾಸವನ್ನು ಪಡೆದರು. ಓ
ೀ ವೆಂಕಟೇಶನು ಕುಲದ ಕರ್ಣಿಕ ವೃತ್ತಿಯನ್ನು ಹಾಗೂ ವೆಂಕಟೇಶದೇವರ ೀ
ಯನ್ನು ಮುಂದುವರಿಸಿಕೊಂಡು ಹೋಗಲು ಐಗಳಿಗೆ ಬಂದು ನೆಲೆಸಿದನು.//.
ಮ ಮಗ ಗುರುರಾಯ ತಂದೆ ತಾಯಿಗಳೊಂದಿಗೆ ವಿಜಾಪುರದಲ್ಲಿಯೇ ಉಳಿ
ಮಾಯಣ ಮಹಾಭಾರತ, ಭಾಗವತ ಗ್ರಂಥಗಳ ಅಭ್ಯಾಸದ ಜೊತೆಗೆ ಸಾಹಿತ್ಯದಲ್ಲಿ
ರಾಯನಿಗೆ ಆಸಕ್ತಿ ಇದ್ದಿತು. ಮಧುರ ಕಂಠ, ನಿರರ್ಗಳ ವಾಕ್ ಸರಣಿ, ಗುರು
ಳುತ್ತಲಿದ್ದರೆ ಕೇಳುಗರು ಮಂತ್ರಮುಗ್ಧರಾಗಿ ಕುಳಿತುಕೊಳ್ಳುತ್ತಿದ್ದರು. ತಂದೆಯ ಸ್ಥಾ
ೀಗ ಪ್ರವಚನಗಳನ್ನು ಕೊಡುತ್ತಿದ್ದ, ಹರಿಕಥೆ ಆತನ ಮೆಚ್ಚಿಗೆಯ ವಿಷಯ, ಸು
ಕಥೆಯಿಂದ ಆತ ಬಹುಬೇಗ ಜನಪ್ರಿಯನಾದನು.

ಕೋನೇರಿರಾಯರ ಪರಿಚಿತ ಹಿಂದು ಸರದಾರನೊಬ್ಬನ ಮುಖಾಂತರ ಗುರುರಾ
ರಂಭದಲ್ಲಿ 'ಖವಾಸಖಾನ' ಎಂಬ ಹಬಶೀ ಸರದಾರನ ಹತ್ತಿರ ಕರ್ಣಿಕ ವೃತ್ತಿ
ಂಡನು.//೨೩// ಅಂದಿನ ದಿನಗಳಲ್ಲಿ ಈ ಖವಾಸಖಾನನು ದಖಣೀ ಸರ
ಖ್ಯಸ್ಥನಾಗಿದ್ದನಲ್ಲದೆ ರಾಜ್ಯದಲ್ಲಿ ತುಂಬ ಪ್ರಭಾವಯುತನಾದ ವ್ಯಕ್ತಿಯಾಗಿದ್ದ. ೀ
ಮ್ಮದ ಆದಿಲಶಹನ ಅಂತ್ಯವಾಗಿ ಆವನ ಮಗ ಎರಡನೆಯ ಅಲಿ ಆದಿಲ
ಜ್ಯವಾಳುತ್ತಿದ್ದನು.

ಯಜಮಾನ ಖವಾಸಖಾನನಲ್ಲಿ ಇಂಥದೇ ಕೆಲಸವನ್ನು ಮಾಡಬೇಕೆಂಬ ಅಹವ
ರಾಯನಲ್ಲಿರಲಿಲ್ಲ. ಇದರಿಂದಾಗಿ ಬಹುಬೇಗ ಆತ ಖವಾಸಖಾನನ ಪ್ರಿ
ನಾದನು. ಕೆಲಸದಲ್ಲಿಯ ಆವನ ಚಾಕಚಕ್ಯತೆ, ಜಾಣತನ ಖವಾಸಖಾನನಿಗೆ
ಮವಾಯಿತು. ಕೆಲವೇ ದಿನಗಳಲ್ಲಿ ಆತ ಖವಾಸಖಾನನ ಆಪ್ತ ಸಹಾಯ
ನಾದನು.

ತನ್ನ ಕೆಲಸದಲ್ಲಿಯ ತನ್ಮಯತೆಯೊಂದಿಗೆ ಗುರುರಾಯ, ಮಾತಾಪಿತೃಗಳ ಸೇವೆ
ಣಿಸಲಿಲ್ಲ. ವೃದ್ಧಾಪ್ಯದಿಂದ ತಂದೆ -ತಾಯಿಗಳು ಮನೆಯಲ್ಲಿಯೇ ಇದ್ದರೂ
ಯ ಯಜಮಾನ 'ಕರ್ತಾ' ಎಂಬ ಆಹಂಕಾರವು ಬಂದಿರಲಿಲ್ಲ. ಏಕ ನಿಷ್ಠೆಯಿಂದ
ಯನ್ನು ಮಾಡುತ್ತಿದ್ದನು. //೨೪//

ಈ ಮಧ್ಯ ವಯಸ್ಸಿಗೆ ಅನುಗುಣವಾಗಿ ತಂದೆ ತಾಯಿಗಳು ಮಕ್ಕಳಿಬ್ಬರ ವಿವಾಹವ

ಷ್ಠರು. ಹಿರಿಯವನ ಹೆಂಡತಿ 'ತುಕ್ಕವ್ವ' ಕಿರಿಯವನ ಹೆಂಡತಿ 'ತಿಮ್ಮವ್ವ'. ಗಂಡನೊಂದಿಗೆ ಐಗಳಿಯಲ್ಲಿ ಇರುತ್ತಿದ್ದರೆ ತಿಮ್ಮವ್ವ ವಿಜಾಪುರದಲ್ಲಿ ದ್ದಳು.//೨೫//

ುರುರಾಯರಿಗೆ ಚಿಕ್ಕಂದಿನಿಂದಲೂ ಆಧ್ಯಾತ್ಮದ ಕಡೆಗೆ ಒಲವು ಹೆಚ್ಚು. ಮಾಧ್ವ ಾಯದ ಮನೆಯಾದ್ದರಿಂದ ಮನೆಯಲ್ಲಿ ನಿತ್ಯ -ನೇಮಗಳನ್ನು ಕೊಂಡು, ಪಾರಾಯಣ, ಜಪ, ತಪಗಳನ್ನು ತಪ್ಪದೆ ಮಾಡುತ್ತಿದ್ದರು. ಅನಂತರ ಪೂಜೆ ನಿಗದಿತ ಅವಧಿಯಲ್ಲಿ ಈ ಕಾರ್ಯಗಳನ್ನು ಪೂರೈಸಿಕೊಂಡು ನೌಕರಿಗೆ ಾದ ವೇಳೆಗೆ ಹೋಗುತ್ತಿದ್ದರು. ಮಧ್ಯಾಹ್ನ ಊಟಕ್ಕೆ ಬಂದಾಗ ಪ್ರತಿನಿತ್ಯ ್ಣರಿಗೆ ಅನ್ನಸಂತರ್ಪಣೆಯಾಗಬೇಕು. ಸಾಯಂಕಾಲ ಹರಿಕೀರ್ತನೆ ಹಾಗು ಮುನಿಕೃತ ಸರ್ವಮೂಲ ಗ್ರಂಥಗಳ ಪಠಣ.//೨೬// ಇದು ಅವರ ದಿನಚರಿ ಗಿ ಅವರ ದಿನನಿತ್ಯದ ಬದುಕಿನಲ್ಲಿ ಪಾರಮಾರ್ಥದ ಒಲವು ಹೆಚ್ಚಾದುದು ವಾಗಿತ್ತು. ಅಂದಿನಿಂದಲೇ ಒಂದು ತರದ ವೈರಾಗ್ಯ ಅವರ ಬದುಕಿನಲ್ಲಿ ್ಟಿತು. 'ಕರ್ಮಣ್ಯೇ -ವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬ ೀಕ್ತಿಯಂತೆ, ಮಾಡುವ ಕೆಲಸವನ್ನು ಯಾವ ಫಲಾಪೇಕ್ಷೆಯಿಲ್ಲದೆ ುತ್ತಿದ್ದರು. ಅದು ಮಾತಾ ಪಿತೃಗಳ ಸೇವೆ ಇರಲಿ, ಹೊರಗೆ ಖಿವಾಸಖಾನನ ದ ಕರ್ಣಿಕ ವೃತ್ತಿಯಿರಲಿ, ಪೂರ್ಣ ಮನಸ್ಸಿನಿಂದ ಮಾಡುತ್ತಿದ್ದುದರಿಂದ ು ಒಳ-ಹೊರಗೆ ಅವರ ಗೌರವ ಇಮ್ಮಡಿಯಾಯಿತು.

ಮನೆಯಲ್ಲಿ ತಿಮ್ಮವ್ವನಿಗೆ ಯಾವ ಕೊರತೆ ಇರದಿದ್ದರೂ ಮಕ್ಕಳಾಗದ ಚಿಂತೆ ುತ್ತಿತ್ತು. ಅತ್ತೆ ಮಾವಂದಿರು ಇರುವವರೆಗೆ, ಅವರ ಸೇವೆಯಲ್ಲಿ ಹಾಗೂ ಗೆಲಸಗಳಲ್ಲಿ ಹೊತ್ತು ಕಳೆದು ಹೋಗುತ್ತಿತ್ತು. ಹೀಗಾಗಿ ಮಕ್ಕಳಿಲ್ಲದ ಕೊರತೆ ್ರಗಿ ಅನಿಸುತ್ತಿರಲಿಲ್ಲ. ಸ್ತ್ರೀಸಹಜವಾದ ಹಂಬಲದಿಂದ, ಅತ್ತೆ ಮಾವಂದಿರು ಮ್ಮಕ್ಕಳ ನೆನಪು ಮಾಡಿದಾಗ ಆಗೀಗ ಆಡುವ ಕಂದನ ಚಿತ್ರವು ಕಣ್ಣ ಮುಂದೆ ು ಹೋಗುತ್ತಿತ್ತು. ಆದರೆ ಅತ್ತೆ-ಮಾವಂದಿರು ಇಹಲೋಕವನ್ನು ತ್ಯಜಿಸಿದ ಲೆ, ತನ್ನ ವಯಸ್ಸು ಕಳೆದಂತೆಲ್ಲ ಮಕ್ಕಳ ಚಿಂತೆ ಅಧಿಕವಾಯಿತು. ಮಗುವಿನ ಚಿತ್ರ ಮುಂದೆ ಸ್ಥಿರವಾಗಿ ಉಳಿಯಿತು. ಗಂಡನಿಗೋ ಬಿಡುವಿಲ್ಲದ ಕೆಲಸ. ಬೆಳಗಿನಿಂದ ುಂಕಾಲದ ವರೆಗೆ ಧ್ಯಾನ-ಜಪ-ತಪ ಅಭ್ಯಾಸ- ರಾಜಕಾರಣ - ಸಂತರ್ಪಣೆ- ಕೀರ್ತನೆ -ಪ್ರವಚನ ಒಂದೆ ಎರಡೇ, ಏಕಾಂತದಲ್ಲಿ ಗಂಡ ರೆವುದೇ ಅಪರೂಪ. ಆಳುವ ಕಂದನ ಕೇಕೆಗಾಗಿ ಮನದಲ್ಲಿಯೇ ಬಲಿಸತೊಡಗಿದಳು. ಗಂಡನ ಪೂಜೆ -ಪುನಸ್ಕಾರಗಳಲ್ಲಿ ಹರಕೆ ಹೊತ್ತದ್ದಾಯಿತು, ನ ಹಿಂದೆ ಕಂಡ ದೇವರ ಕೈ ಮುಗಿದದ್ದಾಯಿತು. ಹಿಂಡು ದೇವರ ಮುಂದೆ ದಿಂಡು ುಳಿದ್ದೂ ಆಯಿತು. ಅವಳ ಈ ಉಪಾಸನೆಯಿಂದ ಸಂತಾನ ಸೌಭಾಗ್ಯ ಮಾತ್ರ

ಸಿಗಲಿಲ್ಲ. ಆದರೆ ಅವಳ ಉಪಾಸನೆಯ ಫಲವಾಗಿ ಎಂಬಂತೆ ಗಂಡಃ
-ಮರ್ಯಾದೆ ದಿನದಿಂದ ದಿನಕ್ಕೆ ಪ್ರವರ್ಧಮಾನವಾಗತೊಡಗಿತು.

ದಿನದಂತೆ ಒಂದು ದಿನ ಗುರುರಾಯ ಕೆಲಸಕ್ಕೆ ಬಂದಾಗ,
ಖವಾಸಖಾನನ ಮುಖವು ಮ್ಲಾನವಾಗಿತ್ತು. ಆ ಹೊತ್ತಿಗೆ ಕಾರ
ಸಲುಗೆಯೂ ಬೆಳೆದಿತ್ತು. ಬಾದಶಹನಿಗೂ – ಖವಾಸಖಾನನಿಗೂ ಲೇ
ವಿಷಯದಲ್ಲಿ ತಕರಾರು ಬಂದಿತ್ತು. ಬಾದಶಹನಿಗೆ ತೃಪ್ತಿಯಾಗುವಂತೆ ವಿ
ತಿಳಿಸಿ ಹೇಳುವುದರಲ್ಲಿ ಸಫಲನಾಗಿರಲಿಲ್ಲ. ಜೊತೆಗೆ ಬಾದಶಹನ ಮನ
ಕುರಿತು ಭ್ರಷ್ಟತೆಯ ಬೀಜವನ್ನು ಬಿತ್ತಿದಂತಾಗಿತ್ತು. ಮನಸ್ಸು ಕೆಟ್ಟಿ
ಗುರುರಾಯ ಬಂದದ್ದನ್ನು ನೋಡಿ ಖವಾಸಖಾನನಿಗೆ ಖುಶಿಯಾಯಿ
ವಿಪತ್ತನ್ನು ಈತ ದೂರಮಾಡಬಲ್ಲನೆಂಬ ಭರವಸೆ ಅವನಲ್ಲಿತ್ತು.
ಬಾದಹರ ಹತ್ತಿರ ಹೋಗಿ ತನ್ನಿಂದ ಸಾಧ್ಯವಾಗದ -ಅನ್ಯಥಾ ಸಂಶ
ಮಾಡಿದ ವಿಷಯವನ್ನು ಬಾದಶಹನಿಗೆ ಮನವರಿಕೆಯಾಗುವಂತೆ ತಿಳಿಸಿ ಹೆ
ಗುರುರಾಯರನ್ನು ಬಿನ್ನವಿಸಿಕೊಂಡನು.//೨೭//

ಯಜಮಾನನ ಆಜ್ಞೆಯನ್ನು ಶಿರಸಾವಹಿಸಿ, 'ಆಗಲಿ' ಎಂದು,
ವಿವರಗಳನ್ನು ಸಂಗ್ರಹಿಸಿಕೊಂಡು ಬಾದಶಹನನ್ನು ಕಾಣಲು ಗುರುರಾಯ
ಬಾದಶಹನನ್ನು ಮುಖಾ-ಮುಖಿಯಾಗಿ ಕಾಣುವುದು ಇದೇ ಮೊದಲಸ
ಎದೆಯಲ್ಲಿ ಡುಗು-ಡುಗಿ ಬಾದಶಹನನ್ನು ಕಾಣುವುದು ಹೇಗೆ? ಅ
ಮಾತನಾಡುವ ರೀತಿ -ನೀತಿಗಳ ಕುರಿತು ಮನಸ್ಸು ಕಿಂಚಿತ್ ಅಸ್ಥಿರ
ಸಮವಯಸ್ಕನಾದ ಬಾದಶಹನ ಕುರಿತು ಯಜಮಾನನ ಬಾಯಿಯಿಂದ
ಕೇಳಿದ್ದರು. ಆತನ ವಿಲಾಸೀ ಜೀವನ, ಕಾವ್ಯದಲ್ಲಿಯ ಆಸಕ್ತಿ
-ಮದಿರಾಕ್ಷಿಯರ ಸಹವಾಸಗಳು ಸ್ವತಃ ಕವಿತೆಗಳನ್ನು ಬರೆಯುವ ವಿಷ
ಕವಿ-ಸಾಹಿತಿಗಳ ಕುರಿತು ಅವನಿಗಿರುವ ಸಹೃದಯತೆ, ಉದಾರ
ಇವುಗಳನ್ನೆಲ್ಲ ಖವಾಸಖಾನನಿಂದ ಕೇಳಿ ಬಲ್ಲವರಾಗಿದ್ದರು. ಆದ
ಬಾದಶಹನ ಎದುರಿಗೆ ನಿಲ್ಲುವ ಸಂದರ್ಭ ಬಂದಾಗ ಕ್ಷಣಕಾಲ ಅಧೀರರಾದ
ಖವಾಸಖಾನನೇ ಧೈರ್ಯ ಕೊಟ್ಟು, ಮುಂದಾಗಿ ಒಬ್ಬ ದೂತನ ಮ
ಗುರುರಾಯ ಬರುವ ಹಾಗೂ ವಿವರ ತಿಳಿಸುವ ವಿಷಯವನ್ನು ಬಾದಶ
ಮುಟ್ಟಿಸಿದನು. ಆಗ ಗುರುರಾಯ ನೇರವಾಗಿ ಅರಮನೆಗೆ ಹೋಗಿ ಬಾ
ಕಂಡು ಅವನಿಗೆ ಸಲ್ಲಿಸುವ ಮುಜುರೆಯನ್ನು ಸಲ್ಲಿಸಿ ನಿಂತುಕೊಂಡರು.
ಯಜಮಾನನ ಆಣತಿಯಂತೆ, ಅವನ ಹಾಗು ಬಾದಶಹನ ನಡುವೆ ಉ
ಸಂಶಯವನ್ನು ಅತಿ ಸುಲಭದಲ್ಲಿ ತಿಳಿಯುವಂತೆ ತಿಳಿಸಿ ಎಲ್ಲಿಯೂ ಭ್ರಷ್ಟತ
ಎಂಬುದನ್ನು ಬಾದಶಹನಿಗೆ ಮನವರಿಕೆ ಮಾಡಿದರು. ಗುರುರಾಯರ ವಿವರ

ಬಾದಶಹನಿಗೆ ತೃಪ್ತಿಯಾಯಿತು. ಜೊತೆಗೆ ಈ ಪ್ರಥಮ ಸಂದರ್ಶನದಲ್ಲಿಯೆ ಬಾದಶಹನು ಗುರುರಾಯರಿಂದ ಆಕರ್ಷಿತನಾದನು. ಅವರ ಮಾತಿನ ಮೋಡಿ, ಅವ ಚಾಣಾಕ್ಷತೆ, ಬಾದಶಹನನ್ನು ಮುಗ್ಧಗೊಳಿಸಿತು. ಅದನ್ನು ತನ್ನ "ಆ ಕಾರ್ಯದರ್ಶಿಯ ಹತ್ತಿರ ಬಾದಶಹನು ಹೇಳಿಯೂ ತೋರಿಸಿದ. ಇ ಗುರುರಾಯರು ಮರಳಿ ಬಂದು ಯಜಮಾನನಿಗೆ ನಡೆದ ಸಂಗತಿಯನ್ನು ತಿಳಿಸಿದಾ ಆತ ಸಂತುಷ್ಟನಾಗಿ ಗುರುರಾಯರ ವೇತನವನ್ನು ದ್ವಿಗುಣಗೊಳಿಸಿದನು.//೨೯/,

ಮರುದಿನ ಖವಾಸಖಾನನು ಅರಮನೆಗೆ ಬಂದಾಗ ಬಾದಶಹ ಗುರುರಾಯರನ್ನು ಅರಮನೆಗೆ ಕರೆಸಲು ಹೇಳಿದನು. ಅಲ್ಲದೆ ಆತ ಚತುರರಾಗಿದ್ದರಿಂ ಅವರ ಸೇವೆ ಅರಮನೆಯಲ್ಲಿ ಹೆಚ್ಚು ಉಪಯುಕ್ತ ಎಂದೂ ಹೇಳಿದನು. ಬಾದಶಹ ಮಾತನ್ನು ಕೇಳಿ ಖವಾಸಖಾನನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ತಾ ಸ್ವತ: ಹೋಗಿ ಯಥೋಚಿತವಾದ ಆದರದೊಂದಿಗೆ, ಗುರುರಾಯರನ್ನು ಅರಮನೆ ಕರೆದುಕೊಂಡು ಬಂದನು. ಅಂದಿನಿಂದ ಗುರುರಾಯರ ಸೇವೆ ರಾಜದರಬಾರದ ಆರಂಭವಾಯಿತು. ಬಾದಶಹನು ಅವರನ್ನು 'ಅಖತ್ಯಾರ್' ಎಂ ನಿಯಮಿಸಿದನು.//೩೦// ರಾಜಹಸ್ತದಿಂದ ವಸ್ತ್ರಾಲಂಕಾರ ಸನ್ಮಾನವಾ ಅಂದಿನಿಂದ ಕರ್ಣಿಕ ಗುರುರಾಯನು, ಅಖ್ತ್ಯಾರ್ ಗುರುರಾವ್ ಆದರು. ತಮ ಕೆಲಸವನ್ನು ಪ್ರಾರಂಭಿಸಿದರು. ಅವರ ಸತ್ಯ-ಧರ್ಮದ ನಡತೆಯಿಂದ ತು ದಿನಗಳಲ್ಲಿಯೇ ಬಾದಶಹನ ಅತಿ ಪ್ರೀತಿಗೆ ಪಾತ್ರರಾದರು.

ಇದರಿಂದಾಗಿ ಗುರುರಾಯರ ದೈನಂದಿನ ಕಾರ್ಯದಲ್ಲೇನ ವ್ಯತ್ಯಯವಾಗಲಿಲ್ಲ. ಮರಾಠಿ ಚರಿತ್ರಕಾರ ಕವಿ ರುಕ್ಮಜದಾಸನು ಇದನ್ನು ಒಂ ಸುಂದರ ದೃಷ್ಟಾಂತದೊಂದಿಗೆ ಹೇಳುತ್ತಾನೆ. 'ಮೊದಲೆ ಕರ್ಣನಂತಿದ್ದ ದಾತಾರ ದುರ್ಯೋಧನನು ಪಟ್ಟಾಭಿಷೇಕ ಮಾಡಿದಂತಾಯಿತು. ದಾತೃತ್ವ ವೃದ್ಧಿಯಾ ಯಾಚಕ ಜನ ತೃಪ್ತಿಪಟ್ಟರಂತೆ.//೩೧//

ರಾಯರು ಸರ್ವರನ್ನು ಸಮಭಾವದಿಂದ ಕಾಣುತ್ತ ಅರಮನೆಯಲ್ಲಿ ಮೂವ ವರುಷ ಸೇವೆಯನ್ನು ಮಾಡಿದರೆಂದು ಮರಾಠಿ ಚರಿತ್ರಕಾರ ಹೇಳುತ್ತಾನೆ. //೩೨ ಆದರೆ ಇದು ಅತಿರಂಜಿತವೆನ್ನಬಹುದು. ಯಾಕೆಂದರೆ ಎರಡನೆಯ ಅಲಿ ಆದಿಲಶಹ ಆಳ್ವಿಕೆಯ ಕಾಲ ಕ್ರಿ.ಶ. ೧೬೫೬ರಿಂದ ೧೬೭೨ರ ವರೆಗೆ. ಪಟ್ಟಕ್ಕೆ ಬಂದಾಗ ಅತ ೧೮ ವರುಷ. ಭೋಗ ವಿಲಾಸ ಜೀವನದಿಂದ ಪಾರ್ಶ್ವವಾಯು ಪೀಡಿತನಾಗಿ ಸತ್ತದ್ದು ದಿನಾಂಕ ೨೪-೧೧-೧೬೭೨ ರಂದು.//೩೩// ಅಂದರೆ ರಾಜ್ಯವಾಳಿದ್ದು ಕೇವಲ ೧೬ ವರುಷ. ರಾಯರು ಖವಾಸಖಾನನಲ್ಲಿ ಕರಣಿಕ ವೃತ್ತಿ ಸೇರಿದ್ದು ಸುಮಾರು ೧೮ರ ವಯಸ್ಸಿನಲ್ಲಿ ಎಂದು ಹಿಡಿದರೆ ಕ್ರಿ.ಶ. ಸು. ೧೬೫

ಂದು ಆಗುತ್ತದೆ. ಆದಾಗ ಅಲಿ ಪಟ್ಟವೇರಿ ಎರಡು ವರುಷವಾಗಿತ್ತು. ಮುಂದಿನ
ಂದೆರಡು ವರುಷಗಳಲ್ಲಿ ರಾಯರಿಗೂ ಬಾದಶಹನಿಗೂ ಸಂಬಂಧ ಬಂದಿರಲು ಸಾಕು.
ಮಾರು ಸಮ ವಯಸ್ಕರಾದ ಉಭಯತರಲ್ಲಿಯ ಸಾಹಿತ್ಯಾಸಕ್ತಿ ಹೆಚ್ಚೆಂದರೆ
ತೆಂಟು ವರುಷ ಸಖ್ಯದಲ್ಲಿ ಕಳೆದಿರಲು ಸಾಧ್ಯವಿದೆ. ಉಭಯತರಲ್ಲಿಯ
ಹಿತ್ಯಾಸಕ್ತಿ ಹಾಗೂ ಕಾವ್ಯರಚನೆ ಇವುಗಳನ್ನು ಬಿಟ್ಟರೆ ಉಳಿದ ಆಸಕ್ತಿಗಳಲ್ಲಿ
ಬ್ಬರದು ಉತ್ತರ ಧ್ರುವವಾದರೆ ಇನ್ನೊಬ್ಬರದು ದಕ್ಷಿಣ ಧ್ರುವ!. ರಾಯರದು
ಯಮ ನಿಷ್ಠೆಗಳ ಆಧ್ಯಾತ್ಮದ ಪಾರಮಾರ್ಥದ ಪಥ. ಬಾದಶಹನದು ಮದ್ಯ
ನಿರಾಕ್ಷಿಯರ ಸುಖಲೋಲುಪದ ಜೀವನ ಪಥ. ಅಂತೆಯೇ ಅವರ ಸಖ್ಯ
ಹಳದಿನ ಉಳಿದಿರಲಾರದು. ಅದಕ್ಕೊಂದು ನಿಮಿತ್ತ ಬೇಕಾಗಿತ್ತು.

ದಿನದಂತೆ ಅಂದು ರಾಯರು ಮನೆಯಿಂದ ರಾಜ ದರಬಾರಕ್ಕೆ ಬರುತ್ತಿದ್ದರು.
ರಿಯಲ್ಲಿ ಒಬ್ಬ ಬೆತ್ತಲೆ ಫಕೀರ ಅವರನ್ನು ಕಂಡು ಹತ್ತಿರ ಕರೆದನು. ಅವನ ಹೆಸರು
ಗಾಶಾಹ' ಎಂದು. ಆತ ಸೂಫಿ ಪಂಥದ ಫಕೀರನಾಗಿದ್ದನು. ಬಹುತೇಕ ಸಮಯ
ಾಧಿ ಸ್ಥಿತಿಯಲ್ಲಿರುತ್ತಿದ್ದನು. ಬೆತ್ತಲೆಯಾಗಿ ತಿರುಗುತ್ತಿದ್ದನು. ಅವನು
ಯರನ್ನು ಹತ್ತಿರ ಕರೆದು ಒಂದು ಗಳಿಗೆ ಕುಳಿತುಕೊಳ್ಳಲು ಹೇಳಿದ. ರಾಯರಿಗೆ
ಯ ಸಂಕಟ ಆತನನ್ನು ತಿರಸ್ಕರಿಸಿ ಮುಂದೆಯೂ ಹೋಗರು. ನಿಂತರೆ ಏನು
ನ್ತಾಂತವೊ. ಯಾಕೆಂದರೆ ಆತನಿಗೆ ವಾಕ್ ಸಿದ್ಧಿ ಇದ್ದಿತೆಂದು ಕೇಳಿದ್ದರು. ಏನಾದರು
ು ಬಿಟ್ಟರೆ? ಇಂಥವರ ಜೊತೆ ಇರುವುದೂ ಕಷ್ಟ ಬಿಡುವುದೂ ಕಷ್ಟ ಎಂದು
ದಲ್ಲಿ ಕ್ಷಣ ಮಾತ್ರ ವಿಚಾರಿಸುತ್ತಿದ್ದಂತೆ ಮತ್ತೆ ಆ ಫಕೀರ 'ಬಾರಲ್ಲಾ, ಅಪ್ಪಾ, ಕೆ
' ಎಂದ. ಹತ್ತಿರ ಹೋಗಿ ಕುಳಿತರು. ನಂಗಾಶಾಹ ರಾಯರನ್ನು ಒಂದು ಕ್ಷಣ
ಪರೀಕ್ಷಕರಂತೆ ದಿಟ್ಟಿಸಿ ನೋಡಿದ. ಮರುಕ್ಷಣ ರಾಯರ ಕೈಯನ್ನು ಹಿಡಿದು
ತ್ತ ತಿರುಗಿಸಿ ನೋಡಿದ. ಬೆರಳಿನಲ್ಲಿದ್ದ 'ಪವಿತ್ರ'ದ ಉಂಗುರವನ್ನು ದಿಟ್ಟಿಸಿ ತನ್ನ
ಂದ ಅದನ್ನು ಕಿತ್ತು ತೆಗೆದುಕೊಂಡ. ರಾಯರು ಮೌನ ವಿಸ್ಮಿತರಾಗಿ ಫಕೀರನನ್ನು
ಡುತ್ತ ಕುಳಿತರು. ಕೈಯಲ್ಲಿ ತೆಗೆದುಕೊಂಡ ಪವಿತ್ರದ ಉಂಗುರವನ್ನು ಮೇಲೆ
ಒಂದೆರಡು ಬಾರಿ ತಿರುಗಿಸಿ ನೋಡುತ್ತ ತುಸುಹೊತ್ತು ಫಕೀರ ಸುಮ್ಮನೆ
ನು. ಮತ್ತೆ ಒಮ್ಮೆಲೆ 'ಇದು ವಿಷಯ ಸೂತ್ರ' ಎನ್ನುತ್ತ ಎದ್ದು ನಿಂತು ಎದುರಿನ
ದಲ್ಲಿ ಆ ಉಂಗುರವನ್ನು ಒಗೆದುಬಿಟ್ಟ. ರಾಯರಿಗೆ ಏನು ಹೇಳಲೂ ತಿಳಿಯದು.
ರ್ಯದಿಂದ ಫಕೀರನ ಮುಖವನ್ನು ಟಕ-ಮಕ ನೋಡುತ್ತ ನಿಂತರು. ಫಕೀರ
ಏನೂ ಮಾತನಾಡಲಿಲ್ಲ. ರಾಯರು ತಮ್ಮ ಕಾರ್ಯದ ಅವಸರವನ್ನು ಗಮನಿಸಿ
ಯೇ ದರಬಾರಿಗೆ ಹೋಗಿಬಿಟ್ಟರು. ಮನಸ್ಸು ಸರಿಯಾಗಿರಲಿಲ್ಲ. ಕೆಲಸದ
ನ ಏಕಾಗ್ರತೆ ಹಾರಿಹೋಗಿತ್ತು ಫಕೀರ ನುಡಿದ 'ಇದು ವಿಷಯ ಸೂತ್ರ' ಎಂಬ
ು ಕಿವಿಯಲ್ಲಿ ಸುತ್ತಾಡುತ್ತಿತ್ತು. ದಿನದ ಕೆಲಸವನ್ನು ಅರೆ-ಬರೆಯಾಗಿ ಬೇಗ
ು ತಿರುಗಿ ನಂಗಾ ಶಹನ ಹತ್ತಿರ ಬಂದರು. ರಾಯರು ಬಂದದ್ದನ್ನು ನೋಡಿ

ಶಾಹ ನಗಹತ್ತಿದ. ಬಿದ್ದು-ಬಿದ್ದು ನಗಹತ್ತಿದ. ರಾಯರು ಹುಚ್ಚನಂತೆ
ನ್ನು ನೋಡುತ್ತ ನಿಂತರು. ನಗು -ನಗುತ್ತಲಿದ್ದ ಸಂಗಾಶಾಹ ಗಂಭೀರನಾದ.
ನಿನಗೆ ಆ ಉಂಗುರದ ವ್ಯಾಮೋಹವೇ?' 'ಸರಿ -ತಂದು ಕೊಡುತ್ತೇನೆ ನಿಲ್ಲು'
ಹೇಳಿ ಎದುರಿನ ಕಂದಕದಲ್ಲಿ ಟಣ್ಣನೆ ಜಿಗಿದು ಬಿಟ್ಟ. ಒಂದು ಮುಳುಗು ಹಾಕಿ
ಬಿಗಿ ಹಿಡಿದುಕೊಂಡು ಮೇಲೆ ಎದ್ದು ಬಂದ. 'ತೆಗೆದುಕೋ ನಿನ್ನ
ರವನ್ನು!' ಎನ್ನುತ್ತ ರಾಯರ ಮುಂದೆ ಮುಷ್ಟಿ ಬಿಚ್ಚಿದಾಗ ಒಂದೇ ತರದ
ಉಂಗುರಗಳು! ರಾಯರಿಗೆ ಆಶ್ಚರ್ಯವಾಯಿತು. ಒಮ್ಮೆ ಫಕೀರನ
ವನ್ನು ಇನ್ನೊಮ್ಮೆ ಅವನ ಕೈಯಲ್ಲಿದ್ದ ಉಂಗುರಗಳ ಕಡೆಗೆ ನೋಡಹತ್ತಿದರು.
ಳ್ಳಯ್ಯ ಹಾಗೇನು ಮುಖ ನೋಡ್ತಿ' ಎಂದು ಫಕೀರ ಗದರಿಸಿದಾಗ ಒಂದು
ರಾಯರ ಮೈ ರೋಮಾಂಚನಗೊಂಡಿತು. ತಮ್ಮ ಉಂಗುರವನ್ನು
ಸುವುದು ಸಾಧ್ಯವಾಗಲೊಲ್ಲದು. ದೇಹಸ್ಮೃತಿ ತಪ್ಪುತ್ತಿದೆ ಎಂದು ರಾಯರಿಗೆ
ಾಗಹತ್ತಿತು. ಸಾವರಿಸಿಕೊಂಡ ಮರುಕ್ಷಣದ ರಾಯರೇ ಬೇರೆಯಾದರು.
ಕಿತ್-ಆನಂದ ಎಂಬ ಮೂರು ಶಬ್ದಗಳು ಬೇರೆಯಾಗಿದ್ದರೂ, 'ಸಚ್ಚಿದಾನಂದ'
ಪದ ಒಂದೇ ಎಂಬ ಅಖಂಡತ್ವದ ಅರಿವಾಯಿತು. ರಾಯರ ಅಜ್ಞಾನದ ಸೂತ್ರ
ಹೋಯಿತು. ಹೃದಯದಲ್ಲಿ ಜ್ಞಾನದ ಮೊಳಕೆ ಒಡೆಯಿತು. ದಿಗ್ಗನೆ ಬಂದು
ಾಹನ ಕಾಲುಗಳನ್ನು ಹಿಡಿದುಕೊಳ್ಳಲು ಮುಂದೆ ಬಂದರು. ಆದರೆ ಫಕೀರ
ಆಸ್ಪದ ಕೊಡಲಿಲ್ಲ. ಹಿಂದೆ ಸರಿದು ಹೇಳಿದ.

ೀ ನನ್ನ ಕಾಲು ಹಿಡಿಯಬೇಡ, ನಾನು ಯವನ, ನೀನು ಶುದ್ಧ ಬ್ರಾಹ್ಮಣ,
ನಮಸ್ಕಾರ ಮಾಡಿಸಿಕೊಳ್ಳುವದು ನನಗೆಯೇ ಯೋಗ್ಯವಲ್ಲ. ಆದರೆ ನಿನ್ನ
ಬಾಗಿಲು ತೆರೆದಿದೆ. ನಿನಗೊಬ್ಬ ಗುರುವಿನ ಅವಶ್ಯಕತೆ ಇದೆ. ಅವನಿರುವ
ನ್ನು ತೋರಿಸುವೆ. ಸಾರವಾಡಕ್ಕೆ ಹೋಗು ಅಲ್ಲಿ ಭಾಸ್ಕರ ಸ್ವಾಮಿಗಳಿದ್ದಾರೆ.
ನಿನಗೆ ಯೋಗ್ಯ ಗುರು'//೩೪// ಎಂದು ಫಕೀರ ಹೇಳಿದ. ಅವನ ಮಾತು
ಾಯರು ಜರ್‍ರನೆ ಇಳಿದರು. ಮ್ಲಾನವದನರಾಗಿ ಮೌನದಿಂದ ಮನೆಯ ದಾರಿ
. 'ಮಳೆ ಇಲ್ಲದೆ ಒಣಗಿದ ಬೆಳೆಯಂತೆ, ಔಷಧವಿಲ್ಲದ ರೋಗಿಯಂತೆ'
ವದನರಾಗಿ ಗುರುರಾಯರು ಮನೆಗೆ ಬಂದರು. ದಿನದಕ್ಕಿಂತ ಬೇಗ ಮನೆಗೆ
ಚಿಂತಾಗ್ರಸ್ತರಾದ ರಾಯರನ್ನು ಮನೆಯಲ್ಲಿ ಅತ್ತಿಗೆ 'ತುಕ್ಕವ್ವ'
ಡಿಕೊಂಡಳು.//೩೫// ಹೆಂಡತಿಯ ಸದ್ದಿಲ್ಲ. ವಿಚಾರಿಸಿದಾಗ 'ಮಂದಿರ'ಕ್ಕೆ
ರುವದಾಗಿ ಹಾರಿಕೆಯ ಉತ್ತರ ಬಂದಿತು. ರಾಯರಿಗೆ ತಮ್ಮ ಅಂದಿನ
ವನ್ನು ಹೇಳುವ ತವಕ. ಆದರೆ ಕೇಳುವವರು ಮನೆಯಲ್ಲಿಯೇ ಇಲ್ಲವಲ್ಲ.
ಕಾಲದ ವರೆಗೆ ಕಾಯಬೇಕಾಯಿತು. ಸಾಯಂಕಾಲ ತಿಮ್ಮವ್ವ ಮನೆಗೆ ಬಂದಾಗ
ಮನೆಯಲ್ಲಿದ್ದುದ್ದನ್ನು ಕಂಡು ಹೆದರಿದಳು. ತನ್ನ ಹುಳುಕು ಹೊರಬಿತ್ತೆಂಬ
ಅವಳದು. ರಾಯರಿಗೆ ಅದೆಲ್ಲದರ ಪರಿವೆ ಇಲ್ಲದೆ 'ಅದೇನು ಅದೆಂಥ

ಇಷ್ಟು ಹೊತ್ತು?' ಎಂದು ಕೇಳುತ್ತ ಅಂದು ನಡೆದ ಘಟನೆಯನ್ನು
ತ್ತಿದರು. ಅವಾಕ್ಕಾಗಿ ಕೇಳುತ್ತ ನಿಂತ ತಿಮ್ಮವ್ವ, ಕೊನೆಗೆ 'ಸಾರವಾಡದ
ಸ್ವಾಮಿಗಳ ಹತ್ತಿರ ಹೋಗಲು ಹೇಳಿದ' ಎಂದು ಗಂಡ ಹೇಳಿದಾಗ
ಂಚನಗೊಳ್ಳುವ ಸರದಿ ಅವಳದಾಯಿತು. ಆಶ್ಚರ್ಯ, ಸಂತೋಷ, ಉದ್ವೇಗ
ಒಮ್ಮೆಲೆ ಆದಂತಾಗಿ ಏನು ಹೇಳಬೇಕೆಂದು ತಿಳಿಯದೆ ಸುಮ್ಮನೆ ನಿಂತಾಗ,
ಂಡತಿಯರ ಮಾತುಗಳನ್ನು ಕೇಳುತ್ತಿದ್ದ ಅತ್ತಿಗೆ ತುಕ್ಕವ್ವ ಬಂದು ಹೇಳಿದಳು.

ನು ಆಗಲೇ ಹೇಳಿದ್ದೆನಲ್ಲ ಮಂದಿರಕ್ಕೆ ಹೋಗಿರುವಳೆಂದು ಅದು ಸುಳ್ಳು
ಶಕ್ಕೆ ಹೋಗಿದ್ದಳು. ಈಗ ಆರು ತಿಂಗಳುಗಳಿಂದ ಭಾಸ್ಕರ ಸ್ವಾಮಿಗಳಿಗೆ
ಕೊಳ್ಳುತ್ತಿದ್ದಾಳೆ.- ಮಕ್ಕಳಿಗಾಗಿ' ಎಂದಾಗ ರಾಯರಿಗೆ ಇನ್ನಷ್ಟು ಆಶ್ಚರ್ಯ
ಎಂದು ಹೆಂಡತಿಯ ರಟ್ಟೆಯನ್ನು ಹಿಡಿದು ಕೇಳಿದಾಗ ತಿಮ್ಮವ್ವ ಅವನತ
ಾಗಿ ಹೇಳಹತ್ತಿದಳು.

ದು ಆರು ತಿಂಗಳಾಯಿತು ಹೋಗಹತ್ತಿ. ಆದರೆ ದರುಶನ ಆದದ್ದು ಇವತ್ತೇ.
ಅಪ್ಪಣೆ ಕೊಡಿಸಿದ್ದರು, ನಿಮ್ಮನ್ನು ಕರೆದುಕೊಂಡು ಬರಲು ಹೇಳಿದ್ದರು.
ಲ್ಲಿಗೆ ಬರುವ ಕುರಿತು ಚಿಂತೆಯಾದಾಗ ಅವರೇ ಹೇಳಿದ್ದರು. ಚಿಂತಿಸಬೇಡ
ಹೋಗು' ಎಂದು ಆನಂದಾಶ್ರುಗಳಿಂದ ತಿಮ್ಮವ್ವ ಅಂದಿನ ಘಟನೆಯನ್ನು
ರಿಗೆ ಹೇಳಿದ್ದಳು. ಮರುದಿನ ಬೆಳಿಗ್ಗೆ ಸಾರವಾಡಕ್ಕೆ ಹೋಗುವುದೆಂದು
ಳು ನಿರ್ಧರಿಸಿದರು.//೩೬//

ಾಹಸ ಭೆಟ್ಟಿ - ಉಂಗುರದ ಸಂಗತಿ, ಅಂದೇ ತಿಮ್ಮವ್ವನಿಗೆ ಭಾಸ್ಕರ
ದರ್ಶನ, ಗಂಡನನ್ನು ಕರೆದುಕೊಂಡು ಬರಲು ಹೇಳಿದ್ದು ಇವುಗಳೆಲ್ಲ
ತಿ ಪವಾಡ ಎನಿಸಿದರೂ, ಇಂಥ ಯಾವುದೋ ಒಂದು ಸನ್ನಿವೇಶದಲ್ಲಿ
ಮನಸ್ಸು ಪರಿವರ್ತಿತವಾಗಿ ಅವರು ಸಾರವಾಡದ ಭಾಸ್ಕರ ಸ್ವಾಮಿಗಳ ಹತ್ತಿರ
. ಅಥವಾ ಯಾವುದೋ ಒಂದು ಸಂದರ್ಭದಲ್ಲಿ ಭಾಸ್ಕರ ಸ್ವಾಮಿಗಳಿಗೂ
ಮುಖಾ -ಮುಖಿ ಭೆಟ್ಟಿಯಾದಾಗ ರಾಯರು ಭಾಸ್ಕರ ಸ್ವಾಮಿಗಳಿಂದ
ಾಗಿ ಅವರ ಸಂಪರ್ಕವನ್ನು ಪಡೆದಿರಬೇಕು.

ರ ಸ್ವಾಮಿಗಳ ಕುರಿತು ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಅವರು
ರದಲ್ಲಿ ಇದ್ದರು. ಅಲ್ಲಿಂದ ಸಾರವಾಡಕ್ಕೆ ಸ್ವ ಇಚ್ಛೆಯಿಂದ ಬಂದು
ಎಂದು ಮರಾಠಿ ಚರಿತ್ರೆ ಹೇಳುತ್ತದೆ. ಅವರ ಮೂಲ ಸ್ಥಳ,
ಪರೆ, ಮತ, ಪಂಥ, ಸಾಧನೆ, ಸಿದ್ಧಿ, ಇವುಗಳ ಕುರಿತು ಏನನ್ನೂ
ದು ಸಾಧ್ಯವಾಗಿಲ್ಲ. ಶ್ರೀಪತಿ ತನುಜರು ಕೂಡ ತಮ್ಮ ಕನ್ನಡ

ಚರಿತ್ರೆಯಲ್ಲಿ 'ಸಾರವಾಡ ಗ್ರಾಮದಲಂದು, ಭಾಸ್ಕರ ಮುನಿ ಬಂದು, ಧಾರುಣಿ
ರುದ್ಧರಿಸಲಲ್ಲೆ ನಿಂದು। ಇರಲು ದಯಾಸಿಂಧು।। ಎಂದು ಮುಂತಾಗಿ ಅಷ್ಟೇ
ಳುತ್ತಾರೆ. ಸವದತ್ತಿ ರಾಮ ತನ್ನ ಸಂಸ್ಕೃತ ಸ್ತೋತ್ರದಲ್ಲಿ ಮುನೇಶ್ವರ ಸ್ಥಿತಿ
ರ್ವಾಡ ಗ್ರಾಮೇ ಶ್ರುತಂ।।' ಎಂದು ಹೇಳುತ್ತಾನೆ. ಆದರೆ ಶ್ರೀ ಶ್ರೀಪತಯ್ಯ
ದಾಸರು ತಮ್ಮ ಸೇವಾತತ್ವ ಪೀಠಿಕೆಯಲ್ಲಿ 'ಸಾರ್ವಾಡದ ಬ್ರಾಹ್ಮಣ
ಹಸ್ಥರೊಬ್ಬರು ಕೃಷ್ಣಾ ತೀರಕ್ಕೆ ಸ್ನಾನಕ್ಕೆಂದು ಹೋದಾಗ ಪ್ರವಾಹದ ಗುಂಟ ತೇಲಿ
ುವ ತೆಪ್ಪದಲ್ಲಿ ದೊರೆತ ಮಗು ಭಾಸ್ಕರ ಸ್ವಾಮಿ ಎಂದು ಪ್ರಸಿದ್ಧರಾದರು.' ಎಂದು
ಳುತ್ತಾರೆ! ಯಾರು? ಎಲ್ಲಿ? ಆಧಾರಗಳನ್ನೊಂದೂ ಕೊಡುವುದಿಲ್ಲ. ಇಂದು
ರವಾಡದಲ್ಲಿ ಅಲ್ಲಿಯ ಕುಲಕರ್ಣಿಗಳ ಹಾಳುಬಿದ್ದ ಮನೆಯೊಂದರಲ್ಲಿ ಭಾಸ್ಕ
ಮಿಗಳ 'ಸಮಾಧಿ' ಯನ್ನು ತೋರಿಸುತ್ತಾರೆ. ಮರಾಠಿ ಚರಿತ್ರೆಕಾರನು ಅವ
ುತು ಹೇಳುತ್ತ 'ಜನರು ಅವರನ್ನು ಈಶ್ವರನ ಅವತಾರವೆಂದು ಭಾವಿಸುತ್ತಿದ್ದರು
ಮಾಧಿ ಸ್ಥಿತಿಯಿಂದ ಹೊರಬಂದು ಅವರ ದರ್ಶನವಾಗಬೇಕಾದರೆ ಜನರ
ಗಳುಗಟ್ಟಲೆ ಕಾಯಬೇಕಾಗುತ್ತಿತ್ತು.' ಎಂದು ಮುಂತಾಗಿ ಹೇಳುತ್ತಾನೆ.//೩೭//

ಮರುದಿನ ರಾಯರು ಬಾದರಹನ ಅಪ್ಪಣೆ ಪಡೆದು ಸಹಕುಟುಂಬರಾ
ರವಾಡಕ್ಕೆ ಹೋದರು. ಅವರು ಸ್ವಾಮಿಗಳ ಆಶ್ರಮಕ್ಕೆ ಹೋದಾಗ ಭಾಸ್ಕ
ಮಿಗಳು ಸಮಾಧಿ ಸ್ಥಿತಿಯಲ್ಲಿದ್ದರು. ಸ್ವಾಮಿಗಳ ದರ್ಶನಕ್ಕಾಗಿ ಕಾಯುತ್ತ ಹೊರ
ುತರು. ತುಸು ಹೊತ್ತಿನಲ್ಲಿ ಭಾಸ್ಕರ ಸ್ವಾಮಿಗಳು ಸಹಜ ಸ್ಥಿತಿಗೆ ಬಂದರು. ರಾಯರ
ಹಕುಟುಂಬರಾಗಿ ದರ್ಶನಾಪೇಕ್ಷಿಗಳಾಗಿ ಬಂದ ವಿಷಯವನ್ನು ಸೇವಕರು ಹೇಳಿದಾ
ವರನ್ನು ಒಳಗೆ ಕರೆದುಕೊಂಡು ಬರಲು ಸ್ವಾಮಿಗಳು ಅಪ್ಪಣೆ ಕೊಡಿಸಿದರು
ಯರು ಹಾಗೂ ಅವರ ಹೆಂಡತಿ ಇಬ್ಬರೂ ಒಳಗೆ ಬಂದು ಸ್ವಾಮಿಗಳಿ
ಸಾಷ್ಟಾಂಗ ನಮಸ್ಕಾರ ಮಾಡಿದರು. ಸ್ವಾಮಿಗಳು ಸಸ್ಮಿತವದನರಾಗಿ ರಾಯರನ
ಚ್ಚಿಸುತ್ತ,

'ನಾವು ಬಂದು ಆರು ತಿಂಗಳುಗಳ ಮೇಲಾಯಿತು! ನಿಮಗೆ
ಬರುವುದಾಗಲಿಲ್ಲವಲ್ಲ! ಇಂದು ಆಕಸ್ಮಾತ್ತಾಗಿ ಆ
ಗಳಿಗೆ ಬಂದಿತಲ್ಲವೆ?' ಎಂದು ಕೇಳಿದಾಗ

ಯರ ಮೈ ಜುಮ್ ಎಂದಿತು. ಮತ್ತೊಮ್ಮೆ ನಮಸ್ಕರಿಸಿ, 'ಸ್ವಾಮಿ ನಾ
ಪರಾಧಿ, ಪಾಮರನು, ನೀವು ಕರುಣಿಸಿ ನನ್ನನ್ನು ಉದ್ಧರಿಸಬೇಕು' ಎಂದು ಅನ
ಾವದಿಂದ ಭಾಸ್ಕರ ಸ್ವಾಮಿಗಳನ್ನು ಸ್ತುತಿಸಲು ಅವರು ರಾಯರನ್ನು ಹತ್ತಿರ ಕರೆ
ಳ್ಳಿರಿಸಿಕೊಂಡರು.//೩೮// ಒಬ್ಬ ಶಿಷ್ಯನನ್ನು ಕರೆದು ಒಂದು ಪಾತ್ರೆಯಲ್ಲಿ ತು
ಾಲನ್ನು ತರಲು ಹೇಳಿದರು. ಶಿಷ್ಯ ತಂದ ಹಾಲನ್ನು ಕ್ಷಣಹೊತ್ತು ದಿಟ್ಟಿಸಿ ನೋ
ದನ್ನು ರಾಯರಿಗೆ ಕುಡಿಯಲು ಕೊಟ್ಟರು.//೩೯// ಪರಮ ಪ್ರಸಾದವೆಂದು ತಿಳಿ
ಯರು ಹಾಲನ್ನು ಕುಡಿದು ಮತ್ತೊಮ್ಮೆ ಗುರುಗಳಿಗೆ ನಮಸ್ಕರಿಸಿದ

,ಪನ್ನರಾದ ಗುರುಗಳು ಶಿಷ್ಯನ ಮಸ್ತಕದ ಮೇಲೆ ಕ್ಷಣಹೊತ್ತು ಹಸ್ತವನ್ನಿಟ್ಟರು:
ನಾಗಲೇ ಹೊತ್ತಿದ್ದ ಜ್ಞಾನದ ಕಿಡಿಯು ಸಚ್ಚಿದಾನಂದನ ದರ್ಶನವನ್ನು ಮಾಡಿಸಿತು:
ಅಪರೂಪದ ಘಟನೆಯನ್ನು ರಾಯರು ತಮ್ಮ ಒಂದು ಪದದಲ್ಲಿ ಸುಂದರವಾ
ೀಳಿದ್ದಾರೆ. 'ಇಂದೆನ್ನ ಜನ್ಮ ಪಾವನವಾಯಿತು. ತಂದೆ ಶ್ರೀ ಗುರುಗಳ ಚರಣ
ಶನದಿಂದ' ಎಂದು ಪ್ರಾರಂಭವಾಗುವ ೬ ನುಡಿಗಳ ಕೀರ್ತನೆಯಲ್ಲಿ ಗುರುಗ
ಯದಿಂದ ತಮಗೆ ಸಾಕ್ಷಾತ್ಕಾರವಾದ ಬಗೆಯನ್ನು ವಿವರಿಸಿದ್ದಾರೆ.//೪೦/
ನೆಯಲ್ಲಿ

ಭಾಸ್ಕರ ಸ್ವಾಮಿಯು ಕರುಣಾಳು ಮೂರ್ತಿಯು।
ಮೂಢ ಮಹಿಪತಿಯ ಕೃಪಾಂಬುಧಿಯು।
ಕರುಣದಭಯ ಹಸ್ತವನು ಶಿರಸದಲ್ಲಿಡಲಾಗಿ।
ಧನ್ಯನಾದೆನು ಸತಿಪತಿ ಸಹಿತವಾಗಿನ್ನು ।।೬।।

ಂದು ಹೇಳುತ್ತಾರೆ. ಬಹುಶಃ ಈ ಕೃತಿಯೇ ರಾಯರು ತಮ್ಮ ಗುರುಗಳನ್ನು ಕಂಡ
ೀಲೆ ರಚಿಸಿದ ಮೊದಲ ಕೀರ್ತನೆಯೂ ಆಗಿರಬೇಕು. ಅಂದಿನಿಂದ 'ಮಹಿಪತಿ' ಎಂಬ
ಂಕಿತದಿಂದ ತಮ್ಮ ಅನುಭವಗಳನ್ನು ಕೀರ್ತನೆಯ ರೂಪದಲ್ಲಿ ಹೇಳಲು
ರಂಭಿಸಿರಬೇಕು. ಚಾರಿತ್ರಿಕವಾಗಿಯೂ ಈ ಕೀರ್ತನೆ ಮಹತ್ವದ್ದೆನಿಸುತ್ತದೆ
ಸ್ಕರ ಸ್ವಾಮಿಗಳ ದರ್ಶನ, ಅವರ ಕೃಪೆಯಿಂದ ಸಾಕ್ಷಾತ್ಕಾರದ ಅನುಭವದ ಜೊತೆ
-ಪತಿ ಸಹವಾಗಿ ಗುರುಗಳ ಹತ್ತಿರ ಹೋಗಿದ್ದನ್ನು ಹಾಗು ಅವರು ಕರುಣದಿಂದ
ನೆಯ ಹಸ್ತವನ್ನು ರಾಯರ ಶಿರದ ಮೇಲೆ ಇಟ್ಟುದನ್ನು ಮಹಿಪತಿರಾಯರೇ ಸ್ವತ:
ಳುವುದು ವಿಶೇಷವೆನಿಸುತ್ತದೆ. ಹೀಗೆ ಇನ್ನೊಂದು ಕೀರ್ತನೆಯಲ್ಲಿ ಗುರುಗಳ
ರ್ಶನದಿಂದ ತಮ್ಮ ಜನ್ಮ ಸಾಫಲ್ಯವಾದ ಬಗೆಯನ್ನು ವಿವರಿಸುತ್ತಾರೆ. ಸಾರವಾಡಕ್ಕೆ
ದ ಮೇಲೆ ಅವರ ಪುಣ್ಯ ಕೈಗೂಡಿದ್ದನ್ನು, ಭಾನುಕೋಟಿ ತೇಜರೂಪವಾ
ಡಿದ್ದನ್ನು ಹೇಳಿದ್ದಾರೆ.//೪೧//

ಹೀಗೆ ಪ್ರಥಮ ದರುಶನದಲ್ಲಿಯೇ ಭಾಸ್ಕರ ಸ್ವಾಮಿಗಳು ಮಹಿಪತಿರಾಯರಿಗೆ
ಮ್ಮ ಸಾಕ್ಷಾತ್ಕಾರವನ್ನು ಮಾಡಿಸಿದರು. ಅದರಂತೆ, ತಿಮ್ಮವ್ವನಿಗೆ
ಗಪ್ರಸಿದ್ಧ'ರಾದ ಪುತ್ರದ್ವಯರ ವರವನ್ನೂ ಕೊಟ್ಟರು. ಒಬ್ಬ ಜ್ಞಾನವಂತ
ಗುಣವಂತನಾದರೆ ಇನ್ನೊಬ್ಬ ಶೂರನಾಗಿ -ಕೀರ್ತಿವಂತ ನಾಗುತ್ತಾನೆಂದು
ಳಿದರು.//೪೨// ಗುರುಗಳ ವರದಾನದಿಂದ ಹರುಷಪಟ್ಟ ತಿಮ್ಮವ್ವ ಮತ್ತೆ ಮತ್ತೆ
ರುಗಳ ಚರಣಗಳಿಗೆ ಎರಗಿದಳು. ಅಂದಿನ ದಿನವನ್ನೆಲ್ಲ ದಂಪತಿಗಳು ಗುರುಗಳ
ಿಧ್ಯದಲ್ಲಿಯೇ ಕಳೆದರು. ಜೊತೆಗೆ ಬಂದಿದ್ದ ಪರಿವಾರವನ್ನೆಲ್ಲ ಹಿಂತಿರುಗಿ
ಜಾಪುರಕ್ಕೆ ಕಳಿಸಿ ಗುರುಗಳ ಆಜ್ಞೆಯಂತೆ ತುಸುದಿನ ಸಾರವಾಡದಲ್ಲಿಯೇ
ಿವುದೆಂದು ನಿಶ್ಚಯಿಸಿದರು.

ಒಂದು ದಿನ ಹೋಗಿ ಬರುತ್ತೇನೆಂದು ಹೇಳಿ ಹೋದ ರಾಯರು ನಾಲ
ದಿನಗಳಾದರೂ ತಿರುಗಿ ಬರದ್ದನ್ನು ಕಂಡ ಬಾದಶಹನು ಸೇವಕನೊಬ್ಬ
ಸಾರವಾಡಕ್ಕೆ ಕರೆಯಲು ಕಳಿಸಿದನು. ಆದರೆ ರಾಯರು ವಿಜಾಪುರಕ್ಕೆ ಬರಲಿಲ್ಲ. ತ
ಕುರಿತು ತೋರಿದ ಪ್ರೀತಿ ವಿಶ್ವಾಸಗಳಿಗೆ ಪ್ರತಿಯಾಗಿ ಸೇವಕನ ಮುಖಾ
ಕೃತಜ್ಞತೆಗಳನ್ನು ತಿಳಿಸಿದರು. ತಮ್ಮ ನಿಜವಾದ ಬಾದಶಹ ದೊರಕಿರುವುದಾಗಿ
ಹೇಳಿ ಕಳಿಸುತ್ತ, ಇನ್ನು ಆ ಬಾದಶಹನನ್ನು ಕಾಣುವ ಹಂಬಲದಿಂದ
ಸೇವೆಯನ್ನು ಮಾಡುವುದಾಗಿ ಹೇಳಿ ಕಳಿಸಿದರು. ಈವರೆಗೆ ವಿಜಾಪುರದಲ್ಲಿ
ತಮ್ಮದೆನಬಹುದಾದ ಎಲ್ಲ ಚರ-ಸ್ಥಿರ ಆಸ್ತಿಯನ್ನು ರಾಜಭಾಂಡ
ಒಪ್ಪಿಸಿಕೊಳ್ಳಬೇಕೆಂದು ಪತ್ರಮುಖೇನ ಬಾದಶಹರಿಗೆ ಬಿನ್ನವಿಸಿಕೊಂಡರು.//೪

ಬಾದಶಹನು ಸೇವಕನ ಮುಖಾಂತರ ಕಳಿಸಿದ ಪತ್ರವನ್ನು ಓದಿ, ಅ
ಸಾದ್ಯಂತ ವಿಷಯವನ್ನು ಕೇಳಿ ವ್ಯಥೆ ಪಟ್ಟನು. ಮತ್ತೊಮ್ಮೆ ಹೇಳಿ
ನೋಡಿದನು. ಅವರ ಬಾದಶಹನ ಸೇವೆಯನ್ನು ವಿಜಾಪುರದಲ್ಲಿದ್ದುಕೊ
ಮಾಡಬಹುದಲ್ಲ ಎಂದೂ ಹೇಳಿಕಳಿಸಿದನು. ಆದರೆ ರಾಯರು ಅದಕ್ಕೆ ಒಪ್ಪ
ಆಗ ಬಾದಶಹನು ನಿರುಪಾಯನಾದ. ಆದರೆ ಅವರು ಹಿಂತಿರುಗಿಸಿದ ಆಸ್ತಿಗೆ
ಕೈ ಹಚ್ಚಲಿಲ್ಲ. ಅದು ರಾಯರ ಆಸ್ತಿ. ಅದನ್ನು ಯಾವಕಾಲಕ್ಕೂ ರಾಜಭಾಂ
ಸೇರಿಸಬಾರದು. ತಮ್ಮ ಆಸ್ತಿಯನ್ನು ಅವರು ಮನ ಬಂದಂತೆ ವಿನಿಯೋಗಿಸಲಿ
ಫರ್ಮಾನು ಹೊರಡಿಸಿದ. ಅದನ್ನು ಕೇಳಿದ ರಾಯರು ಹೆಂಡತಿಯನ್ನು ವಿಜಾ
ಕಳಿಸಿ ತಮ್ಮ ಆಸ್ತಿಯನ್ನೆಲ್ಲ ಬಡಬಗ್ಗರಿಗೆ ಹಂಚಿದರು.//೪೭//

ಪತಿಯ ಆಜ್ಞೆಯಂತೆ ತುಕ್ಕವ್ವ ವಿಜಾಪುರಕ್ಕೆ ಬಂದು ತಮ್ಮದೆನ್ನುವ ಆಸ್ತಿ
ಸತ್ಪಾತ್ರರಿಗೆ ದಾನಮಾಡಿ ಸಾರವಾಡಕ್ಕೆ ಮರಳಿದಳು. ಆಗ ರಾಯರಿಗೆ
ಪರಮಾನಂದವಾಯಿತು. ಎಲ್ಲವನ್ನು ತ್ಯಾಗಮಾಡಿ ಗುರುಗಳ ಸಾನಿ
ಇರುವುದು ಮುನ್ನ ಮಾಡಿದ ಪುಣ್ಯದ ಫಲವೆಂದೂ, ಅದರಿಂದ ತಮ್ಮ
ಪಾವನವಾಯಿತೆಂದು ಹಲವಾರು ಕೀರ್ತನೆಗಳಲ್ಲಿ ತುಂಬು ಹೃದಯದಿಂದ
ನಲಿದಿದ್ದಾರೆ.

'ಇನ್ನೇನಿನ್ನೇನು ಎನಗಿನ್ನು ಇನ್ನೇನಿನ್ನೇನು
ಎನ್ನೊಳು ಗುರು ತನ್ನ ಮರ್ಮವು ದೋರಿದ ಇನ್ನೇನಿನ್ನೇನು।

.........

ಮಹಿಪತಿ ಜೀವನ್ನ ಪಾವನ್ನವಾಯಿತು ಇನ್ನೇನಿನ್ನೇನು।
ಎಂದು ಒಂದು ಕೀರ್ತನೆಯಲ್ಲಿ ಹೇಳಿದ್ದಾರೆ. ಮತ್ತೊಂದು ಕೀರ್ತನೆಯಲ್ಲಿ
'ಪುಣ್ಯ ಕ್ಷೇತ್ರವಹುದಿದು ಸಾರವಾಡ ಗ್ರಾಮ

ಕಂಣಾರೆ ಕಂಡು ಯಾತ್ರೆಗೆ ಬಾಹುದು ಬ್ರಹ್ಮ ಸ್ತೋಮ'
ಎಂದು ಗುರುಸ್ಥಾನದ ಮಹಿಮೆಯನ್ನು ಹೇಳಿದ್ದಾರೆ.

ಮರಾಠಿ ಚರಿತ್ರೆಯ ಉಪಲಬ್ಧ ಒಂದು ಅಧ್ಯಾಯದಲ್ಲಿಯ ವೃತ್ತಾಂತವು ಇ
ನಿಲ್ಲುತ್ತದೆ. ಮುಂದಿನ ಚರಿತ್ರೆಗೆ ಅವರ ಆಧ್ಯಾತ್ಮಿಕ ಸಾಧನೆಯಲ್ಲಿಯ ಅಭಿ
ಉತ್ತರ ಕಾಲದ ಅವರ ಜೀವನದ ಕುರಿತು ಬೆಳಕು ಚೆಲ್ಲಲು ಶ್ರೀಪತಿ ತನುಜರ
ಕಿರುಚರಿತ್ರೆ ಹಾಗು ಸಂಸ್ಕೃತ ಸ್ತೋತ್ರಗಳೇ ಮುಖ್ಯ ಆಕರಗಳು. ಜೊತೆಗೆ ರಾ
ತಮ್ಮ ಅನುಭವಗಳನ್ನು ಉಲ್ಲೇಖಿಸಿ ರಚಿಸಿದ ಸ್ವಕೃತಿಗಳು, ಅವರ
ಮೊಮ್ಮಕ್ಕಳು ರಚಿಸಿದ ಹಲವಾರು ಕೀರ್ತನೆಗಳು, ಮತ್ತು ಪರಂಪರೆಯಿಂದ
ಬಂದ ಸಂಗತಿಗಳು ಸಹಾಯವಾಗುತ್ತವೆ.

ಗುರುಗಳ ದರ್ಶನ ಹಾಗು ಸ್ಪರ್ಶಮಾತ್ರದಿಂದ ಮಹಿಪತಿರಾಯರು ಪರಮಾ
ಸಾಕ್ಷಾತ್ಕಾರದ ಅನುಭವವನ್ನು ಹೊಂದಿದ್ದರು. ಅದಕ್ಕೆ ಕಾರಣ, ಅವರ ಬೌ
ಭಾವನಾತ್ಮಕ ಹಾಗೂ ನೈತಿಕ ಸಿದ್ಧತೆಯು ಆಗಲೇ ತುಂಬ ಮುಂದುವರೆ
'ಅವರ ಹೃದಯದಲ್ಲಿ ಮುಮುಕ್ಷತೆಯ ಭಕ್ತಿ ಭಾವದ ಸಿಡಿಮದ್ದು ಜ
ತುಂಬಲಾಗಿದ್ದಿತು. ಅದಕ್ಕೆ ಸದ್ಗುರುಗಳ ಅನುಗ್ರಹದ ಕಿಡಿಯೊಂದೇ ಬೇಕಾ
ಅದು ಈಗ ಲಭಿಸಿದ ಮೂಲಕ, ಅವರಲ್ಲಿ ಅನುಭಾವದ ಸ್ಫೋಟವು ಕಂಗೊಳಿ
ಬಹುಕಾಲ ಬೇಕಾಗಲಿಲ್ಲ ಅವರ ಈ ಸಾಧನದ ಸ್ವರೂಪವನ್ನು ಅವರ ಮರಿ
ಶ್ರೀಪತಿತನುಜರ ಬಾಯಿಂದ ಕೇಳಬೇಕು.

'ಯೋಗಧಾರಣದ ಕೀಲವ ದೋರಿಸಲು। ದೂದಿಯ ಪೋಲ್।
ಆಗಲೆ ದೊರಕಿತು ಮನ ನೆಲೆಗೊಳ್ಳಿಸಲು। ನಾನಾ ಬಯಕೆಗಳು।
ತ್ಯಾಗವ ಮಾಡುತ ಅನ್ನ ಉದಕಗಳು। ಕ್ಲಪ್ತಕೆ ನಿಲ್ಲಿಸಲು।
ಸಾಗಲು ಮುಂದಕೆ ಪರಿಪರಿ ಸಿದ್ಧಿಗಳು- ಮುಗಿದವು ಹಸ್ತಗಳು ।। ೫

ನಾಲ್ಕು ಆರು ದಶದ್ವಾದಶ ಷೋಡಶದಾ। ಭ್ರೂಮಧ್ಯದ್ವಿದಳದಾ।
ಆ ಕಮಲವ ಮೆಟ್ಟುತ ಕಾಕಿಯ ಮುಖದಾ। ದ್ವಾರವತ್ಯಜಿಸುತ್ತಾ।
ತ್ರಿಕುಟ ಶ್ರೀಹಟ ಗೋಲ್ಲಟ ಗೋಪುರದಾ। ನೋಡುತಾ ಸಂಭ್ರಮದ
ಸೋಂಕಿಳೆ ಗುಂಫದೊಳಾಡಿ ಸಾಸಿರದಳದಾ। ಪಂಕಜದೊಳಗಿದ್ದ ।। ೬

ನಿರುಪಮ ನಿರ್ಗುಣ ನಿತ್ಯನಿರಂಜನಾ। ಪ್ರಭೆಯು ಅನುದಿನಾ।
ಹರಿಶಶಿ ಕೋಟಿ ಪ್ರಕಾಶ ಭಾಸುವದನಾ। ಕಾಣುತ ಸಂಪೂರ್ಣಾ।
ಇರಲು ಪಶ್ಚಿಮದ ಮಾರ್ಗದ ಸಾಧನಾ। ತಿಳಕೊಂಡ್ಯೋ ಪ್ರವೀಣಾ।
ಎರಡು ಹಾದಿ ಸುಲಭವಾಯಿತು ಗುರುಕರುಣ। ದಿಂದಲಿ ಭಯಹರಣಾ।। ೭

ಹೀಗೆ ಸದ್ಗುರುಗಳು 'ಯೋಗಧಾರಣದ ಕೀಲನ್ನು' ಅರುಹಲು
ಾಗ್ರಾಹಿಯಾದ ದೂದಿಗೆ ಕಿಡಿಯು ಸೋಂಕಿದಂತಾಯಿತು. ಅದು ಒಮ್ಮೆಲೆ
ಲಿಸುವಂತೆ ರಾಯರ ಅಂತರಂಗದಲ್ಲಿ ಪರಮಾತ್ಮನ ಚಿತ್ಪ್ರಕಾಶವು
ಯತೊಡಗಿತು. ಅಂತೆಯೇ ರಾಯರು 'ಹನ್ನೆರಡು ವರುಷಗಳಲ್ಲಿ
ಯುವಂಥ ಯೋಗವನ್ನು ಹನ್ನೊಂದು ತಿಂಗಳುಗಳಲ್ಲಿ' ಮುಗಿಸಿದರು. ಮತ್ತು
ಂದಾಗಿ ಅವರು ಪರಿಪರಿಯ ಸಿದ್ಧಿಗಳನ್ನೂ, ದಿವ್ಯ ಅನುಭವಗಳನ್ನು ಪಡೆದು
ಾದರು. ಅವರು ಪಡೆದ ಈ ದಿವ್ಯ ಅನುಭವಗಳನ್ನು ಸ್ಥಿರಗೊಳಿಸಲು ಅನೇಕ
ರೆಗಳನ್ನು ಮಾಡಬೇಕಾಯಿತು.

ಷ್ಯನ ಸಿದ್ಧಿಗಳನ್ನು ಕಂಡು ಭಾಸ್ಕರ ಸ್ವಾಮಿಗಳಿಗೆ ಹಿಡಿಸಲಾರದಷ್ಟು
ೀಷವಾಯಿತು. ಇನ್ನು ಸಾರವಾಡದಿಂದ ಹೊರಡಲು ಅಡ್ಡಿ ಇಲ್ಲ ಎಂದರು.
ಗಳ ಅಪ್ಪಣೆ ಪಡೆದು ಮಹಿಪತಿರಾಯರು ತಮ್ಮ ಪತ್ನಿಯೊಂದಿಗೆ ತಿರುಗಿ
ಪುರಕ್ಕೆ ಬಂದರು.//೪೪//

ರಾಯರು ತಿರುಗಿ ವಿಜಾಪುರಕ್ಕೆ ಬರುವ ಸುದ್ದಿಯನ್ನು ಕೇಳಿ ಖವಾಸಖಾನನಿಗೆ
ು ಸಂತೋಷವಾಯಿತು. ರಾಯರು ವಿಜಾಪುರವನ್ನು ಬಿಟ್ಟು ಹೋದಂದಿನಿಂದ
ು ಬಲಗೈ ಹೋದಂತಾಗಿತ್ತು. ಅವರು ತನ್ನಲ್ಲಿಂದ ರಾಜದರಬಾರಕ್ಕೆ
ದಮೇಲೆ ಕೂಡ ಅವನು ಪ್ರತಿಯೊಂದು ವಿಷಯದಲ್ಲಿಯೂ ಅವರ
ಹೆಯನ್ನು ಕೇಳದೆ ಮುಂದಿನ ಹೆಜ್ಜೆಯನ್ನು ಇಡುತ್ತಿರಲಿಲ್ಲ. ರಾಯರು
ವಾಡಕ್ಕೆ ಹೋದನಂತರ ಖವಾಸಖಾನನು ಹಲವಾರು ಸಲ ಹೋಗಿ ಅವರನ್ನು
ು ಬಂದಿದ್ದನು. ಈಗ ಅವರು ತಿರುಗಿ ವಿಜಾಪುರಕ್ಕೆ ಬರುತ್ತಾರೆ ಎಂದು ತಿಳಿದಾಗ
ದವರಿಗಿಂತ ಮೊದಲು ಸೇವಕರನ್ನು ಪಲ್ಲಕ್ಕಿಗಳನ್ನು ತೆಗೆದುಕೊಂಡು ಸಾರವಾಡಕ್ಕೆ
ರನ್ನು ಕರೆಯಲು ಹೋದನು. ಆದರೆ ರಾಯರಿಗೆ ಆ ವೈಭವವೆಲ್ಲ ಬೇಕಾಗಿರಲಿಲ್ಲ
ನ ಪ್ರೀತಿ ವಿಶ್ವಾಸಗಳಿಗೆ ಸಸ್ಮಿತರಾದರು. ಅವನ ಸೇವೆಯನ್ನು ಒಪ್ಪಲಿಲ್ಲ. ಕಾಲು
ಗೆಯಲ್ಲಿ ವಿಜಾಪುರಕ್ಕೆ ಬರುವುದಾಗಿ ತಿಳಿಸಿದರು. ಹಾಗೂ ಅಲ್ಲಿ ತಾವು
ವಾಸರಂತೆ ಭಿಕ್ಷೆ ಬೇಡಿ ಉಂಬುವುದಾಗಿ ಹೇಳಿದರು. ಅವರಿಗೆ ದ್ರವ್ಯ-ಧಾನ್ಯ
ನೆ- ಮಠಗಳು ಬೇಕಾಗಿರಲಿಲ್ಲ. ಖವಾಸಖಾನನು ಪರಿ ಪರಿಯಿಂದ
ಿಕೊಂಡರೂ ಮಹಿಪತಿರಾಯರು ತಮ್ಮ ದೃಢ ನಿರ್ಧಾರವನ್ನು ಬದಲಿಸಲಿಲ್ಲ.
ಾಸಖಾನನ ಮನಸ್ಸಿಗೆ ತುಂಬ ನೋವಾಯಿತು. ಕೊನೆಗೆ ಒಂದೇ ಒಂದು
ಯನ್ನು ಮಾಡಬೇಕೆಂದು ಕೇಳಿಕೊಂಡನು. 'ವಿಜಾಪುರದಲ್ಲಿ ಇರಲು
ಸ್ಥಾನಕ್ಕಾಗಿ ತನ್ನ ಸೇವೆಯನ್ನು ಸ್ವೀಕರಿಸಬೇಕು' ಎಂದು ಬಿನ್ನವಿಸಿಕೊಂಡಾ
ುರು ಆಗಲಿ ಎಂದು ಹೇಳಿ ತಾವು ಇರಬಯಸುವ ಸ್ಥಳ ಬಯಲ

ಗುಡಿಸಲಾಗಿರಬೇಕು. ಹತ್ತಿರದಲ್ಲಿ ಒಂದು ಬಾವಿ, ಇಷ್ಟನ್ನು ಬಿಟ್ಟು ಬೇರೆ ಯಾ
ಸೌಲಭ್ಯಗಳೂ ಅಲ್ಲಿ ಇರಬಾರದು ಎಂದು ಹೇಳಿದರು. ಮುಂದಾಗಿ ಹೋಗಿ ಅವ
ಇರಲು ಯೋಗ್ಯವಾದ ಸ್ಥಳದ ವ್ಯವಸ್ಥೆಯನ್ನು ಮಾಡಿದನು.

ಒಂದು ಶುಭದಿನದಂದು ರಾಯರು ತಮ್ಮ ಮಡದಿಯನ್ನು ಕರೆದುಕೊಂ
ಗುರುಗಳನ್ನು ಕಂಡು ಅವರ ಚರಣಗಳಿಗೆ ವಂದಿಸಿ ಆಶೀರ್ವಾದ ಪಡೆದು ವಿಜಾಪು
ಹೊರಟರು. ಮಹಿಪತಿ ರಾಯರಿಗೆ ಗುರುಗಳ ಸಾನ್ನಿಧ್ಯವನ್ನು ಬಿಡಲು ಮನ
ಇರಲಿಲ್ಲ. ಆದರೆ ಗುರುಗಳ ಅಪ್ಪಣೆಯಾಗಿದೆ. ಗುರುಗಳು ತಮ್ಮನ್ನು ಇಲ್ಲಿಂದ ಯ
ಕದಲಿಸುತ್ತಿದ್ದಾರೆಂಬುದು ಅವರಿಗೆ ಗೊತ್ತಿಲ್ಲ. ಆದರೂ ಹೋಗಬೇಕು. ಅ
ತಾಯಿ ತಂದೆ ಎನ್ನುತ್ತ ಮತ್ತೆ ಮತ್ತೆ ನಮಸ್ಕರಿಸಿ ಗುರುಗಳನ್ನು ಸ್ತುತಿಸಿದರು.

> ''ಶ್ರೀ ಗುರುವೆ ತಂದೆನಗೆ ನೀನು।
> ತಾಯಿ ತಂದೆನಗೆ ನೀ ಬಾಹ್ಯಾಂತ್ರ ಪರಿಪೂರ್ಣ।
> ಸಾಯೋಜ್ಯ ಸದ್ಗುರುನಾಥ ನೀನೆ।
> ಬಾಲಕನ ಮ್ಯಾಲಿ ದಯಮಾಡಿ ಪಾಲಿಸುತೀಹ್ಯ।
> ಕುಲಕೋಟಿ ಬಂಧು ಬಳಗ ನೀನೆ।
> ಸಲಹುವ ಮಹಿಪತಿ ಸ್ವಾಮಿ ನೀನೆ।।''

ಎಂದು ಸ್ತುತಿಸಿ ಅಂತಃಕರಣಪೂರಿತ ಅಶ್ರುಗಳಿಂದ ಗುರುಗಳ ಚರಣಾರವಿಂದಗ
ತೊಳೆದು ಬೀಳ್ಕೊಂಡರು. ಗುರುಗಳಾದ ಭಾಸ್ಕರ ಸ್ವಾಮಿಗಳು ತಮ್ಮ ಪ್ರಿಯ ಶಿ
ತಲೆ -ಬೆನ್ನುಗಳ ಮೇಲೆ ಕೈ ಆಡಿಸಿ ಹರಸುತ್ತ, ''ನಿನ್ನಿಂದ ಇನ್ನೂ ಬಹ
ಕೆಲಸಗಳು ಆಗಬೇಕಿವೆ, ಧರ್ಮ ಉಳಿಯಬೇಕಾಗಿದೆ - ಹೋಗಿ ಬಾ'', ''ನಿ
ಭಗವಂತನ ಭಕ್ತಿಯು ಜನರಲ್ಲಿ ಬೆಳೆಯಬೇಕು. - ಊರಿಗೆ ಹೋಗಿ ಸಾಧನ
ನಿರತನಾಗು'' ಎಂದು ಮುಂತಾಗಿ ಹರಿಸಿ ಶಿಷ್ಯನನ್ನು ಬೀಳ್ಕೊಟ್ಟರು. ಇದನ್ನೇ
ಮರಿಮಗ ಶ್ರೀಪತಿ ತನುಜರು ತಮ್ಮ ಆದಿ ಕಿರುಚರಿತ್ರೆಯಲ್ಲಿ, ''ಧರೆಯೊಳು
ಕೀರ್ತಿಯು ಬಹು ವಿಸ್ತಾರಾ। ಆಗುದು ನಿರ್ಧಾರಾ।।'' ಎಂದು ಹೇಳಿದ
//೪೫// ಹತ್ತಿರದಲ್ಲಿ ಅವನತ ಮುಖಿಳಾಗಿ ನಿಂತಿದ್ದ ತಿಮ್ಮವ್ವನನ್ನು
ಗುರುಗಳು ಅನುಗ್ರಹ ಮಾಡುತ್ತ,

> 'ನಿಶ್ಚಿಂತಳಾಗಿರು ಮಗು, ಸಾಕ್ಷಾತ್ ಪರಮಾತ್ಮನ ದರ್ಶನವನ
> ಪಡೆದ ಭಾಗ್ಯ ನಿನ್ನ ಗಂಡನದಾಗಿದೆ. ಈ ಮಹಾವೃಕ್ಷವನ್ನು ಆಶ್ರ
> ಕೊಂಡು ಅವನಿಗೆ ಸಹಾಯಕಳಾಗು, ನಿನ್ನ ಮನದ ಇಚ್ಛೆ
> ಪೂರ್ತಿಯಾಗುತ್ತದೆ. ನಿನಗೆ ಜೋಡು ಫಲಗಳಿವೆ''.

ಮುಂತಾಗಿ ಹರಿಸಿದರು. ತಿಮ್ಮವ್ವ ಭಾವಪೂರ್ಣಳಾಗಿ ಗುರುಗಳ ಚರಣ
ಯನ್ನು ತನ್ನ ಕಣ್ಣಿಗೆ ಒತ್ತಿಕೊಂಡು ಗಂಡನ ಜೊತೆಗೆ ಹೊರಟಳು.

ಮಹಿಪತಿರಾಯರು ಗುರುಗಳ ಆಜ್ಞೆಯಂತೆ ಸಾರವಾಡದಿಂದ ಹೊರಟು
ರಕ್ಕೆ ಬಂದು ನಲೆಸಿದರು. ತಮ್ಮ ಸಾಧನವನ್ನು ಮುಂದುವರೆಸಿದರು. ಶಿಷ್ಯರಿಗೆ
ಶಾಸ್ತ್ರವನ್ನು ಕಲಿಸುವಲ್ಲಿ ಮಾರ್ಗದರ್ಶಕರಾದರು. ಜನಸಾಮಾನ್ಯರಲ್ಲಿ
ತನ ಕುರಿತಾಗಿ ಭಕ್ತಿಯನ್ನು ಬೆಳೆಸುವಲ್ಲಿ ನಿರತರಾದರು. ಅವರು ಈಗ
ಅಬ್ಬರ ಸೇವಕರಾಗಲಿ, ಸೊತ್ತಾಗಲೀ ಆಗಿರಲಿಲ್ಲ. ಅವರು ಸಮಾಜದ,
ಸನಿಕರ ಸೊತ್ತಾದರು. ಎಲ್ಲರೂ ಅವರನ್ನು ಕಾಣುವ, ದರ್ಶನವನ್ನು
ುವ ಹಂಬಲದಿಂದ ದೂರದ ಊರುಗಳಿಂದ ಬರಹತ್ತಿದರು. ಅವರ ಕರುಣ
ಬೀಳಲು ಹಾತೊರೆಯುತ್ತಿದ್ದರು. ಅವರ ಮಾರ್ಗದರ್ಶನದಿಂದ ತಮ್ಮ
ವನ್ನು ಸಾಫಲ್ಯಗೊಳಿಸುವದಕ್ಕೆ ಪ್ರಯತ್ನಿಸುತ್ತಿದ್ದರು. ಹೀಗೆ ಪಂಡಿತರು,
ರು, ಸಂತರು ಸಾಧುಗಳು ಸರದಾರರು ಸೇನಾಪತಿಗಳು ಎಲ್ಲರೂ ಅವರ
ಹಿಂಡುಗಟ್ಟಲೆ ಬರುತ್ತಿದ್ದರು. ತಮ್ಮ ಬದುಕನ್ನು ಹಸನು ಗೊಳಿಸುವ
ವನ್ನು ಅವರಿಂದ ಕೇಳಿ ತಿಳಿಯಲು ಪ್ರಯತ್ನಿಸುತ್ತಿದ್ದರು. ಅದು
ಲ್ಲವಾದರೆ ಅವರ ಒಂದೇ, ಒಂದು ಕರುಣಾಪೂರ್ಣ ದೃಷ್ಟಿಗೆ ಶತಪ್ರಯತ್ನ
ತ್ತಿದ್ದರು. ಪ್ರತಿಯಾಗಿ ಧನ, ದೌಲತ್ತು, ಧಾನ್ಯ -ಆಸ್ತಿ ಏನೆಲ್ಲ ಕೊಡಲು
ಕ್ಕರು. ಆದರೆ,

'ಕೊಟ್ಟರ್ಹಿಡಿಯಲಿಲ್ಲ ಓರ್ವರ ಧನವು। ಪೂರ್ವದ ಸಂಗ್ರಹವು।।
ಮುಟ್ಟಲಲ್ಲೆ ವ್ರಯವಾಗುತಿಹುದು ಧನವು। ಸತಿಸುತ ಪರಿವಾರವು।।
ಬಿಟ್ಟಗಲದೆ ಸೇವೆಯ ಮಾಡುವ ಜನವು। ಭಕ್ತರ ಸಮುದಾಯವು।।
ದಟ್ಟಿಸಿ ಮನೆಯೊಳಗಾಗುದು ಪ್ರತಿದಿನವು। ಮೃಷ್ಟಾನ್ನ ಭೋಜನವು।।

ಅವರ ಮರಿಮಗ ಶ್ರೀಪತಿತನುಜರು ತಮ್ಮ ಮುತ್ತಜ್ಜರ ದಿನಚರಿಯನ್ನು
ತ್ತಾರೆ. ಪ್ರತಿದಿನ ನೂರಾರು ಜನ ಸಂತರಿಗೆ, ಬ್ರಾಹ್ಮಣರಿಗೆ, ಮೃಷ್ಟಾನ್ನ
ನವಾಗುತ್ತಿತ್ತು. ಆದರೆ ಹೇಗೆ ಆಗುತ್ತಿತ್ತು ಎಂಬುದು ಯಾರಿಗೂ
ುತ್ತಿರಲಿಲ್ಲ. ಅಂದಿನ ಖರ್ಚು ಅಂದಿಗೆ ಸರಿಯಾಗುತ್ತಿತ್ತು. ಮರುದಿನದ ಚಿಂತೆ
ರಿಗೂ ಇಲ್ಲ, ಮನೆಯವರಿಗೂ ಇಲ್ಲ. ಬಂದವರಿಗಂತೂ ಇರಲೇ ಇಲ್ಲ!

ಸಾರವಾಡದಿಂದ ವಿಜಾಪುರಕ್ಕೆ ಬಂದು ನೆಲೆಸಿದ ಮೇಲೆ ವರುಷಾರು
ುಗಳಲ್ಲಿ ಅವರಿಗೆ ಪುತ್ರ ಸಂತಾನ ಲಾಭವೂ ಆಯಿತು. ಗೋಕುಲಾಷ್ಟಮಿಯ
ಾಯರ ಹೆಂಡತಿ ತಿಮ್ಮವ್ವ ಅವಳಿ-ಜವಳಿ ಮುದ್ದಾದ ಎರಡು ಗಂಡುಮಕ್ಕಳಿಗೆ
ುತ್ತಳು. ಒಬ್ಬನಿಗೆ ದೇವರಾಯನೆಂದು ಇನ್ನೊಬ್ಬನಿಗೆ ಕೃಷ್ಣರಾಯನೆಂದು
ಟ್ಟರು.//೪೬//

ಾಪುರದಲ್ಲಿ ರಾಜಕೀಯ ಅಸ್ಥಿರತೆ ಸಂಭವಿಸುವವರೆಗೂ ಮಹಿಪತಿರಾಯರು,
ಾಯೇ ಉಳಿದು ತಮ್ಮ ಸಾಧನೆಯಲ್ಲಿ ನಿರತರಾಗಿದ್ದರು. ರಾಜಕಾರಣದ
ವನ್ನು ಅವರು ಆ ಮೊದಲೇ ಕಳಚಿಕೊಂಡಿದ್ದರು. ಜಾತಿ, ಮತ, ಪಂಥಗಳ
ಿಲ್ಲದೆ ಪರಮಾತ್ಮನ ಕುರಿತು ಚಿಂತಿಸುವವರೆಲ್ಲ ಒಂದೇ ಜಾತಿಯವರು.
ಕುಲ ಒಂದು ಎಂಬ ಭಾವನೆಯಿಂದ ಅವರು ಎಲ್ಲರೊಡನೆ
ಕೊಂಡಿದ್ದರು. ಆಧ್ಯಾತ್ಮ ಸಾಧನೆಗೆ, ಚರ್ಚೆಗೆ ಅವರ ಹತ್ತಿರ ಎಲ್ಲ
ರೂ ಬರುತ್ತಿದ್ದರು. ಸೂಫಿ ಸಂತರು, ಅವಧೂತರು, ಶೈವರು
ರಾದಿಯಾಗಿ ಎಲ್ಲ ಮತದವರು, ಕನ್ನಡ, ಮರಾಠಿ, ತೆಲಗು, ದಖಣಿ
ವರು ಅವರ ಹತ್ತಿರ ಬರುತ್ತಿದ್ದರು. ಅಂತೆಯೇ ಅವರು ಹೇಳುವಂತೆ,
ಮಹೋ ಭಾಯಿ ಸಕುನಾ ಚಾರೋ
ತೆಲುಗು ಕನ್ನಡ ತುರುಕಾರೇ ಒಂದೇಸುಖ।।
ತಿ, ಅಂತಿಮ ಗುರಿ ಒಂದೇ, ದಾರಿ ಭಿನ್ನ ಅಷ್ಟೇ ಎಂಬುದು ಅವರ ಸಂದೇಶ.

.ಶ. ೧೬೮೬ ರಲ್ಲಿ ಔರಂಗಜೇಬನು ವಿಜಾಪುರವನ್ನು ಅಂತಿಮವಾಗಿ
ಸಿಕೊಂಡು ಹೈದರಾಬಾದ ಸುಬೆಗೆ ಸೇರಿಸಿದ. ತಿಂಗಳು ಗಟ್ಟಲೆ ನಡೆದ
ದಲ್ಲಿ ಮಡಿದ ಸಾವಿರಾರು ಯೋಧರು. ಹೊಟ್ಟೆಗಿಲ್ಲದೆ ಮಡಿದ ನಾಗರಿಕರು,
ಂದಿಗೆಯೇ ಬಂದ ಬರಗಾಲ ಹಾಗೂ ಪ್ಲೇಗ ಬೇನೆಗಳಿಂದ ಮಹಿಪತಿರಾಯರು
ರದಲ್ಲಿ ಉಳಿಯುವುದು ಕಷ್ಟವಾಯಿತು. ಆದ್ದರಿಂದ ವಿಜಾಪುರವನ್ನು ಬಿಟ್ಟು
ಗಿ ಜಿಲ್ಲೆಯ ಶಹಪುರಕ್ಕೆ ಹೋಗಿ ನೆಲೆಸಿದರು. ವಿಜಾಪುರದಿಂದ ಪೂರ್ವಕ್ಕೆ
ರು ೧೨೦ ಕಿಲೋಮೀಟರು ಅಂತರದಲ್ಲಿದ್ದ ಶಹಪುರವು ಅಂದಿನ ದಿನಗಳಲ್ಲಿ
ರದ ನಾಯಕನ ಆಳ್ವಿಕೆಯಲ್ಲಿ ಇತ್ತು.

ಶಹಪುರದ ಸಮೀಪದಲ್ಲಿರುವ ಮಂದಾಕಿನಿ ಸರೋವರ, ಆ ಸರೋವರದ
ೆ ಒಂದು ಗುಡ್ಡ. ಆ ಗುಡ್ಡದ ಒಂದು ಗುಹೆಯಲ್ಲಿ ಮಹಿಪತಿರಾಯರು ಮೂರು
ವಾಸಿಸಿದರು. ನಿತ್ಯ ಸರೋವರದಲ್ಲಿ ಮಿಂದು, ಅರ್ಘ್ಯವನ್ನಿತ್ತು ಅನುಷ್ಠಾನ
ತ್ತಿದ್ದರು. ಮಂದಾಕಿನಿ ಸರೋವರದ ದಂಡೆಯ ಮೇಲೆ ಪ್ರಾಣದೇವರ
ಸ್ಥಾಪನೆಯನ್ನು ಮಾಡಿದರು. ಮುಂದಿನ ದಿನಗಳಲ್ಲಿ ಮಹಿಪತಿರಾಯರು
ಪುರ ಜಿಲ್ಲೆಯ ಕಾಖಂಡಕಿಯಲ್ಲಿ ನೆಲೆಸಿ ಪ್ರಸಿದ್ಧರಾದ್ದರಿಂದ, ಶಹಪೂರದ
ಾಕಿನಿ ಸರೋವರದ ದಂಡೆಯ ಮೇಲೆ ಅವರು ಪ್ರತಿಷ್ಠಾಪಿಸಿದ ಹನುಮಂತ
ಗೆ ಇಂದಿಗೂ 'ಕಾಖಂಡಕೀಶ' ಎಂದು ಕರೆಯುತ್ತಾರೆ. ಅವರು ನಿತ್ಯ ಅನುಷ್ಠಾನ
ುತ್ತಿದ್ದ ಸರೋವರದ ದಂಡೆಯ ಗುಡ್ಡಕ್ಕೆ 'ಮಹಿಪತಿರಾಯರ ದಿನ್ನೆ' ಎಂದು
ುವ ರೂಢಿಯೂ ಇದೆ.

ಶಹಪುರದಲ್ಲಿ ಮಹಿಪತಿರಾಯರು ಮೂರು ವರುಷ, ತಪಸ್ಸು-ಸಾಧನೆ ಮರಳಿ ತಮ್ಮ ಊರು ವಿಜಾಪುರಕ್ಕೆ ಬಂದರು //೪೭// ಆದರೆ ಈ ವ ವರುಷಗಳಲ್ಲಿ ವಿಜಾಪುರವು ಯುದ್ಧ, ಬರ ಹಾಗೂ ಪ್ಲೇಗ ಬೇನೆಗಳಿಂದ ಲಕ್ಷ ಜನರನ್ನು ಕಳೆದುಕೊಂಡು ಹಾಳು ಸುರಿಯುತ್ತಿತ್ತು. ಅಂಥಲ್ಲಿಯೇ ಉಳಿದುಕೊ ವ್ಯವಸ್ಥೆಯನ್ನು ಮಾಡುವಷ್ಟರಲ್ಲಿ ಕಾಖಂಡಕಿ ಗ್ರಾಮದ ಕರ ಮಹಿಪತಿರಾಯರನ್ನು ಕಂಡು ತಮ್ಮಲ್ಲಿ ಬಂದು ನೆಲೆಸಲು ವಿನಂತಿಸಿಕೊಂ //೪೮// ಅವರ ವಿನಂತಿಯನ್ನು ಮಾನ್ಯ ಮಾಡಿ ರಾಯರು ಕಾಖಂಡಕಿಗೆ ಕರಣಿಕರು ಕೊಟ್ಟ ಮನೆಯಲ್ಲಿ ಬಿಡಾರ ಮಾಡಿದರು. ಆದರೆ ನಿತ್ಯಾನುಷ್ಠಾನ ಮನೆಯು ಅನುಕೂಲವಾಗಿರಲಿಲ್ಲ. ಸೂಕ್ತ ಸ್ಥಳವನ್ನು ಹುಡುಕುತ್ತಿದ್ದಾಗ ಗ್ರಾ ಪಟೇಲರು ಬಂದು ಊರ ಮುಂದಿನ ತಮ್ಮ ತೋಟದಲ್ಲಿ ಬೇಕಿದ್ದರೆ ಅನುಷ್ಠಾನಕ್ಕೆ ತಕ್ಕ ಸ್ಥಳವನ್ನು ಆರಿಸಬೇಕೆಂದು ಸೂಚಿಸಿದರು. ರಾ ತೋಟದಲ್ಲಿಯ ಒಂದು ಶಮೀ ವೃಕ್ಷದ ಅಡಿಭಾಗವನ್ನು ತಮ್ಮ ಅನುಷ್ಠಾ ಗೊತ್ತುಪಡಿಸಿದರು. ಪಟೇಲರಿಗೆ ಸಂತೋಷವಾಯಿತು. ಅಂದಿನಿಂದ ರಾ ಗೌಡರ ತೋಟದ ಶಮೀವೃಕ್ಷದ ಅಡಿಯಲ್ಲಿಯೇ ದಿನದ ಬಹುಭಾ ಕಳೆಯಹತ್ತಿದರು.

ಇಬ್ಬರು ಮಕ್ಕಳಲ್ಲಿ ದೇವರಾಯನು ಕ್ಷಾತ್ರತೇಜದಿಂದ ಜಾಲವ ದೇಸಗತಿಯನ್ನು ಸಂಪಾದಿಸಿ ಅಲ್ಲಿಯೇ ಉಳಿದನು. ಕೃಷ್ಣರಾಯರು ತ ದಾರಿಯನ್ನು ತುಳಿದು ಆಧ್ಯಾತ್ಮ ಚಿಂತನೆ ಮಾಡುತ್ತ ಕಾಖಂಡಕಿಯಲ್ಲಿಯೇ ತಂದೆ ತಾಯಿಗಳ ಸೇವೆಯನ್ನು ಮಾಡುತ್ತಿದ್ದರು.

ಮಹಿಪತಿರಾಯರು ಕಾಖಂಡಕಿಯಲ್ಲಿ ಸುಮಾರು ಹತ್ತು ಹದಿನೈದು ಕಾಲ ಇದ್ದರೆನ್ನಬಹುದು. ಆ ಹೊತ್ತಿಗೆ ಅವರ ಕೀರ್ತಿ ಸುತ್ತಲೆಲ್ಲ ಪಸರಿಸಿತ್ತು ಚರಿತ್ರೆಯಲ್ಲಿ, ಸಂಸ್ಕೃತ ಸ್ತೋತ್ರದಲ್ಲಿ ಹಾಗು ಪರಂಪರೆಯಿಂದ ಕೇಳಿ ಕಥೆಗಳಲ್ಲಿ ಅವರು ಮಾಡಿದರೆನ್ನಲಾದ ಅನೇಕ ಪವಾಡಗಳನ್ನು ಹೇಳುತ್ತಾರೆ ಮಹಿಪತಿರಾಯರು ಸ್ವತಃ ಪವಾಡಗಳಿಗೆ ವಿರೋಧವಾಗಿದ್ದರು. ಅಂತೆಯೇ ಅತ್ತಿಗೆ ತುಕ್ಕವ್ವ ಕಾಡಿ ಬೇಡಿ ಒಂದು ಪವಾಡ ಮಾಡಿತೊ ಕೇಳಿಕೊಂಡಳೆಂದೂ, ಮರೆಡೆಪ್ಪನ ಸೊಸೆಯನ್ನು ಬದುಕಿಸಿದ ಪವಾಡವನ್ನು ಚರಿತ್ರೆಯಲ್ಲಿ ಅವರ ಮರಿಮಗ ಹೇಳುತ್ತಾರೆ. //೪೯// ಅದೇನಿದ್ದರೂ ಪ್ರಸಿದ್ಧಿ ಮಾತ್ರ ಸುತ್ತಲಿನ ಪರಿಸರದಲ್ಲಿ ಸಾಕಷ್ಟಾಗಿತೆಂದು ಅವರ ಮೊಮ್ಮಕ್ಕಳ ಮತ್ತು ಇತರರ ಕೃತಿಗಳಿಂದ ಊಹಿಸಬಹುದಾಗಿದೆ. ನೂರಾರು ಜನರು ಅವರನ್ನು ಕಾಣಲು ಬರುತ್ತಿದ್ದರು. ದಿನದಿಂದ ದಿನಕ್ಕೆ ಭಕ್ತ ವರ್ಧಿಸುತ್ತಿತ್ತು. ಬಂದ ಜನರಿಗೆಲ್ಲ ಮೃಷ್ಟಾನ್ನ ಭೋಜನ, ಅತಿಥಿ ಸತ್ಕಾರ ಎ

ನಡೆಯುತ್ತಿತ್ತು. 'ಕಾಖಂಡಕಿಯ ದೊನ್ನೆಯಲ್ಲಿ ತುಪ್ಪ'ದ ಪ್ರಸಿದ್ಧಿಯನ್ನು ಈಗ ಹಳೆಯ ತಲೆಮಾರಿನ ಜನ ಹೇಳುತ್ತಾರೆ. ಮಹಿಪತಿರಾಯರು ಪ್ರತಿವ ನವರಾತ್ರಿಯ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಉತ್ಸ ವರ್ಣನೆಯನ್ನು ಕಣ್ಣಾರೆ ಕಂಡ ಅವರ ಮಗ ಕೃಷ್ಣರಾಯರು ತಮ್ಮ ಒ ಕೀರ್ತನೆಯಲ್ಲಿ ಸೊಗಸಾಗಿ ಹೇಳಿದ್ದಾರೆ.

'ಏನೆಂದು ಉಸುರುವೆ ಈ ನವರಾತ್ರಿಯಾ।

ಸ್ವಾನಂದ ಸುಖಮಯ ಶ್ರೀಮಹಿಪತಿಚರ್ಯಾ।।

ಎಂದು ಪ್ರಾರಂಭವಾಗುವ ೧೧ ನುಡಿಗಳ ಕೀರ್ತನೆಯಲ್ಲಿ ಅಶ್ವಿನ ಪ್ರತಿಪದೆಯಿಂದ ಮಹಾನವಮಿ – ದಸರೆಯವರೆಗೆ ನಡೆದ ಉತ್ಸವದ ವರ್ಣನೆ ಇ //೫

ನವರಾತ್ರಿ ಇನ್ನೂ ಹತ್ತೆಂಟು ದಿನಗಳಿರುವಾಗಲೇ ಸಿದ್ಧತೆ ಪ್ರಾರಂಭವಾಗುತ್ತಿ ಊರ ಜನರೆಲ್ಲ ಕೂಡಿಕೊಂಡು ರಾಯರ ಮನೆಯನ್ನು ಶೃಂಗಾರ ಮಾಡುತ್ತಿದ್ದ ಬಾಗಿಲು ಗೋಡೆಗಳಿಗೆ ಬಣ್ಣ ಬಳಿದು ಚಿತ್ರ ಬಿಡಿಸುತ್ತಿದ್ದರು. ಮಾವಿನ ತಳಿ ಕಟ್ಟುತ್ತಿದ್ದರು. ದೇವರ ಜಗಲಿಯ ಸುತ್ತಲೂ ಬಾಳೆಯ ಕಂಭಗಳನ್ನು ಮಂಟಪವನ್ನು ತರಗು –ತೆಂಗು ಉತ್ತತ್ತಿ ಬಹು ಫಲಗಳಿಂದ ಶೃಂಗರಿಸುತ್ತಿದ್ದ

ಸಡಗರದಿಂದ ಅಡುಗೆ ಮಾಡಲು ಕಡಲಿ, ಅಕ್ಕಿ–ಗೋಧಿ ಬೆಲ್ಲ ಸಕ್ಕರೆಯ ಕೊಡ–ಕೊಡ ತುಪ್ಪತಂದು ಉಗ್ರಾಣದಲ್ಲಿ ಸಂಗ್ರಹಿಸುತ್ತಿದ್ದರು. ದೃಢ ಭಕ್ತಿ ಹಲವಾರು ಭಕ್ತರು ಸದಾ ಸೇವೆಗೆ ನಿಂತಿರುತ್ತಿದ್ದರು. ಈ ಹಬ್ಬವನ್ನು ನೋ ಶರಣರು, ಸಂತರು ಸಾಮಾನ್ಯರು ನಾಲ್ಕೂ ದಿಕ್ಕುಗಳಿಂದ ಬಂದಿರುತ್ತಿದ್ದರು.

ಮೊದಲನೆಯ ದಿನ ಉದಯದಲ್ಲಿ ಸದ್ಗುರುನಾಥನು ಎದ್ದು ಮಂಗಳಸ್ನಾನ ವಿದಿತ ಹಂಸಧ್ಯಾನ, ಜಪಾನುಷ್ಠಾನಗಳನ್ನು ಮಾಡಿ ಪೂಜೆಗೆ ಕುಳಿತುಕೊಳ್ಳುತ್ತಿ ಬಂಗಾರದ ಎಲೆಗಳನ್ನು ಹಚ್ಚಿದ ದೇವರ ಮಣೆ, ಅದರ ಹಿಂದೆ ಬೆಳ್ಳಿಯ ಪ್ರಭಾವಳಿ, ಅಲ್ಲಿ ಬಹು ವಿಸ್ತಾರವಾದ ಚಿತ್ರಗಳು. ಎಡ ಬಲದಲ್ಲಿ ಹೊನ್ನಕೇತ ಧ್ವಜಗಳು. ಮಧ್ಯ ಸಂಪುಟದಲ್ಲಿ 'ಪೊಡವೀಶ' ಕುಳಿತಿರುತ್ತಿದ್ದ. ಆ ಶ್ರೀಹ ಪೂಜೆಯ ಸಂಭ್ರಮವನ್ನು ಹೇಳಲು ಸಾಧ್ಯವಿಲ್ಲವೆಂದು ಹೇಳುತ್ತ, ಪೂ ವಿಸ್ತಾರವನ್ನು ಮೂರು ನುಡಿಗಳಲ್ಲಿ ಹೇಳುತ್ತಾರೆ. ಅನಂತರ ಗುರುಪೂಜೆ.

'ತರುವಾಯ ಮಹಾಗುರು ತಂದಿಗೆ ಶರಣರು।

ಮೆರೆವ ಷೋಡಶದಿಂದಾ ಮಾಡಿ ಪೂಜೆಯ ಛಂದಾ।

ಹರಿತೀರ್ಥ ಕೊಳ್ಳಲು ಹರುಷದಿ ಜನಗಳು।

ಪೊರಗ ಸತ್ಕಾರವ ಪಡದಿಹ ಭೂದೇವ।
ರರು ವೇದ ಘೋಷವ ಮಾಡುತ ಭಾಷವ।
ಅರಿತು ಸಕಲರಿಗೆ ಯಡೆ ಮಾಡಿಕೊಳ್ಳಿರೆ।
ಪರಮಾನ್ನ ಭಕ್ಷಗಳು ಶಾಲ್ಯೋದನ।
ಪರಿ ಪರಿ ಶಾಖಗಳು ಸೂಪ ಘೃತ।
ನೆರೆ ಪಾಲ್ಮೊಸರುಗಳು ಅಲ್ಲಿಗಲ್ಲಿ
ಗಿರಿಸಿಹ ದೀಪಗಳು।। ನಮ್ಮಯ್ಯನಾ ।।೯।।

ಒಂಭತ್ತು ದಿನ ನಡೆವ ಉತ್ಸವ ಮಹಾನವಮಿ ಹಾಗೂ ವಿಜಯ
ಯಂದು ತನ್ನ ಪರಾಕಾಷ್ಠೆಯನ್ನು ಮುಟ್ಟುತ್ತಿತ್ತು.

ಣೆಯ ಆರ್ಕಿವ್ಜದಲ್ಲಿ ದೊರೆತ ಒಂದು ಕಾಗದದ ಪ್ರಕಾರ 'ಶ್ರೀಮಹಿಪತಿ
: ಸಂಸ್ಥಾನ' ಎಂದು ಕರೆದಿದೆ. ಖವಾಸಖಾನ ದೇಶಮುಖನ ಸಮಸ್ತ
ಯೂ ಈ ಸಂಸ್ಥಾನಕ್ಕೆ ಸೇರಿತ್ತು. ಖವಾಸಖಾನನ ಭೂಮಿಗಳು ಮುಳವಾಡ,
ಡ, ಮಸೂತಿ ಹಾಗೂ ಹೊನಗನಹಳ್ಳಿಗಳಿಲ್ಲಿಯ ಆಸ್ತಿಯೆಲ್ಲ ಶ್ರೀ
ತಿಸ್ವಾಮಿ ಸಂಸ್ಥಾನಕ್ಕೆ ಸೇರಿದ್ದವುಗಳೆಂದು ಈ ಕಾಗದ ಹೇಳುತ್ತದೆ. //೫೧//

ಕ್ಕಳು ಬೆಳೆದಂತೆ ಅವರಲ್ಲಿ ಕೃಷ್ಣರಾಯರು ತಂದೆಯ ದಾರಿಯಲ್ಲಿ ನಡೆದು
ಸಾಧನೆ ಮಾಡಿ - ಹರಿದಾಸರಾಗಿ ಅನೇಕ ಕೃತಿಗಳನ್ನು ರಚಿಸಿದರು.
ಾದಿಯ ದೇಸಗತಿಯನ್ನು ಸಂಪಾದಿಸಿದ ದೇವರಾಯರು ಡೋಣಿ -ಶಿವಾಜಿ
ಪ್ರಖ್ಯಾತರಾದರು. ಉಭಯ ಮನೆತನಗಳು ಇಂದಿಗೂ ಉಳಿದುಕೊಂಡು
.//೫೨// ಕಾಖಂಡಕಿ, ಹರಿದಾಸ, ಜಾಲವಾದಿ, ಕೊಲ್ಹಾರ, ಇತ್ಯಾದಿ ಅಡ್ಡ
ಗಳನ್ನು ಇಟ್ಟುಕೊಂಡಿದ್ದಾರೆ.

ಮಹಿಪತಿರಾಯರು ಕ್ರಿಶ. ಸು. ೧೭೦೫ ರಲ್ಲಿ ಕಾರ್ತೀಕ ಮಾಸದ
ಾಸ್ಯೆಯಂದು ಕೃಷ್ಣೆಯ ದಡದ ಕೊಲ್ಹಾರ ಗ್ರಾಮದಲ್ಲಿ
ಾದರು.//೫೩//

## ವೃಂದಾವನಸ್ಥ ರಾಯರು

ಮಹಿಪತಿರಾಯರು ಕೊನೆಯ ಉಸಿರನ್ನು ಎಳೆದದ್ದು ಕೃಷ್ಣಾನದಿಯ ದಂಡೆಯ
ನ ಕೊಲ್ಹಾರಗ್ರಾಮದಲ್ಲಿ ಎಂದು ಪರಂಪರೆಯಿಂದ ಹೇಳಿಕೊಳ್ಳುತ್ತ
ಸ್ಥಾರೆ. ಅವರ ಪಾರ್ಥಿವ ಶರೀರವನ್ನು ದಹನ ಮಾಡಿದ ಸ್ಥಳ ಎಂದು
ಸುವ ಸ್ಥಳದಲ್ಲಿ ಒಂದು ವೃಂದಾವನವನ್ನು ಕಟ್ಟಿದ್ದಾರೆ. ಆದರೆ ಸಂಪ್ರದಾಯದ
ಗೃಹಸ್ಥರಿಗೆ ವೃಂದಾವನವನ್ನು ಕಟ್ಟಿದ ಉಲ್ಲೇಖ ಎಲ್ಲಿಯೂ

ದೊರೆಯುವುದಿಲ್ಲ. ಅದರಲ್ಲೂ ಮಾಧ್ವ ವೈಷ್ಣವರಲ್ಲಿ ಗೃಹಸ್ಥರಿಗೆ ವೃ
ನಿಷೇಧವಿದೆ. ಹಿರಿಯರಿಂದ ಕೇಳಿಬಂದ ವಿಷಯ ಹಾಗೂ ಇಂದು ಕಾಖ
ಹರಿದಾಸರು ನಂಬಿರುವಂತೆ ಮಹಿಪತಿರಾಯರು ಸಂನ್ಯಾಸಿಗಳಲ್ಲ. ಅವರು
ಜೀವನವನ್ನು ನಡೆಸಿ, ಗೃಹಸ್ಥರಾಗಿಯೇ ಕಾಲವಾದರು. ಅವರ ನೆನಪಿನೀ
ಪೂಜೆಗೊಳ್ಳುತ್ತಿರುವುದು ಅವರ ವೃಂದಾವನವಲ್ಲ! ತುಳಸಿ ವೃಂದಾವನ
ಹೇಳುತ್ತಾರೆ.!! ಇದನ್ನು ನಂಬುವದು ತುಸು ಕಷ್ಟವೆನಿಸುತ್ತದೆ. ತುಳಸಿ ವೃಂ
ಸಾಲಂಕೃತ ಪೂಜೆ, ಮುದ್ರಾಧಾರಣೆ, ತುಳಸೀ ಮಾಲೆ ಅಪರೂ
ಹೇಳಬಹುದು.

ಹೆಸರಾಂತ ಗೃಹಸ್ಥರು ಕಾಲವಾದಾಗ ಅವರ ನೆನೆಪಿಗೆಂದು ಅವರು
ವಸ್ತುಗಳನ್ನು, ಅವರು ವಾಸಿಸುತ್ತಿದ್ದ ಸ್ಥಳವನ್ನು, ವಿಶೇಷವಾಗಿ ತಮ್ಮ ಅನ
ಬಳಸುವ ಸ್ಥಳವನ್ನು ಸ್ಮಾರಕವಾಗಿ ಉಳಿಸಿಕೊಂಡು ಬಂದುದನ್ನು ಕಾ
ಉಳಿದ ಹರಿದಾಸರ ಕುರಿತು ನೋಡಿದಾಗ ನಾಡಿನ ಖ್ಯಾತ ಹರಿದಾಸರಾದ
ದಾಸರಿಗೆ ಹಂಪೆಯಲ್ಲಿ ಪುರಂದರ ಮಂಟಪವಿದ್ದರೆ, ಪಂಢರಪುರದಲ್ಲಿ
ಕಂಭವನ್ನು ತೋರಿಸುತ್ತಾರೆ. ಪ್ರಸನ್ನ ವೆಂಕಟಾದಾಸರಿಗೆ ಬಾದಾಮಿಯಲ್ಲಿ
ಕುಳಿತುಕೊಳ್ಳುವ ಕಟ್ಟೆ ಇದೆ. ಅವರು ಉಪಯೋಗಿಸಿದ ತಾಳ ತಂಬೂ
ಪೂಜಿಸಿದ ದೇವರುಗಳನ್ನು ಬಾಗಲಕೋಟೆಯ ಅವರ ಮನೆಯಲ್ಲಿ ತೋರಿ
ವಿಜಯದಾಸರ ಕುರಿತು ಅವರ ಹುಟ್ಟೂರಾದ ಚೀಕಲಪರಿವೆಯಲ್ಲಿ
ಅನುಷ್ಠಾನಕ್ಕೆ ಕುಳಿತುಕೊಳ್ಳುತ್ತಿದ್ದ ಅಶ್ವತ್ಥ ವೃಕ್ಷದ ಕಟ್ಟೆಯನ್ನು,
ವಾಸಿಸುತ್ತಿದ್ದ ಮನೆಯನ್ನು ಅಲ್ಲಿ ಅವರು ಕಾಶಿಯಿಂದ ಹೊತ್ತುತಂದ ಸಾ
ತೋರಿಸುತ್ತಾರೆ. ಅದರಂತೆ ಜಗನ್ನಾಥದಾಸರಿಗೆ, ಅವರು ಕುಳಿತುಕೊಳ
ಕಂಭಕ್ಕೆ ಪೂಜೆ ಇದೆ. ಹಿರೇಮಣ್ಣೂರಿನಲ್ಲೂ ಕೃಷ್ಣದ್ವೈಪಾಯನರ ಕಂ
ಸ್ಮಾರಕಗಳಾಗಿವೆಯೇ ಹೊರತು ಎಲ್ಲಿಯೂ ವೃಂದಾವನವನ್ನು ಕಟ್ಟಿ
ಸಂಪ್ರದಾಯವಿಲ್ಲ. ಇವರೆಲ್ಲ ಗೃಹಸ್ಥರಾಗಿದ್ದುಕೊಂಡು ಹರಿದಾಸರಾ
ಆದರೆ ಮಹಿಪತಿರಾಯರಿಗೆ ಮಾತ್ರ ಕೊಲ್ಹಾರದ ಕೃಷ್ಣೆಯ ದಡದ ಮೆ
ಕಾಖಂಡಕಿಯಲ್ಲಿ ಕೂಡ ವೃಂದಾವನವನ್ನು ಕಟ್ಟಿದ್ದಾರೆ. ಪರಂಪರೆಯಿಂದ ಕೆ
ಕಥೆ ಹೀಗಿದೆ.

''ನನ್ನ ಅವಸಾನಕ್ಕೆ ಇನ್ನು ಕೇವಲ ಏಳುದಿನಗಳು ಮಾತ್ರ ಉಳಿದಿವೆ.
ದರ್ಶನಾರ್ಥವಾಗಿ ಕೊಲ್ಹಾರಕ್ಕೆ ಹೋಗೋಣ ನಡೆ.'' ಎಂದು ಕೃಷ್ಣರ
ಕರೆದುಕೊಂಡು ಕೊಲ್ಹಾರಕ್ಕೆ ಹೋದರು. ಕೃಷ್ಣರಾಯರು ಈ ವಿಷಯ
ಹಿರಿಯ ಸೋದರನಾದ ದೇವರಾಯನಿಗೆ ಹೇಳಿಕಳಿಸಿದರು. ದಾಸರು ಅಲ್ಲಿ
ಗುರುಗಳಾದ ಉಮರ್ಜಿ ಆಚಾರ್ಯರನ್ನು ಕಂಡು, ಅವರ ಆ

ಪಡೆದುಕೊಂಡು ಕೃಷ್ಣಾಸ್ನಾನ ಮಾಡಿ, ನದೀ ತಟಾಕದಲ್ಲಿ ಅನುಷ್ಠಾನಕ್ಕೆ ಕು
ಸರಿಯಾಗಿ ಏಳನೆಯ ದಿನ ಅಂದರೆ ಕಾರ್ತೀಕ ವದ್ಯ ಅಮಾವಾಸ್ಯೆಯ ದಿನ
ಕಾಲವಾದರು.//೫೪//

ವಾಸ್ತವದಲ್ಲಿ ಮಹಿಪತಿರಾಯರಿಗೂ ಉಮರ್ಜಿ ಆಚಾರ್ಯರಿಗೂ ಶಿಷ್ಯ
ಸಂಬಂಧ ಇದ್ದ ಕುರಿತು ಮಹಿಪತಿರಾಯರಾಗಲೀ, ಅವರ ಮಕ್ಕಳು, ಮೊಮ
ಮರಿಮಕ್ಕಳಾಗಲೀ, ಎಲ್ಲಿಯೂ ದಾಖಲಿಸಿಲ್ಲ. ಕೊನೆಯ ಪಕ್ಷ ಗುರುಗಳಿಗೆ
ಮರ್ಯಾದೆಗೆಂದು ಉಮರ್ಜಿ ಆಚಾರ್ಯರ ಹೆಸರನ್ನಾಗಲೀ,
ಮನೆತನದವರನ್ನಾಗಲಿ ತಮ್ಮ ಯಾವ ಒಂದು ಕೃತಿಯಲ್ಲಿ ಕೂಡ ಉಲ್ಲೇ
ಕಂಡು ಬರುವದಿಲ್ಲ. ಆದ್ದರಿಂದ ಮಹಿಪತಿರಾಯರಿಗೂ -ಕೊಲ್ಹಾರಕ್ಕೂ
ಸಂಬಂಧವು ಈ ಗುರು-ಶಿಷ್ಯರದಾಗಿರದೆ ಬೇರೊಂದು ಸಂಬಂಧ ಇರುವ
ಇದೆ. ಕೊಲ್ಹಾರದಲ್ಲಿ ಅವರಿಗೆ ಉಂಬಳಿ ಹಾಕಿಕೊಟ್ಟ ಭೂಮಿಗಳಿದ್ದ
ಮೊದಲು ನೋಡಿದಂತೆ ಖವಾಸಖಾನನ ಅನೇಕ ಭೂಮಿಗಳು 'ಶ್ರೀಮಹಿಪತಿ
ಸಂಸ್ಥಾನ'ಕ್ಕೆ ಸೇರಿದ್ದವು. ಅದರಂತೆ ಇನ್ನುಳಿದ ಸಮಕಾಲೀನ ಹಿಂದು ಸರ
ಮಹಿಪತಿರಾಯರಿಗೆ ಅನೇಕ ದತ್ತಿಗಳನ್ನು ಹಾಕಿಕೊಟ್ಟ ಉಲ್ಲೇ
ದೊರೆಯುತ್ತವೆ. ಅವರುಗಳಲ್ಲಿ ನಿಂಬಾಳದ ನಾಡಗೌಡರು ಪ್ರಮುಖರು.

ನಿಂಬಾಳದ ನಾಡಗೌಡನಿಗೆ ಎರಡನೆಯ ಅಲಿ ಆದಿಲಶಹನು ನಾಡಗೌ
ವತನನ್ನು ಹಾಕಿಕೊಟ್ಟ ಉಲ್ಲೇಖ ದೊರೆಯುತ್ತದೆ.//೫೫// ಮುಂದಿನ ದಿ
ಔರಂಗಜೇಬನು ವಿಜಾಪುರವನ್ನು ವಶಪಡಿಸಿಕೊಂಡ ಅನಂತರ ಕೂಡ
ಆಡಳಿತಕ್ಕೆ ಅನುಕೂಲವಾಗಲು ರಾಜ್ಯವ್ಯವಸ್ಥೆಗೆ ಸ್ಥಳೀಯರೇ ಇ
ಯೋಗ್ಯವೆಂದು ತಿಳಿದುಕೊಂಡು ಅವರನ್ನೇ ಮರುನೇಮಕ ಮಾಡಿದನು./
ಹೀಗೆ ನಿಂಬಾಳದ ನಾಡಗೌಡರಿಗೆ ದೊರೆತ ವತನದಲ್ಲಿ ಅನೇಕ ಹಳ್ಳಿಗ
ಅವುಗಳಲ್ಲಿ ಕೆಲವು ಹಳ್ಳಿಗಳಲ್ಲಿಯ ಭೂಮಿಗಳನ್ನು 'ಶ್ರೀಮಹಿಪ
ಸಂಸ್ಥಾನ'ಕ್ಕೆ ನಿಂಬಾಳದ ನಾಡಗೌಡರು ಉಂಬಳಿ ಹಾಕಿಕೊ
ಕಾಖಂಡಕಿಯಲ್ಲಿ ಇಂದು ಮಹಿಪತಿರಾಯರ ಮನೆತನದವರು ಉಪಭೋ
ಭೂಮಿಗಳೆಲ್ಲ ನಿಂಬಾಳದ ನಾಡಗೌಡರಿಗೆ ಸೇರಿದವುಗಳಾಗಿವೆ.
ಕೊಲ್ಹಾರದಲ್ಲಿಯೂ ಕೆಲವು ಭೂಮಿಗಳನ್ನು ಈ ಸಂಸ್ಥಾನಕ್ಕೆ ಬಿಟ್ಟುಕೊ
ಅವುಗಳಲ್ಲಿ ಕೊಲ್ಹಾರದ ಸರ್ವೇ ನಂಬರು ೧೧೬ ಹಾಗೂ ೧೧೭ ಈ
ಭೂಮಿಗಳನ್ನು ಮಹಿಪತಿರಾಯರ ವಂಶಸ್ಥರು ಇತ್ತೀಚಿನವರೆಗೂ ಉಪ
ಮೊನ್ನೆ-ಮೊನ್ನೆಯಷ್ಟೇ ಮಾರಿದ್ದಾರೆ. ಆದ್ದರಿಂದ ಮಹಿಪತಿರಾಯರು ಕೊ
ಹೋಗುತ್ತಿದ್ದುದು ಬಹುಶಃ ಈ ಭೂಮಿಗಳ ಸಾಗುವಳಿಗಾಗಿ ಎಂದು ಉ

ಯತಿರಾಯರು ಕೊಲ್ಹಾರದಲ್ಲಿಯೇ ನೆಲೆಸಿದರು. ಅವರ ಮನೆತನ ಕೊಲ್ಹಾ
ಅಯ್ಯನವರೆಂದೇ ಹೆಸರಾಗಿದೆ. ಹಾಗೆ ಕೊಲ್ಹಾರಕ್ಕೆ ಹೋದಾಗ ಅಲ್ಲಿಂ
ವಾಸಿಸುತ್ತಿದ್ದ ಪ್ರಕಾಂಡ ಪಂಡಿತರು, ಮಧ್ವಶಾಸ್ತ್ರ ಪ್ರವೀಣರೂ ಆದ ಉಮ
ಪ್ರಲ್ಹಾದಕೃಷ್ಣಾಚಾರ್ಯರನ್ನು ಕಾಣುವ ಸಾಧ್ಯತೆ ಇದೆ. ಸಮಾನ ಮನಸ್ಕರ
ಉಭಯತರು ಆಗೀಗ ಶಾಸ್ತ್ರಗಳನ್ನು ಚರ್ಚಿಸುತ್ತಿರಲೂ ಸಾಧ್ಯವಿದೆ. ಒಂದು
ಹೀಗೆಯೇ ಕೊಲ್ಹಾರಕ್ಕೆ ಹೋದಾಗ ಅವರು ಅಲ್ಲಿಯೇ ಕಾಲವಾಗಿ
ಸಾಧ್ಯತೆಯೂ ಇದೆ.

''ಕೃಷ್ಣರಾಯರೂ ದೇವರಾಯರೂ ಕೂಡಿ ಅವರ ಉತ್ತರ ಕ್ರಿಯೆಗಳ
ನಡೆಸುತ್ತಿರುವಾಗ, ಆರಿಸಿದ ಅಸ್ಥಿಗಳು ನೀರಾಗಿ ಬಿಟ್ಟ ಚಮತ್ಕಾರ ಕಂಡಿತು.
ಕೃಷ್ಣರಾಯರು ಚಿಂತೆ ಮಾಡುತ್ತಿರಲು ಅವರ ಸ್ವಪ್ನದಲ್ಲಿ ಮಹಿಪತಿದಾಸರು ಬಂ
'ಮಗೂ ನೀನೇನೂ ಚಿಂತಿಸಬೇಡ ನನ್ನ ಅಸ್ಥಿಗಳು ಭಾಗೀರಥಿಯಲ್ಲಿ ಲೀನವಾ
ಎಂದು ಹೇಳಿದರು. ಆದರೂ ಲೌಕಿಕ ರೀತಿಯಂತೆ ಕೃಷ್ಣರಾಯ
ಸಮಾಧಾನವಾಗದ್ದನ್ನು ಕಂಡು ಮತ್ತೆ ದಾಸರು ಮುಂದುವರಿಸಿದ
ಗುರುಸಹವಾಸವಿದ್ದುದೇ ಕಾಶಿ. ನನ್ನ ವಿಯೋಗದಿಂದ ನೀನು ಎಳ್ಳಷ್ಟು
ಮಾಡಬೇಡ. ನಾನು ಕಾಖಂಡಕಿಯಲ್ಲಿ ಅನುಷ್ಠಾನ ಮಾತುತ್ತಿದ್ದ ಶಮೀ ವೃಕ್ಷದ ಕ
ದ್ವಾದಶ ಕ್ಷೇತ್ರಗಳ ಶಾಲಿಗ್ರಾಮಗಳಿವೆ. ಅವುಗಳನ್ನು ತೆಗೆದುಕೊಂಡು ಶ್ರೀಕ್ಷೆ
ಕಾಖಂಡಕಿಯಲ್ಲಿಯೇ ವೃಂದಾವನವನ್ನು ಸ್ಥಾಪಿಸಿ ಶ್ರೀಹರಿಯನ್ನು ಆರಾಧಿಸು ಎಂ
ಆಜ್ಞಾಪಿಸಿದರು.'' ಎಂದು ಶ್ರೀಪತಯ್ಯ ಹರಿದಾಸರು ಹೇಳುತ್ತಾರೆ.//೫೭//

ಆದರೆ ಮಹಿಪತಿರಾಯರು ತಮ್ಮ ನೆನಪಿಗೆಂದು ವೃಂದಾವನವನ್ನು ಸ್ಥಾಪಿಸ
ಆಜ್ಞಾಪಿಸುವುದು ಸಾಧ್ಯವಿದೆಯೇ? 'ಗುರುಸಹವಾಸವಿದ್ದುದೇ ಕಾಶಿ' ಎಂದು ಹೇ
ಅವರು ಇಷ್ಟಪಟ್ಟಿದ್ದರೆ ಸಾರವಾಡದಲ್ಲಿ ಅಥವ ಕೊಲ್ಹಾರದಲ್ಲಿ ವೃಂದಾವನವ
ಕಟ್ಟಲು ಹೇಳುತ್ತಿದ್ದರು. ಈ ದೃಷ್ಟಿಯಿಂದ ಕೊಲ್ಹಾರದ ಕೃಷ್ಣಾನದಿಯ ದಂಡೆ
ಮೇಲಿರುವ ಅವರ ವೃಂದಾವನ ಗಮನಾರ್ಹವೆನಿಸುತ್ತದೆ. ಆದರೆ ಅದನ್ನು
ಇತ್ತೀಚೆಗೆ ಅಂದರೆ ಸುಮಾರು ೬೦-೭೦ ವರುಷಗಳಲ್ಲಿ ಕಟ್ಟಿದ್ದು ಎಂದು ಬಲ್ಲ
ಹೇಳುತ್ತಾರೆ. ಆ ಮೊದಲು ಅಲ್ಲಿ ಒಂದು ಕಲ್ಲು ಇತ್ತೆಂದೂ, ಅದು 'ಕಾಖಂಡ
ಮಹಿಪತಿದಾಸರ ಪಾರ್ಥಿವ ಶರೀರವನ್ನು ದಹನ ಮಾಡಿದ ಸ್ಥಳ' ಎಂಬ ಕುರು
ಆಗಿತ್ತೆಂದೂ ಹೇಳುತ್ತಾರೆ. ಅದನ್ನು ನಂಬುವುದು ಕೂಡ ಕಷ್ಟವಾಗುತ್ತ
ಯಾಕೆಂದರೆ ದಹನ ಮಾಡಿದ ಸ್ಥಳ ಎಂದು ತೋರಿಸುವ ಕುರುಹು ಅಥವಾ ಇ
ವೃಂದಾವನ ಇದ್ದ ಸ್ಥಳ ವಿಜಯನಗರ ಕಾಲದ ರಾಮಲಿಂಗ ದೇವಸ್ಥಾನದ ಎದುರಿ
ಅಲ್ಲಿ ಈಶ್ವರಲಿಂಗ, ಅನಂತಶಯನ ಹಾಗೂ ಪ್ರಾಣದೇವರ ಮೂರ್ತಿಗಳು ಇಂದಿ
ಪೂಜೆಗೊಳ್ಳುತ್ತವೆ. ದೇವಾಲಯದ ಎದುರು ದಹನ ಮಾಡುವುದೂ ಸಾಧ್ಯವ

ವೃಂದಾವನ ಕಟ್ಟುವದು ಸಾಧ್ಯವಿದೆ. ಇಷ್ಟಾಗಿಯೂ ಕೊಲ್ಹಾರದಲ್ಲಿಯು
ರಾಯರ ವೃಂದಾವನಕ್ಕೆ ಆವರ ಮನೆತನದವರಾಗಲೀ ಅಥವಾ ಉಳಿದ
ಭಕ್ತರಾಗಲಿ ನಡೆದುಕೊಳ್ಳುವದಿಲ್ಲ. ಅಷ್ಟೇ ಅಲ್ಲ ಅದರ ಪೂಜೆಯು ಶಾಶ್ವತ
ಯೂ ಇಲ್ಲ. ಈ ವಿಷಯದಲ್ಲಿ ಶ್ರೀಪತಿ ತನುಜರು ತಮ್ಮ ಕನ್ನಡ
ಕ್ರಿಯಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದಾಗಿತ್ತು. ಅವರು ಹೇಳುವಂತೆ
ಕದಿ ವೃಂದಾವನದೊಳು ಮೆರೆದೆ। ಬಹುಭಕ್ತರ ಪೊರೆದೆ (ನುಡಿ -೨೦।
ಹೇಳುತ್ತಾರೆ. ಸಂಸ್ಕೃತ ಶ್ಲೋಕದಲ್ಲಿ ಕೂಡ 'ವೃಂದಾವನೇ ರಾಜತೇ'
ಹೇಳಲಾಗಿದೆ. ಇವುಗಳಿಂದ ಒಂದು ವಿಷಯ ಖಚಿತವಾಗುವುದೆಂದರೆ
ರಾಯರು ವೃಂದಾವನದಲ್ಲಿ ಮೆರೆದರು ಅಥವಾ ರಾಜಿಸಿದರು ಎಂಬುದು.
ಲ್ಹಾರದಲ್ಲಿಯೇ ಅಥವಾ ಕಾಖಂಡಕಿಯಲ್ಲಿಯೇ ಎಂಬುದನ್ನು ಮಾತ್ರ
ಲ್ಲ. ಈ ವಿಷಯದಲ್ಲಿ ಮುಂಬಯಿ ಇಲಾಖೆಯ ವಿಜಾಪುರ ಜಿಲ್ಲೆಯ
ತಿಯರ್ ತುಸು ವಿವರ ಕೊಡುವುದು ಗಮನಾರ್ಹವಾಗಿದೆ.

..hipati died at Kolhar on the Krishna twentytwo miles South
ewadi. but was buried at Kakhandki as he had wished and
il stand was raised over his grave......" (Vol. XXIII ಪುಟ ೬೫೭)

ಲ್ಹಾರದಲ್ಲಿ ಕಾಲವಾದ ಮಹಿಪತಿರಾಯರ ಪಾರ್ಥಿವ ಶರೀರವನ್ನು ಅವರ
ಂತೆ ಕಾಖಂಡಕಿಗೆ ತಂದು ಸಮಾಧಿ ಕಟ್ಟಿದರು ಎಂಬ ವಿಷಯ ಹೆಚ್ಚು
ವೆನಿಸುತ್ತದೆ ಮತ್ತು ಇದು ಸಂಪ್ರದಾಯಕ್ಕೆ ವಿರುದ್ಧವೇನೂ
ಬುದನ್ನು ಇಂಥ ಅನೇಕ ಉದಾಹರಣೆಗಳಿಂದ ಸಿದ್ಧಪಡಿಸಬಹುದು. ಮಾಧ್ವ
ಸಂಪ್ರದಾಯದ ಉತ್ತರಾದಿ ಮಠದ ಶ್ರೀಗಳವರಾದ ಶ್ರೀ ಸತ್ಯ
ರ್ಥರು (ಕ್ರಿ.ಶ. ೧೭೮೩-೧೮೯೪) ತೀರ್ಥಹಳ್ಳಿಯಲ್ಲಿ ಕಾಲವಾದಾಗ
ಕೊನೆಯ ಇಚ್ಛೆಯಂತೆ ಅವರ ಪಾರ್ಥಿವ ಶರೀರವನ್ನು ಮಹಿಷಿಗೆ ಒಯ್ದು
ತುಂಗಾತೀರದ ಅಶ್ವತ್ಥ ನಾರಾಯಣನ ಸನ್ನಿಧಾನದಲ್ಲಿ
ಗೊಳಿಸಲಾಯಿತು. //೫೮// ಆದ್ದರಿಂದ ನೂರು ವರುಷಗಳ ಹಿಂದೆ
ಯರ್ ವಿಷಯ ಸಂಗ್ರಹಕಾರನಿಗೆ ಇಂಥ ಹೇಳಿಕೆಗಳು ದೊರೆತಿವೆ ಎಂದರೆ
ನಂಬಲು ಹೆಚ್ಚು ಅವಕಾಶಗಳಿವೆ. ಮಹಿಪತಿರಾಯರು ಕೊಲ್ಹಾರದಲ್ಲಿ
ದರೆಂದು ಅಧಿಕೃತವಾಗಿ ದೊರಕುವ ದಾಖಲೆಯೂ ಇದೊಂದೇ ಆಗಿದೆ
ಯೂ ಗಮನಾರ್ಹವಾಗಿದೆ. ಅಂತು ಕೊಲ್ಹಾರದಲ್ಲಿ ಕಾಲವಾದ ಮೇಲೆ ಅವರ
ನ್ನು ಕಾಖಂಡಕಿಗೆ ತಂದು ವೃಂದಾವನ ಕಟ್ಟಿದರೆಂದು ಗ್ರಹಿಸಬಹುದು. ಆದರೆ
ವಾದ ಮಹಿಪತಿ ರಾಯರಿಗೆ ವೃಂದಾವನವನ್ನು ಹೇಗೆ ಕಟ್ಟಿದರು? ಎಂಬ
ಉಳಿಯುತ್ತದೆ. ಸಂನ್ಯಾಸಿಗೆ ಮಾತ್ರ ವೃಂದಾವನ ಎಂದು ಗ್ರಹಿಸಿದರೆ

ಮಹಿಪತಿರಾಯರು ಸಂನ್ಯಾಸ ಧರ್ಮವನ್ನು ಸ್ವೀಕರಿಸಿದ್ದರೆ? ಯಾರಿಂದ, ಮತ್ತು ಎಲ್ಲಿ ಎಂಬ ಪ್ರಶ್ನೆಗಳು ಹುಟ್ಟುವದು ಸಹಜವಾಗುತ್ತದೆ.

ಗೃಹಸ್ಥ ಹರಿದಾಸರನ್ನು ಸಾಮಾನ್ಯವಾಗಿ ಅವರ ಹೆಸರಿನ ಮು ಪದವನ್ನು ಉಪಯೋಗಿಸಿ ಕರೆಯುತ್ತಾರೆ. ಪುರಂದರದಾಸರು, ಕನ ಪ್ರಸನ್ನವೆಂಕಟದಾಸರು, ವಿಜಯದಾಸರು ಜಗನ್ನಾಥ ದಾಸರು ಇತ ಕರೆಯುವುದು ರೂಢಿಯಲ್ಲಿದೆ. ಅದರಂತೆ ಸಂನಾಸ್ಯ ಧರ್ಮ ಸ್ವೀಕರಿಸಿದವರ ಹೆಸರಿನ ಜೊತೆಗೆ ಸ್ವಾಮಿಗಳು ರಾಯರು ರಾಜರು ಎಂದು ಸೇರಿಸಿ ಕರೆ ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ರಾಘವೇಂದ್ರ ಇತ್ಯಾದಿ. ಇವುಗಳನ್ನು ಗಮನಿಸಿದರೆ ಮಹಿಪತಿರಾಯರನ್ನು ಮಹಿಪತಿ ಕರೆಯುವುದಿಲ್ಲ. ಅವರನ್ನು ಮಹಿಪತಿ ಸ್ವಾಮಿಗಳು, ಮಹಿಪತಿ ಮಹಿಪತಿರಾಜರು ಎಂದು ಕರೆಯುವುದೇ ಹೆಚ್ಚು ರೂಢಿಯಲ್ಲಿದೆ. ಹಾಕಿಕೊಟ್ಟ ಉಂಬಳಿಗಳು ದತ್ತಿಗಳು 'ಶ್ರೀ ಮಹತಿಪತಿ ಸ್ವಾಮಿ ಸಂಸ್ಥಾನ' ದಾಖಲೆಗಳಲ್ಲಿ ನಮೂದಾಗಿದೆ. ಜೊತೆಗೆ ಮಹಿಪತಿರಾಯರ ಕುರಿತು ಕೃತಿಗಳಲ್ಲಿ ಅವರ ಮಗ, ಮೊಮ್ಮಕ್ಕಳು, ಮರಿಮಕ್ಕಳು ಅವರನ್ನು ಗು ಯತಿ, ಸ್ವಾಮಿ, ಯೋಗಿ ಎಂಬ ಶಬ್ದಗಳಿಂದ ಕರೆಯುತ್ತಾರೆ.

''ಪೊಡವಿಗೆ ನಡೆತಂದನು ಗುರುರಾಯನು।
ಎಡಬಲದಲಿ ಭಾಗವತರ ಮೇಳದಿ''।।

(ಕೃಷ್ಣರಾಯ ಸೇವಾತತ್ವ ಪ

'ರಾಜರಾಜ ಮಹಾರಾಜ ಮಹೀಪತಿ।
ರಾಜನೆಂಬೋ ನಾಮವು ನೆಲೆಗೆ।।

(ಕೃಷ್ಣರಾಯ - ಅದೇ ಪ

'ಅಗಾಧ ಗುರುರಾಯನ ಕರುಣೆ
ಪೊಗಳಲಾಪೆನೆ ಪಾಮರ ಪ್ರಾಣಿ।।

(ಕೃಷ್ಣರಾಯ - ಅದೇ ಪ

ನೋಡು ಮನವೆ ವರ ಯತಿಯಾ। ನಡೆ
ನೋಡು ಸದ್ಭಾವದಿಂದಲಿ ಮಹೀಪತಿಯಾ।।

(ತರಳಕೃಷ್ಣ -ಅದೇ ಪ

ಕರುಣಿಸೆನಗೆ ವರಯತಿಯೆ।
ಪರಮ ಪಾವನ ಮೂರ್ತಿಯೆ।
ವರಭಕುತರ ಸ್ಫೂರುತಿಯೆ।
ಶರಣು ರಕ್ಷಕ ಮಹೀಪತಿಯೆ।।

(ಚಿನ್ನಕೃಷ್ಣ - ಅದೇ ಪ

ಅನೇಕ ಕೃತಿಗಳಲ್ಲಿ ಅವರನ್ನು ಸ್ತುತಿಸಿದ ಪದಗಳು ಮಹಿಪತಿರಾಯರು ಸಂನ್ಯಾಸ
ಗವನ್ನು ಸ್ವೀಕರಿಸಿದ್ದರು ಎಂದು ನಂಬಲು ಅವಕಾಶವನ್ನು ಮಾಡಿಕೊಡುತ್ತವೆ.

ಶ್ರೀಪತಿ ತನುಜರು ಬರೆದ ಕನ್ನಡ ಚರಿತ್ರೆಯಲ್ಲಿ ಈ ಕುರಿತು ಸ್ಪಷ್ಟವಾಗಿ
ಲ್ಲವಾದರೂ ಚರಿತ್ರೆಯಲ್ಲಿ ಬಳಸಿದ ಕೆಲವು ಪದಗಳು ಇದನ್ನೇ
ಪೋಧಿಸುತ್ತವೆ.

'ಭೂಲೋಕದಿ ವೃಂದಾವನದೊಳು ಮೆರೆದೆ।'
ಸಾಲು ಅವರು ವೃಂದಾವನಸ್ಥರಾದರೆಂಬುದನ್ನು ಹೇಳಿದರೆ, ಪವಾಡದ
ನನ್ನು ಹೇಳುವಾಗ
'ನಿಮ್ಮ ಖ್ಯಾತಿ ಕೊಡಲೊಯ್ಯುತ ಮುಸಕಿಡಲು'
ು ಸಂನ್ಯಾಸಿಗಳ ಅಂಗವಸ್ತ್ರ -ಖ್ಯಾತಿಯನ್ನು ತಂದು ಸತ್ತವಳ ಮೇಲೆ
ುಕಿಡಲು ಕೈಯನೆಳೆಯಲು ಝುಮ್ಮನೆ ಏಳುತ ಶಿಷ್ಯಳು' ಎಂದು ಮುಂತಾಗಿ
ುತ್ತಾರೆ.

'ಶ್ರೀಮದ್ಯೋಗೀಂದ್ರ ಮಹಾಮಹಿಮ ನಿಸ್ಸೀಮ ಕಾಖಂಡಕೀ ಗ್ರಾಮ
ಾವನ ವಿಧಾಮ ಬ್ರಹ್ಮ ಕುಲಲಲಾಮ ಮಹೀಪತಿ ನಾಮ ಗುರುಸಾರ್ವಭೌಮ
ುಧಿರಾಜ' ಎಂಬ ಅವರ ಪರಾಕು ಕೂಡ ಮಹಿಪತಿರಾಯರು
ೃಸಿಗಳಾಗಿದ್ದರು ಎಂಬುದನ್ನೇ ಎತ್ತಿ ತೋರಿಸುತ್ತದೆ.

ಈಗ ಉಳಿದಿದ್ದು ಅವರಿಗೆ ಸಂನ್ಯಾಸಧರ್ಮ ದೀಕ್ಷೆಯನ್ನು ಯಾರು ಕೊಟ್ಟರು?
ು ಕೊಲ್ಹಾರಕ್ಕೆ ಹೋಗುತ್ತಿದ್ದುದು, ಅಲ್ಲಿ ಉಮರ್ಜಿ ಪ್ರಲ್ಹಾದ
ಚಾರ್ಯರನ್ನು ಕಾಣುತ್ತಿದ್ದುದನ್ನು ಪರಂಪರೆಯಿಂದ ಹೇಳಿಕೊಳ್ಳುತ್ತ
ದ್ದಾರೆ. ಈ ಪ್ರಲ್ಹಾದ ಕೃಷ್ಣಾಚಾರ್ಯರು ಅಂದಿನ ಉತ್ತರಾದಿ ಮಠಾಧೀಶರಾದ
ಸತ್ಯಾಭಿನವತೀರ್ಥರೊಡನೆ ಯಾವಾಗಲೂ ಇರುತ್ತಿದ್ದರು. //೫೯//
ರ್ಜಿ ಆಚಾರ್ಯರ ನಿಕಟ ಪರಿಚಯ ಮಹಿಪತಿರಾಯರಿಗಿತ್ತು. ಜೊತೆಗೆ ಅವರೂ
ರಾದಿ ಮಠದ ಶಿಷ್ಯರು, ಅವರ ಪಕ್ವ ಜೀವನವನ್ನು ಕಂಡ ಶ್ರೀಗಳವರು ಒಂದು
ೊಲ್ಹಾರದ ಕೃಷ್ಣಾ ತೀರದಲ್ಲಿಯೇ ಅವರಿಗೆ ಯತ್ಯಾಶ್ರಮವನ್ನು ಕೊಟ್ಟರಬೇಕು.
ಅವರೊಬ್ಬ ಬಿಡಿ ಸಂನ್ಯಾಸಿಗಳಾಗಿರುವ ಸಾಧ್ಯತೆಗಳಿವೆ. ಅಂತೆಯೇ ಅವರಿಗೆ
ಾವನವನ್ನು ಕಟ್ಟಲಾಯಿತು. ಅಲ್ಲದೆ ಇಂದಿಗೂ ಅವರದೆನ್ನಲಾದ
ುಕೆಗಳನ್ನು ಹಾಗು ಯೋಗ ದಂಡಗಳನ್ನು ತೋರಿಸುವುದು ಇದನ್ನು ಇನ್ನಷ್ಟು
ಕರಿಸಿದಂತಾಗುತ್ತದೆ. ವಾಸ್ತವದಲ್ಲಿ ಯೋಗದಂಡವು ಸಂನ್ಯಾಸಿಗಳ ಕೈಯಲ್ಲಿ
ತ್ತದೆ.

ಮಹಿಪತಿರಾಯರ ಮಗ ಕೃಷ್ಣರಾಯರು ತಮ್ಮ ಒಂದು ಕೀರ್ತನೆಯಲ್ಲಿ

'ಏನೆಂದು ಬಣ್ಣಿಸಲಿ ಗುರುರಾಯನಾ'

ಎಂದು ಪ್ರಾರಂಭಿಸುತ್ತ

'ಧರೆಯೊಳಜ್ಞಾನ ತಮಹರಣ ಭಾಸ್ಕರನೆನಿಪ
ವರಮುನಿ ಕರಕಮಲದಿ ಜನಿಸಿ'

ಎಂದು ಸ್ಪಷ್ಟವಾಗಿ ಹೇಳಿದ್ದನ್ನು ಗಮನಿಸಿದರೆ, ಮಹಿಪತಿರಾಯರು ಭಾಸ್ಕರ ಸ್ವಾಮಿಗಳಿಂದಲೇ ಕಾಲಕ್ರಮದಲ್ಲಿ ಸಂನ್ಯಾಸ ದೀಕ್ಷೆಯನ್ನು ಪಡೆದಿರುವ ಸಾಧ್ಯತೆಗಳೂ ಇವೆ. 'ವರಮೂಲ ಮಂತ್ರವನು ಗುರುಮಹಿಪತಿಯೆಂಬ ನಿರುತ ಖ್ಯಾತಿಯ ನಾಮ ಧರಿಸಿ ಬಂದನ ಮಹಿಮೆ' ಎಂದು ಕೂಡ ಹೇಳುತ್ತಾರೆ. //೬೦//

ಹೀಗೆ ಈವರೆಗೆ ಕಂಡುಕೊಂಡಂತೆ ಮಹಿಪತಿರಾಯರು ಕ್ರಿ.ಶ. ೧೬೪೦ರಿಂದ ೧೭೦೫ ವರೆಗೆ ಸುಮಾರು ೬೫ ವರುಷ ಬದುಕಿ ಕೆಲಕಾಲ ವಿಜಾಪುರದ ಆದಿಲಶಾಹಿ ರಾಜ್ಯದಲ್ಲಿ ಅಧಿಕಾರದಲ್ಲಿದ್ದು, ಅನಂತರ ಅದನ್ನು ತ್ಯಜಿಸಿ ಸಾರವಾಡದ ಭಾಸ್ಕರ ಸ್ವಾಮಿಗಳ ಶಿಷ್ಯತ್ವವನ್ನು ವಹಿಸಿ ಆಧ್ಯಾತ್ಮ ಸಾಧನೆ ಮಾಡಿದರು. ಯೋಗ ಸಿದ್ಧಿಯನ್ನು ಪಡೆದುಕೊಂಡರು. ತಮ್ಮ ಅನುಭವಗಳನ್ನು ಹಲವಾರು ರಚನೆಗಳ ಮೂಲಕ ಅಕ್ಷರದಲ್ಲಿ ಹಿಡಿದಿಟ್ಟರು. ಕೊನೆಗೆ ಸಂನ್ಯಾಸ ಆಶ್ರಮವನ್ನು ಸ್ವೀಕರಿಸಿ ಕೊಲ್ಹಾರದಲ್ಲಿ ಸ್ಥಲವಾಗಿ ಕಾಖಂಡಕಿಯಲ್ಲಿ ವೃಂದಾವನಸ್ಥರಾದರು.

★ ★ ★

**೨ಡಿ ಟಿಪ್ಪಣಿಗಳು**

1. ದೇಶಪಾಂಡೆ ಮನೋಹರರಾಯ: ಸ್ವಾನಂದ ಸಾಮ್ರಾಜ್ಯ ಪುಟ ೨೨-೨೩ ಶ್ರೀಪತಯ್ಯ ಹರಿದಾಸ (ಸಂ): ಸೇವಾತತ್ವ ಪುಟ ೮-೯ (೧೯೬೩)
2. ವರದರಾಜರಾವ (ಸಂ): ಶ್ರೀ ಮಹಿಪತಿರಾಯರ ಕೃತಿಗಳು: ಪೀಠಿಕೆ ಪುಟ XX
3. ಸ್ವಾನಂದ ಸಾಮ್ರಾಜ್ಯ : ಪುಟ -೨೨
4. ಹೆಚ್. ಕಸಿನ್ಸ : ಬಿಜಾಪುರ ಪು. ೧೧೯ (೧೮೮೯)
5. ಎಂ.ಎ. ನಯೀಮ: ಎಕ್ಸಟರ್ನಲ್ ರಿಲೇಶನ್ಸ ಆಫ್ ಬಿಜಾಪುರ ಕಿಂಗಡಮ್ ಪುಟ ೨೫
6. ಹೆಚ್. ಕಸಿನ್ಸ: ಬಿಜಾಪುರ ಪುಟ ೧೨೮
7. ಜಿ. ವರದರಾಜರಾವ್ (ಸಂ): ಶ್ರೀ ಮಹಿಪತಿರಾಯರ ಕೃತಿಗಳು ಪು. XIX
8. ಮರಾಠಿ ಚರಿತ್ರೆ : ಓವಿ ೫೨

'ತೋ ಆಹೆ ಬಹುತ ಚತುರ। ಆಮ್ಹಿ ದೇತೋ ತ್ಯಾಸಿ ಅಧಿಕಾರ।।
ಆಮಚಿ ದರಬಾರೀ ಐಸಾ ಮೋಹರ। ನಾಟೇ ನಿಘರಿ ಯಾಸ್ಪಷ್ಟಿ ।।೫೨।।

9. ಸ್ವಾನಂದ ಸಾಮ್ರಾಜ್ಯ : ಪುಟ ೨೨ ಮತ್ತು
ಸೇವಾತತ್ವ : ಪುಟ ೮
10. ಸೇವಾತತ : ಪುಟ ೪

. ಹೆಚ್ ಕಸಿನ್ಸ: ಬಿಜಾಪುರ ಪುಟ ೧೭
. ಅದೇ ಪುಟ ೧೩೧. ಈ ಪ್ಲೇಗ ಬೇನೆಯಿಂದ ಔರಂಗಜೇಬನು
ತನ್ನ ಹೆಂಡತಿಯನ್ನು ಇಲ್ಲಿಯೇ ಕಳೆದು ಕೊಂಡನು
. ಸ್ವಾನಂದ ಸಾಮ್ರಾಜ್ಯ: ಪು ೨೫. ಸೇವಾತತ್ವ: ಪು. ೧೧ ಹಾಗೂ
ಶ್ರೀ ಮಹಿಪತಿರಾಯರ ಕೃತಿಗಳು : ಪೀಠಿಕೆ ಪು. XIV
. ಭೀ.ಸ್ವಾ. ಕಮಲಾಪುರ: ಸತ್ಕಥಾ ಪುಟ ೧೯೫ (೧೯೩೧)
. ಶ್ರೀಪತಯ್ಯ ಹರಿದಾಸ: ಸೇವಾತತ್ವ ಪುಟ ೧೧
. ಮ. ಶ್ರೀ ದೇಶಪಾಂಡೆ: ಸ್ವಾನಂದ ಸಾಮ್ರಾಜ್ಯ ಪು ೨೫
.. ಜಿ. ವರದರಾಜರಾವ: ಶ್ರೀ ಮಹಿಪತಿರಾಯರ ಕೃತಿಗಳು ಪೀಠಿಕೆ ಪುಟ XIV
. ಕೃಷ್ಣ ಕೊಲ್ಹಾರ ಕುಲಕರ್ಣಿ: ಆನಂದ ಲಹರಿ: ಸುಬೋಧ ದೀಪಾವಳಿ ೧೯೬೪
'. ಮರಾಠಿ ಚರಿತ್ರೆ : ಓವಿ ೨೫

ಐಗಳಿ ಗ್ರಾಮಿ ಹೋತಾ ವಿಪ್ರ। ನಾವ ಪವಿತ್ರ ಕೋನೇರಿಪಂತ ।। ೨೫।। ಸ್ವಾನಂದ ಸಾಮ್ರಾ
ಟ-೨೩) ಹಾಗು ಸೇವಾತತ್ವ (ಪುಟ-೧೧) ಗಳಲ್ಲಿ ಲೇಖಕರು 'ರಾಯರ ಅಜ್ಜಂದಿರಾ
ಗಭಟ್ಟರು ಬಾಗಲಕೋಟೆಯ ಕಾಥವಟೆ ಮನೆತನದವರು' ಎಂದು ಹೇಳುತ್ತಾರೆ. ಇದನ್ನೇ ಡಾ
ವರದರಾಜರಾವ ಅವರು 'ಶ್ರೀಮಹಿಪತಿರಾಯರ ಕೃತಿಗಳು' ಪೀಠಿಕೆಯಲ್ಲಿ ಪುನರುಚ್ಚರಿಸಿದ್ದಾ
ರೆ ಇದಕ್ಕೆ ಆಧಾರ ಎಲ್ಲಿಯೂ ಕೊಡಲಿಲ್ಲ. ದೊರೆತ ದಾಖಲೆಗಳಲ್ಲಿ ಈ ಹೆಸರು ಎಲ್ಲಿಯ
ಲ್ಲೇಖವಾಗಿಲ್ಲ. ಪ್ರತಿಯಾಗಿ ಮುಂಬಯಿ ಗ್ಯಾಝೆಟಿಯರ್ ಸಂಪುಟ XXI ಪುಟ ೬೫೭ ರ
ahipati was accountant of Aigali Village' ಎಂದು ಸ್ಪಷ್ಟವಾಗಿ ಹೇಳಿದೆ. -
ಲಕರ್ಣಿಕೆ ವೃತ್ತಿ ಆಮೇಲೆ ಬಂದುದಾಗಿರಬೇಕು. ಇಂದಿನ ಐಗಳಿ ಕುಲಕರ್ಣಿಗಳ ಗೋ
ನೌನಭಾರ್ಗವ'ವಾಗಿದ್ದು ಕಾಖಂಡಕಿಯ ಹರಿದಾಸರ ಗೋತ್ರವೂ ಅದೆಯೇ ಆಗಿ
ಸನಾರ್ಹವಾಗಿದೆ. ಅಲ್ಲದೆ ಐಗಳಿಯ ವೆಂಕಟೇಶ ದೇವರ ಅರ್ಚಕ ವೃತ್ತಿಯನ್ನು ಇಂದಿಗ
ಲ್ಲಿಯ ಕುಲಕರ್ಣಿಗಳೇ ಮಾಡುತ್ತಾರೆ.

. ಕೋನೇರಿ ರಾಯ ರಚಿಸಿದ ಒಂದು ಆರತಿ ಪದವನ್ನು ಶ್ರೀ ಪಿ.ಎಂ.ಚಂದಾವರಕರ ಅವ
ಪಾದಿಸಿ ಪುಣೆಯ ಭಾರತ ಇತಿಹಾಸ ಸಂಶೋಧನ ಮಂಡಲದ 'ವಾರ್ಷಿಕ ಇತಿವೃತ್ತ' ಶಕ ೧೮೫
ಸಂಚಿಕೆಯ ಪುಟ ೪೭ ರಲ್ಲಿ ಪ್ರಕಟಿಸಿದ್ದಾರೆ. 'ಜಯದೇವ-ಜಯದೇವ ಜಯ ವೈಕುಂಠ ರಮಣ
ದು ಪ್ರಾರಂಭವಾಗುವ ಪದದ ಒಂದು ನುಡಿಯಲ್ಲಿ 'ಪಂಚಪುರಿ ಸಿರಿವರಿ ದೇವ ಎಂ
ಳುತ್ತಾರೆ. ಇಲ್ಲಿಯ ಪಂಚಪುರಿ ಎಂದರೆ ಐಗಳಿ. ಅಲ್ಲಿಯ ವೆಂಕಟೇಶ ದೇವರ ಗುಡಿ
ರದಲ್ಲಿ ಷಣ್ಮುಖಿ -ಹಣಮಂತ ದೇವರ ವಿಗ್ರಹಗಳೂ ಇವೆ.

೦. ಮರಾಠಿ ಚರಿತ್ರೆ: ಓವಿ: ೨೮, ೨೯, ೩೧.

ಶ್ರೀಪತಿ ತನುಜರ ಕನ್ನಡ ಕಿರುಚರಿತ್ರೆಯಲ್ಲಿ ಬರುವ 'ಜನಿಸಿದೆ ಮೊದಲು ವಿಜಾಪುರದಲಿ ನೀ
ಗೂ ಸವದತ್ತಿ ರಾಮಕೃತ ಸಂಸ್ಕೃತ ಸ್ತೋತ್ರದಲ್ಲಿಯ 'ಆಸ್ತೇದ್ವೈದುರ ಪತ್ತನೇ ದ್ವಿಜವರೆ
ನೇರಿ। ಆರ್ಯಾಭಿದೋ ತದ್ಭಾರ್ಯಾ ಉದರೇ ಸುಜನ್ಮ। ಜಗೃಹೇ ಲೇಖಾಂಶತೆ
ಪತಿ।।' ಎಂಬ ಸಾಲುಗಳು ಕೋನೇರಿರಾಯ ತನ್ನ ಹಿರಿಯ ಮಗ ಹುಟ್ಟಿದ ನಂತರ ಐಗಳಿಯ
ಟ್ಟು ಬಿಜಾಪುರಕ್ಕೆ ಬಂದಿರಬೇಕು. ಗುರು ಮಹಿಪತಿಯು ವಿಜಾಪುರದಲ್ಲಿ ಹುಟ್ಟಿರುವ ಸಾಧ್ಯತೆಯ
ದೆ.

೧. ಮರಾಠಿ ಚರಿತ್ರೆ: ಓವಿ ೩೨

'ಚೌಘಾನಿ ಹಸ್ತ ಮಿಳುನಿ। ವೃತ ಬಂಧ ಕೇಲಾ ತಯಾನಿ।।
ಹಂತದಲ್ಲಿ ಸ್ವಾನಂದ ಸಾಮ್ರಾಜ್ಯ (ಪುಟ-೨೫) ಸೇವಾತತ್ವ (ಪುಟ-೧೧) ಗ್ರಂಥಗಳಲ್ಲಿ ಬ

ವಿಷಯವನ್ನು ಗಮನಿಸಬೇಕು. 'ಮಹಿಪತಿಯ ಉಪನಯನ ಕಾಲದಲ್ಲಿ ಅವರ ಮನೆತನ ಕುಲಗುರುಗಳಾದ ಕೊಲ್ಹಾರದ ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರು ಬಂದಿದ್ದರು' ಎಂ ಉಲ್ಲೇಖಿಸಲಾಗಿದೆ. ಕಾಖಂಡಕಿ ಹರಿದಾಸರ ಮನೆತನ ಪ್ರಾರಂಭವಾದದ್ದು ಮಹಿಪತಿರಾಯರಿಂ ಆ ಮೊದಲು ಅದು ಐಗಳಿ ಕುಲಕರ್ಣಿ ಅಥವಾ ಉಭಯ ಗ್ರಂಥಗಳಲ್ಲಿ ಉಕ್ತವಾದ ಬಾಗಲಕೋಟೆಯ ಕಾಥವಟೆ ಮನೆತನ. ಈ ಮನೆತನಗಳ ಕುಲಗುರುಗಳು ಉಮರ್ಜಿ ಆಚಾರ್ಯ ಅಲ್ಲ. ಇಂದು ಕಾಖಂಡಕಿ ಹರಿದಾಸರು ಮಾನ್ಯ ಮಾಡುತ್ತಿದ್ದ, ಮನೆತನದ ಕುಲಗುರುಗಳ ಪುರೋಹಿತರು 'ಪಡಸಲಗಿಯ ಆಚಾರ್ಯರು' ಪ್ರತಿವರುಷದ ಆರಾಧನೆಯಲ್ಲಿ ಜರುಗ ಗುರುಮಂಡಲ ಪೂಜೆಗೆ ಪಡಸಲಗಿ ಆಚಾರ್ಯರನ್ನೇ ಕೂಡಿಸುತ್ತಿರುವುದು ಗಮನಾರ್ಹವಾಗಿ ಮಹಿಪತಿರಾಯರು, ಅವರ ಮನೆತನದವರು ರಚಿಸಿದ ಸಾವಿರಾರು ಕೃತಿಗಳಲ್ಲಿ ಸಾರವಾಡದ ಭಾಸ್ಕ ಸ್ವಾಮಿಗಳು, ಉತ್ತರಾದಿಮಠದ ಸ್ವಾಮಿಗಳು, ಅನೇಕ ಹರಿದಾಸರು ಹೀಗೆ ಹಲವರನ್ನು ಸ್ತುತಿಸಿದ್ದರ ಉಮರ್ಜಿ ಆಚಾರ್ಯರನ್ನು ನೆನೆಸಿದ ಉಲ್ಲೇಖ ದೊರೆಯುವುದಿಲ್ಲ.

೨೨. ಐಗಳಿ ವೆಂಕಟೇಶ ದೇವರ ಅರ್ಚಕ ವೃತ್ತಿ, ಈಗಲೂ ಅಲ್ಲಿಯ ಕುಲಕರ್ಣಿಗಳಿಗೆಯೇ ಇದೆ.

೨೩. ಮರಾಠಿ ಚರಿತ್ರೆ: ಓವಿ ೩೭

(ಕನ್ನಡ ಚರಿತ್ರೆಯಲ್ಲಿ ಅಥವಾ ಇತರತ್ರ ಖಿವಾಸಖಾನನ ಉಲ್ಲೇಖ ದೊರೆಯುವುದಿಲ್ಲ.)

೨೪. ಮರಾಠಿ ಚರಿತ್ರೆ: ೩೯

೨೫. ಮಹಿಪತಿರಾಯರ ಚರಿತ್ರೆಯಲ್ಲಿ ಹೆಂಡತಿಯ ಹೆಸರು 'ತಿಮ್ಮವ್ವ' ಎಂದು ಎಲ್ಲ ದಾಖಲೆಗಳ ಉಕ್ತವಾಗಿದೆ. ಆದರೆ ಅವಳು ಯಾವ ಊರಿನವಳು, ಯಾರ ಮನೆತನ, ಯಾರ ಮಗಳು ಇತ್ಯಾದಿ ದಾಖಲೆ ಇಲ್ಲ. ಸ್ವಾನಂದ ಸಾಮ್ರಾಜ್ಯ (ಪುಟ -೨೪)ದಲ್ಲಿ ಅವಳು ಕಲಬುರ್ಗಿಯ ದೇಶಮುಖ ಮನೆತನದವಳು ಎಂದು ಹೇಳಿದೆ. ಸೇವಾತತ್ವ (ಪುಟ -೧೨) ದಲ್ಲಿ ಅವರಿಗೆ ಇಬ್ಬರು ಹೆಂಡ ಎಂಬ ಉಲ್ಲೇಖವಿದೆ. ಮೊದಲನೆಯವಳು ಐಗಳಿಯ ಕರ್ಣಿಕರ ಮಗಳು. ಅವಳು ಹೆಳವಿ. ಅವಳ ಗಂಡು ಮಗು ಹುಟ್ಟಿದಾಗ ಆಸ್ತಿ ಹಾಗೂ ಕರ್ಣಿಕ ವೃತ್ತಿಗೆ ಅವನನ್ನು ಬಿಟ್ಟು ರಾಯರು ವಿಜಾಪುರ ಬಂದರು. ತುಸು ದಿನಗಳ ನಂತರ ಕಲಬುರ್ಗಿಯ ದೇಶಮುಖರು ತಮ್ಮ ಮಗಳು ತಿರುಮಲಾಬಾ (ತಿಮ್ಮವ್ವ) ಎಂಬವಳನ್ನು ಅವರಿಗೆ ಧಾರೆಯೆರೆದು ಕೊಟ್ಟರು ಎಂದು ಹೇಳಲಾಗಿದೆ. ಆದರೆ ಯಾವ ಹೇಳಿಕೆಗಳಿಗೂ ಆಧಾರಗಳಿಲ್ಲ. ಮೊದಲೇ ಹೇಳಿದಂತೆ ಐಗಳಿ ಕುಲಕರ್ಣಿಗಳ ಗೋ 'ಮೌನಭಾರ್ಗವ' ವಾದ್ದರಿಂದ ಸಗೋತ್ರದಲ್ಲಿ ವಿವಾಹ ನಿಷಿದ್ಧ. ತಿಮ್ಮವ್ವ ಕಲಬುರ್ ದೇಶಮುಖರ ಮನೆತನದವಳು ಎಂಬುದಕ್ಕೆ ಆಧಾರವಿಲ್ಲ. ಅಲ್ಲದೆ ಅಂದಿನ ದಿನಗಳ ಕಲಬುರ್ಗಿಯಷ್ಟು ದೂರದ ಸಂಬಂಧ ಅಸಂಭಾವ್ಯ. ಏನಿದ್ದರೂ ಹತ್ತೆಂಟು ಮೈಲಿಗಳ ಫಾಸಲೆಯ ಬೀಗತನ ಹೆಚ್ಚು. ಒಂದು ಹೇಳಿಕೆಯಂತೆ ತಿಮ್ಮವ್ವ ಹೊನವಾಡ ದೇಶಪಾಂಡೆಗಳ ಮನೆತನದವ ಎಂಬುದನ್ನು ಒಪ್ಪಬಹುದು. ಹೊನವಾಡ ಹಳ್ಳಿಯು ವಿಜಾಪುರ ಹಾಗೂ ಐಗಳಿ ಎರಡ ಊರುಗಳಿಗೆ ಅಷ್ಟೇ ಹತ್ತಿರದ ಹಳ್ಳಿ. ಆದರೆ ಇದಕ್ಕೆ ಆಧಾರವಿಲ್ಲ. ಕನ್ನಡ ಹಾಗೂ ಸಂಸ್ಕೃತ ಚರಿ -ಸ್ತೋತ್ರಗಳಲ್ಲಿ ತುಕ್ಕವ್ವನನ್ನು ಅತ್ತಿಗೆ ಎಂದು ಕರೆದಿದ್ದಾರೆ. ಮರಾಠಿ ಚರಿತ್ರೆಯಲ್ಲಿ ಅವಳ ಬಹಿಣ ಎಂದು ಕರೆಯಲಾಗಿದೆ.

೨೬. ಸಂಸ್ಕೃತ ಸ್ತೋತ್ರ ಶ್ಲೋಕ ೩.೪

೨೭. ಮರಾಠಿ ಚರಿತ್ರೆ: ಓವಿ ೪೧

೨೮. ಮರಾಠಿ ಚರಿತ್ರೆ, ಓವಿ ೪೪ ರಿಂದ ೪೬

೨೯. ಅದೇ ಓವಿ ೪೮ ರಿಂದ ೫೦ ಸಂಸ್ಕೃತ ಸ್ತೋತ್ರ, ಶ್ಲೋಕ ೮.೯

೩೦. ಮರಾಠಿ ಚರಿತ್ರೆ, ಓವಿ ೪೧ ರಿಂದ ೫೩

೩೧. ಅದೇ ಓವಿ ೫೬

ದೀಚ ದಾತಾ ಆಸೇ ಕರ್ಣ। ತ್ಯಾವರೀ ಅಭಿಷೇಕಿಲಾ ದುರ್ಯೋಧನ।।
ಗ ದಾತೃತ್ವಾಸ ಕಾಯ ಉಣೆ। ಯಾಚಕ ಜನ ತೃಪ್ತ ಹೋತೀ।। ೫೬।।
ಶರಾಠಿ ಚರಿತ್ರೆ, ಓವಿ: ೫೮
ಖುಬೇರಿ: ಬಸಾತಿನ-ಉಸ್-ಸಲಾತಿನ ಪುಟ ೪೮೬
ಶರಾಠಿ ಚರಿತ್ರೆ, ಓವಿ: ೧೪೧ರಿಂದ ೧೪೮
ದೇ ಓವಿ ೧೫೧: 'ಮಹಿಪತಿರಾಯಾಚಿ ಬಹಿಣ' ಎಂದು ಮರಾಠಿ ಚರಿತ್ರೆಯಲ್ಲಿ, 'ತುಕ್ಕವ್ವನು
ಗೆ ಭಾವಿಕಳು' ಎಂದು ಕನ್ನಡ ಚರಿತ್ರೆ, (ನುಡಿ ೧೬) 'ಜ್ಯೇಷ್ಠ ಭ್ರಾತೃಸತೀ' ಎಂದು
ದಲ್ಲಿ (ಶ್ಲೋಕ -೨೬) ಉಲ್ಲೇಖವಾಗಿದೆ.
ಶರಾಠಿ ಚರಿತ್ರೆ : ಓವಿ ೫೨ ರಿಂದ ೧೬೦
ಿದೇ: ಓವಿ ೬೨ ರಿಂದ ೭೧
ಿದೇ ಓವಿ: ೧೬೮ ರಿಂದ ೧೭೯
ಿದೇ ಓವಿ: ೧೮೦ - ೧೮೧

'ಜವಳಿ ಹೋತಾ ಶಿಷ್ಯ ಸೂಜ್ಞ। ಪಯ ಆಣಿಲೆ ಪಾತ್ರಭರೂನ।।
ಠೇವಿತಾ ಸನ್ಮುಖ ನೇಊನ। ಕೇಲೆ ಪ್ರಾಶನ ಸಪ್ರೇಮ ।।೧೮೦।।
ಕ್ಷಣ ಏಕ ರಾಹೋನಿ ನಿವಾಂತ। ಪ್ರಾಶಿಲೆ ದುಗ್ಧ ಕಾಡಿಲೆ ಪಾತ್ರಾತ।
ಮ್ಹಣೆ ಮಹಿಪತಿ ಘೇ ತ್ವರಿತ। ಪಾತ್ರಾ ಹಾತಾತ ದಿ ಘಲೆ ।।೧೮೧।।

ಇತ್ಯಾದಿಯಾಗಿ ತರಿಸಿದ ಹಾಲನ್ನು ಮೊದಲು ಸ್ವಾಮಿಗಳು ಕುಡಿದು, ಅನಂತರ ಅದನ್ನು ಕಕ್ಕಿ
ೖ) ಬಂದ ಹಾಲನ್ನು ರಾಯರಿಗೆ ಕುಡಿಯಲು ಕೊಟ್ಟರು. ಎಂದು ಹೇಳಿದೆ. ಆದರೆ ಕನ್ನಡ
ಯಲ್ಲಿ 'ಮುಂಕದೆ ಕರೆಯುತ ಕರದಲಿ ಕರವಿಟ್ಟು। ಉಪದೇಶ ಕೊಟ್ಟು ।।೪।। ಎಂದು
ರೆ, ಸಂಸ್ಕೃತ ಸ್ತೋತ್ರದಲ್ಲಿ 'ದದ್ಭಕ್ತಿ ಮನವೇಕ್ಷ್ಯ ಯೋಗ ವಿಭವ। ಸ್ವಾಕ್ತಂ ಸುಕೀಲಂ
ಸ್ವಾ ಮಸ್ತಕ। ಹಸ್ತ ಪದ್ಮ ಮುತುಲಂ ಸದ್ಯೋಗಿನಾ ಭೂಪದೇ:।।೧೪।। ಎಂದು ಹೇಳಿದೆ.
ೆ. ವರದರಾಜ್‌ರಾವ (ಸಂ): ಶ್ರೀಮಹಿಪತಿರಾಯರ ಕೃತಿಗಳ ಕೀರ್ತನೆ ೮೮
ಿದೇ ಕೀರ್ತನೆ : ೬೮
ುರಾಠಿ ಚರಿತ್ರೆ: ಓವಿ ೧೯೬ ರಿಂದ ೨೦೨
ುರಾಠಿ ಚರಿತ್ರೆ: ಓವಿ ೨೦೩ ರಿಂದ ೨೦೫

ಈ ವಿಷಯದಲ್ಲಿ ಕನ್ನಡ ಚರಿತ್ರೆ 'ಮಂದಿ ಕುದುರೆಗಲ್ಲ ಅಪ್ಪಣೆಕೊಟ್ಟು।
ನಿಲ್ಲದ್ವರುಷ ಕೊಟ್ಟು ।।೪।।' ಎಂದು ಹೇಳುತ್ತದೆ.
ಸಂಸ್ಕೃತ ಸ್ತೋತ್ರದಲ್ಲಿ 'ತೌ ದೃಷ್ಟ್ವಾ ಮುನಿ ಭಾಸ್ಕರೋದಯಮುದಿತೋ ಕಾಲಂಚ
ಪಕ್ಷಂ ಗತಂ ಮತ್ಸ್ವೋವಾಚ ತ್ವದೀಯ ಸೈನ್ಯ ಮುಖಿಳಂ ತ್ಯಕ್ತ್ವಾಹಿ ಮತ್ಸನ್ನಿಧೌ।।

ಹೇಳಿದೆ. ಗ್ಯಾಝಿಟಿಯರ್‌ದಲ್ಲಿ 'Mahapati returned to Bijapur, resigned
fice and gave away his property in arms' ಎಂದು ಉಲ್ಲೇಖವಾಗಿದೆ. ಅಂತು
ಆವರೆಗೆ ಗಳಿಸಿದ ದ್ರವ್ಯ ಆಸ್ತಿಯನ್ನೆಲ್ಲ ದಾನಮಾಡಿದರು ಎಂಬುದು ಖಚಿತ.
ುರಾಠಿ ಚರಿತ್ರೆಯಲ್ಲಿ ಹೇಳಿದಂತೆ, ಮಹಿಪತಿರಾಯರು ವಿಜಾಪುರದಲ್ಲಿಯ ಎಲ್ಲವನ್ನೂ ದಾನ
ದ್ದರು. ಸಾರವಾಡದಿಂದ ತಿರುಗಿ ವಿಜಾಪುರಕ್ಕೆ ಬಂದ ನಂತರ ಅವರು ಎಲ್ಲಿ? ಹೇಗೆ? ಇದ್ದರು
ದನ್ನು ಖಚಿತವಾಗಿ ಹೇಳಲು ಆಧಾರಗಳಿಲ್ಲ. ಕನ್ನಡ ಚರಿತ್ರೆಯಲ್ಲಿ 'ಮುನಿವರ ನಾಜ್ಞೆದಿ
ಕೆ ಬರುತಾ। ಕೆಲದಿಸಲ್ಲಿರುತಾ।।' ಎಂದು ಹೇಳಿದೆ ಅದನ್ನೇ ಸಂಸ್ಕೃತ ಸ್ತೋತ್ರದಲ್ಲಿ
"ಜ್ಞಾಂ ಸಿರಿಸೀಸುವಾಹ್ಯ ಸಹಸಾನತ್ವಾ ಗುರೋ: ಪಾದುಕೌ ನಿರ್ಗತ್ಯಾ ಶುನಿಕೇತನಂ
ೇ ತಾಭ್ಯಾಂ ಸುದಾ ಪ್ರಾಪ್ಯಚ।।' ಎಂದು ಹೇಳಿದೆ. ಅವರು ಸಾರವಾಡದಿಂದ ತಿರುಗಿ

ವ್ಯಾಸರಾಯರು ನಿರೂಪಿಸಿದ್ದಾರೆ. ಈ ತತ್ವಗಳನ್ನು ಮಹಿಪತಿರಾಯರು ತಮ ಕೃತಿಗಳಲ್ಲಿ ಹೇಳಿದ 'ಇಷ್ಟದೈವಸ್ತುತಿ' ಗುರುಪರಂಪರೆ, ಹಲವಾರು ಪೌರಾ ಪ್ರಸಂಗಗಳ ಉಲ್ಲೇಖ ಹಾಗೂ ಆಗಿಂದಾಗ್ಗೆ ಜನರಿಗೆ ಹೇಳಿರುವ ನಿ ಬೋಧೆಗಳಿಂದ ಗ್ರಹಿಸಲು ಸಾಧ್ಯವಿದೆ.

ರಾಯರ ಇಷ್ಟದೈವವು 'ಶ್ರೀಹರಿ' ಎಂಬುದನ್ನು ಅವರ ೬೮೫ ಕೃತಿಗಳಲ್ಲಿ ಸುಮಾರು ೩೨೦ ಕ್ಕಿಂತ ಹೆಚ್ಚಿನ ರಚನೆಗಳಿಂದ ತಿಳಿಯಬಹುದಾಗಿದೆ. ಶ್ರೀ ಹರಿ ಮಾಧ್ವರ ಇಷ್ಟದೈವ. ಅವನು ಸರ್ವೋತ್ತಮನು. ಸ್ವತಂತ್ರ ಹರಿಸರ್ವೋತ್ತಮತ್ವವು ಮಧ್ವಾಚಾರ್ಯರ ಉಪದೇಶದ ತಿರುಳು.

'ಶೃಣುತಾಮಲ ಸತ್ಯವಚಃ ಪರಮಂ।
ಶಪಥೇರಿತ ಮುಚ್ಛ್ರಿತ ಬಾಹುಯುಗಂ।
ನ ಹರೇಃ ಪರಮೋಃ ನ ಹರೇಃ ಸದೃಶಃ।
ಪರಮಃ ಸ ತು ಸರ್ವಚಿದಾತ್ಮಗಣಾತ್।।'

ಎಂದು ಶ್ರೀ ಮಧ್ವಾಚಾರ್ಯರು ತಮ್ಮ 'ದ್ವಾದಶ ಸ್ತೋತ್ರ'ದಲ್ಲಿ ಸಾರಿ ಹೇಳುತ್ತಾ ಶ್ರೀ ಹರಿಗಿಂತ ಉತ್ತಮನಾದವನಿಲ್ಲ. ಅವನಿಗೆ ಸಮನಾದವರೂ ಇಲ್ಲ. ಜೀವರಾಶಿಗಳಿಗಿಂತ ಅವನು ಉತ್ತಮನು ಎಂದು ನಾನು ಎರಡೂ ಕೈಗಳನ್ನೆತ್ತಿ ಶ ಮಾಡುತ್ತ ಪರಮ ಸತ್ಯವಾದ ಈ ಮಾತನ್ನು ಹೇಳುತ್ತಿದ್ದೇನೆ ಕೇಳಿ ಎಂದು ಅ ಹೇಳುತ್ತಾರೆ.

ಇದನ್ನೇ ಮಹಿಪತಿರಾಯರು ಏಳು ನುಡಿಗಳ ತಮ್ಮ ಒಂದು ನಿಡಿ ಕೃತಿಯಲ್ಲಿ ಸುಂದರವಾಗಿ ನಿರೂಪಿಸುತ್ತಾರೆ.

'ಹರಿ ಹರಿ ಹರಿ ಹರಿ ಹರಿಯೆನ ಬೇಕು
ಹರಿ ಸ್ಮರಣೆಯೊಳನುದಿನವಿರಬೇಕು ।।ಧ್ರು।।

(ಮ.ಕೀ.೬೪೩)//

ಈ ಕೀರ್ತನೆಯಲ್ಲಿ 'ಹರಿಯೇ ಶ್ರೀ ಪರಬ್ರಹ್ಮ, ಹರಿ ಪರಂದೈವ, ಹರಿಯೇ ತಾ ತಂದೆ, ಬಂಧು ಬಳಗ, ಆಪ್ತ ಮಿತ್ರರು ಸಲಹುವ ದೊರೆ ಸುಖ ಸೌಖ್ಯದ ಹರಿಯೇ ಸರ್ವೋತ್ತಮ ಸ್ವಾಮಿ, ಸಕಲ ತಾ ಧರ್ಮ, ಹರಿಯೇ ಶ್ರೀ ಪರಮ ಎಂದು ಹೇಳುತ್ತಾರೆ. ಆದ್ದರಿಂದ ಆತನನ್ನು 'ಹರಿ ಹರಿಯೆಂದು ನೆನಿಯೋ ಮರೇ ಮನುಜ' ಎಂದು ಮತ್ತೊಂದು ಕೀರ್ತನೆಯಲ್ಲಿ ಹೇಳುತ್ತಾರೆ. 'ಹಲವು ಪರಿಲಿ ಹರಿಸರ್ವೋತ್ತಮನನ್ನು ನಡೆಯುತ, ನುಡಿಯುತ್ತ ನಡೆನುಡಿಯೊಳಗೆ ಇಡು ತೊಡವುತ ಮುಡವುತ, ಮನದೊಳು, ಉಣುತ, ಉಡುತ ಅನ್ನೋದಕ ಕೊ ವನಿತೆಯರೊಡಗೂಡಿ ಘನಸುಖ ಪಡೆಯುತ ಅನುಭವದಿಂದ ಆನಂದದಿ ತನುಮನದೊಳಗೆ ಕ್ಷಣ-ಕ್ಷಣಕ್ಕೆ ಏಳುತ ಕೂಡುತ ಮಲಗುತ ಆ ಪೊಡವಿಧರ ಬಿಡದೆ ಸ್ಮರಿಸು ಎಂದು ಘಂಟಾ ಘೋಷವಾಗಿ ಹೇಳುತ್ತಾರೆ. (ಮ.ಕೀ.೬೪

ಇನ್ನೊಂದು ಕೀರ್ತನೆಯಲ್ಲಿ ಮಧ್ವಾಚಾರ್ಯರು ತಮ್ಮ ದ್ವಾದಶ ಸ್ತೋತ್ರದ ಹೇಳಿದ 'ಹರಿದೇವ ಪರೋ, ಹರಿರೇವ ಗುರೋಃ ಹರಿದೇವ ಜಗತ್ಪಿತ್ರ ಮಾ ಗತಿಃ।।' ಎಂಬುದನ್ನು ಅವರದೇ ಧಾಟಿಯಲ್ಲಿ

'ಗುರು ಮಧ್ವಪರ್ಸ್ಹೇಳಿದ ನಿಜಕೀಲು।
ಅರಿತುಕೊಂಬುದಿದೆ ಮೇಲು।
ಪರಮಭಾಗವತರನುಭವದ ಬಾಗಿಲು।
ಹರಿದೇವ ಪರೋ ಹರಿದೇವ ಗುರೋ।
ಹರಿಯೇ ಗುರುವೆಂದರಪ್ಪಿರೋ।।' (ಮ.ಕೀ.೬೩

ಎಂದು ತಾನು ಶ್ರೀ ಹರಿಯನ್ನೇ ಗುರು ಎಂದು ಆರಾಧಿಸುವುದನ್ನು ಸ್ಪ ಪಡಿಸುತ್ತಾರೆ. ಮತ್ತು ಅದು 'ಗುರು ಮಧ್ವರು ಹೇಳಿದ ನಿಜ ಕೀಲು' ಎಂಬುದ ಒಪ್ಪುತ್ತಾರೆ.

'ಹರಿದೇವ ಜಗತ್ಪಿತ್ರ ಮಾತ್ರ ಗತಿಃ' ಎಂಬುದನ್ನು

'ಹರಿಯೇ ತಾಯಿತಂದೆನಬೇಕು।
ಹರಿಯೇ ನಿಜಬಂಧುಬಳಗೆನಬೇಕು।
ಹರಿಯೇ ಆಪ್ತ ಮೈತ್ರನಬೇಕು।
ಹರಿ ಕುಲಕೋಟಿ ಬಳಗೆನಬೇಕು।
ಹರಿ ಹರಿ ಹರಿ ಹರಿ ಹರಿಯೆನಬೇಕು।
ಹರಿಸ್ಮರಣೆಯೊಳನುದಿನವಿರಬೇಕು. (ಮ.ಕೀ.೬೪

ಎಂದು ಮುಂದುವರೆದು ತಾವು ಹರಿಯನ್ನೇ ಗುರುವೆಂದು ಆರಾಧಿಸುವುದ ಸ್ಪಷ್ಟಪಡಿಸುತ್ತಾರೆ.

ಇಂಥ ಹರಿಸರ್ವೋತ್ತಮನ ನಾಮಸ್ಮರಣೆಯ ಮಹಿಮೆಯನ್ನು, ಹಿರಿಮೆಯ ರಾಯರು ಹಲವಾರು ಸಲ ತುಂಬು ಹೃದಯದಿಂದ ಸ್ಮರಿಸುತ್ತಾರೆ.

'ಎಲ್ಲಿ ಶ್ರೀ ಹರಿನಾಮ ಘೋಷ।
ಅಲ್ಲಿ ಸಕಲ ಸುಖ ಸಂತೋಷ।
ಸುಲಭದಲಿಹುದು ಭವ ಭಯದ ನಾಶ।
ಹರಿ ನಾಮ ಘೋಷ।।
ಹರಸುವುದಾನಂದದ ಹರುಷ।
ಹರಿಸುವುದು ಕಲಿಮಲ ಕಲುಷ।
ತ್ವರಿತೋಡಿಸುವುದು ಮಹಾಪಾತಕ ದೋಷ।
ಹರಿನಾಮ ಘೋಷ।।
ಸ್ವಹಿತ ಸಾಧನದ ಸು ಉಪದೇಶ।
ಬಾಹ್ಯಾಂತರ ದೋರುವ ಪ್ರಕಾಶ।
ಮಹಿಪತಿಗಿದೆ ನಿತ್ಯವನುಭವದುಲ್ಲಾಸ।
ಹರಿನಾಮ ಘೋಷ।। (ಮ.ಕೀ.೬೨

ಮ ಘೋಷದಿಂದ ಉದ್ಧಾರವಾದವರು ಹಲವರು ಎಂದು ಇನ್ನೊಂದು
ನೆಯಲ್ಲಿ ಹೇಳುತ್ತಾರೆ. ಪ್ರಲ್ಹಾದ, ಪಾಂಡವರು, ಉಪಮನ್ಯು, ಧ್ರುವ,
ಇಬ್ಬರೇ ಹೇಳಿ ಮುಗಿಸದಷ್ಟು ಜನ ಭಕ್ತರಿದ್ದಾರೆ. (ಮ.ಕೀ.೬೪೦) ಶ್ರೀ
ಅನುಯಾಯಿಗಳನ್ನು ಕಂಡರೂ ರಾಯರಿಗೆ ಅನನ್ಯವಾದ ಅಭಿಮಾನ ಮತ್ತು

'ಹರಿನಂಬಿದವರಿಗೆ ಸರಿಯೆ ಜಗದೊಳಗೆ
ಹರಿದಾಸಾದವಗೆ ಸಕಲ ಮಾನ್ಯವಗೆ,

(ಮ.ಕೀ.೬೨೮)

ಕೀರ್ತನೆಯಲ್ಲಿ ಕೊನೆಗೆ 'ಹರಿದಾಸರ ದಾಸಾದ ಮಹಿಪತಿಗೆ ಸರಿಯುಂಟೆ
ಪುಣ್ಯದ ಫಲ ಸ್ತುತಿಗೆ' ಎಂದು ಕೇಳುತ್ತಾರೆ.

'ಹರಿ ಭಕುತರ ದರುಶನವು ಅತಿ ಹರುಷವು' ಎಂದು ಪ್ರಾರಂಭವಾಗುವ
ಂದು ಕೀರ್ತನೆಯಲ್ಲಿ ರಾಯರು ಅವರ ಮಹಿಮೆಗಳನ್ನೆಲ್ಲ ಉಲ್ಲೇಖಿಸಿ
ೆ

'ಹರಿಭಕ್ತರ ಸಂಗ ಸ್ನಾನ ಗಂಗ ತುಂಗ।
ಹರಿಮಹಿಮರ ಅಂಗ ಅಂತರಂಗ।
ಹರಿಪರಮಾನಂದ ಗುರುಕರುಣಾ ಕೃಪಾಂಗ।
ತರಳ ಮಹಿಪತಿ ಭವ ಭಯವು ಭಂಗ'

(ಮ.ಕೀ.೬೩೧)

ತಮ್ಮ ಭಕ್ತಿಯನ್ನು ಸಮರ್ಪಿಸುತ್ತಾರೆ.

'ಹರಿಯು ಪರಾತ್ಪರ ಪೂರ್ಣನು' (ಮ.ಕೀ.೬೩೨)
'ಅತ ತ್ರಿಗುಣರಹಿತ ಆನಂದೋಬ್ರಹ್ಮ' (ಮ.ಕೀ.೧೪೧)
'ಅವನು ಚಿದಾನಂದಾತ್ಮಕ ರೂಪ ಉಳ್ಳವ ಪುರುಷೋತ್ತಮ'(ಕೀ.೧೪೨)

'ಹರಿಯು, ಶ್ರೀಗುರು, ಪರಾತ್ಪರ ಬ್ರಹ್ಮ, ಅತೀತವಾದ ಗುಣತ್ರಯ
ಾತ್ಮ, ನಿರ್ಗುಣಾನಂದ, ನಿಗಮಗೋಚರ ಅಗಣಿತ ಗುಣ ಪರಿಪೂರ್ಣ ಪರಮ
, ಪರಮ ಪ್ರಕಾಶ, ಪರಮಾನಂದ ಸ್ವರೂಪ, ಪರಾತ್ಪರ ಪೂರ್ಣನೂ
ನೆ.' (ಮ.ಕೀ.೯೧)

ಇಲ್ಲಿ ನಿರ್ಗುಣಾನಂದ ಎಂಬ ಮಾತು ಗೂಢವಾಗಿದೆ.. ಆನಂದವು ಬ್ರಹ್ಮನ
ಪವೂ ಹೌದು. ಗುಣವೂ ಹೌದು. ಈ ಗುಣ-ಗುಣಿ ಅಭೇದವನ್ನು
ಸಲು ನಿರ್ಗುಣಾನಂದ ಎಂದು ಹೇಳಲಾಗಿದೆ. ಇದನ್ನು ಕೇವಲ ನಿರ್ಗುಣ
ರ್ಥದಲ್ಲಿ ತೆಗೆದುಕೊಂಡರೆ ಮುಂದೆ ಹೇಳಿದ ಅಗಣಿತಗುಣ ಪರಿಪೂರ್ಣ
ದಕ್ಕೆ ಸಂಗತವಾಗುವುದಿಲ್ಲ' ಎಂದು ಪ್ರೊ।। ಕೆ.ಟಿ. ಪಾಂಡುರಂಗಿ ಅವರು
[illegible]

ಹೀಗೆಯೇ ಇನ್ನೊಂದು ಕೀರ್ತನೆಯಲ್ಲಿ 'ಅಗಣಿತ ಗುಣಪರಿಪೂರ್ಣವಾದ
ು ನಿರ್ಗುಣಾನಂದವಾಗಿಹ್ಯ ನಾಮ' (ಮ.ಕೀ.೨೦೬) ಎಂಬುದನ್ನು
ನಾತ್ಮನ ಸ್ವರೂಪ ಮತ್ತು ಆನಂದಗುಣ ಇವುಗಳಲ್ಲಿ ಭೇದವಿಲ್ಲವೆಂಬುದನ್ನು
ಪಿಸಿರುವುದು, ಶ್ರೀ ಹರಿಯೇ ಗುರುವೆಂದು ಸ್ತುತಿಸುವ ಅವರ ಕೀರ್ತನೆಗಳಲ್ಲಿ
ಹರಿಯ ಮಹಿಮೆಯು ಮಧ್ವ ಸಿದ್ಧಾಂತದ ಪ್ರಮೇಯಗಳಿಗೆ ಅನುಸಾರವಾಗಿ
ರವಾಗಿ ವರ್ಣಿಸಲ್ಪಟ್ಟಿರುತ್ತವೆ'' ಎಂಬ ಪ್ರೊ. ಪಾಂಡುರಂಗಿ ಅವರ
ಾಯವನ್ನು ಗಮನಿಸಬೇಕು.//೫//

ಹರಿ ಸರ್ವೋತ್ತಮತ್ವವನ್ನು ಒಪ್ಪಿಕೊಂಡ ರಾಯರಿಗೆ ಹರಿಯ
ಾರಗಳಲ್ಲಿಯೂ ಪೂಜ್ಯ ಭಾವನೆ, ಅನನ್ಯ ಭಕ್ತಿ, ಹಲವಾರು ಕೀರ್ತನೆಗಳಲ್ಲಿ
, ಕೃಷ್ಣ, ಹಾಗೂ ಹರಿಯ ದಶಾವತಾರಗಳನ್ನು ಮನದಣಿ ಹಾಡಿ
ಳಿದ್ದಾರೆ.

| | |
|---|---|
| ರ್ಭೌಮ ಶ್ರೀರಾಮ ಶರಣ ರಕ್ಷಕ ನೀನು | (ಕೀ ೫೮೨) |
| ರಾಮೆನ್ನಿರೋ ಮುಖ್ಯತಾಕಾರಣ' | (ಕೀ ೪೮೩) |
| ಾಮ ರಾಮನೇ ಸಾರ್ವಭೌಮ' | (ಕೀ ೫೧೯) |
| ು ಸೀತಾರಾಮ ಪತಿತಪಾವನ ನಾಮ' | (ಕೀ ೫೪೯) |
| ಯ್ಯ ರಘುರಾಮ ದೀನ ಜನೋದ್ಧಾರ' | (ಅನು -೭) |
| ು ನೀನೆ ಸಾರ್ವಭೌಮ ರಘುರಾಮ' | (ಅನು- ೨೧) |

ಲಾದ ಕೀರ್ತನೆಗಳಲ್ಲಿ ರಘುರಾಮನನ್ನು ಕೊಂಡಾಡಿದ್ದಾರೆ. ಕೃಷ್ಣಾವತಾರವು
ಹರಿದಾಸರಿಗೂ ಪ್ರಿಯವಾದ ವಿಷಯ, ಅಂತೆಯೇ ರಾಯರಿಗೂ ಅದು
ತಾಗಿಲ್ಲ. ಬಾಲಕೃಷ್ಣ, ನವನೀತಚೋರ ಹಾಗೂ ಅವನ ಅನೇಕ ಲೀಲೆಗಳನ್ನು
ಅನಂತ ಮಹಿಮೆಗಳನ್ನು ಹಲವಾರು ಕೀರ್ತನೆಗಳಲ್ಲಿ ತುಂಬ ಸೊಗಸಾಗಿ
ಪಿಸಿದ್ದಾರೆ.

| | |
|---|---|
| 'ಕೃಷ್ಣ ಎಂಥದೋ ನಿನ್ನ ಕರುಣೆ' | (ಕೀ ೧೭೦) |
| 'ಈತನೀಗ ಕೃಷ್ಣನಾಥನು ಶ್ರೀನಾಥನಮ್ಮ' | (ಕೀ ೮೯) |
| 'ಕೃಷ್ಣ ಕೃಪಾಲ ಕರುಣಾದಾಯಕ' | (ಕೀ ೧೭೧) |
| 'ಕೃಷ್ಣ ಎನಕ್ಯಾಕಯ್ಯ ನಮ್ಮ ಕೂಡ' | (ಕೀ ೧೭೨) |
| 'ಕಪಟನಾಟಕನೀತ 'ಕೃಪಾಸಿಂಧು' | (ಕೀ ೧೩೮) |
| 'ಇವನ ಕಂಡೀರ್ಯಾ ನಮ್ಮ ನವನೀತ ಚೋರನ' | (ಕೀ ೬೪) |
| 'ಇವ ನೋಡಮ್ಮ ನವನೀತ ಚೋರ' | (ಕೀ ೬೫) |

ೊದಲಾದ ಕೀರ್ತನೆಗಳಲ್ಲಿ ಕೃಷ್ಣನ ಮಹಿಮೆ, ಲೀಲೆಗಳು ಹೃದಯಂಗಮವಾಗಿ
ಪಿತವಾಗಿವೆ. 'ವಾಸುದೇವ' ನಾಮವಂತೂ ರಾಯರಿಗೆ ಅತಿಪ್ರಿಯವಾದ ನಾಮ
ಷ್ಟು ಕೀರ್ತನೆಗಳಲ್ಲಿ ವಾಸುದೇವನ ಪ್ರಸ್ತಾಪವಿದೆ.

'ವಾಸುದೇವನೊಬ್ಬನೆ ಸರ್ವೇಶ।
ಭಾಸ್ಕರ ಕೋಟಿ ಪ್ರಕಾಶ।
ಭಾಸುತಲಿಹ್ಯರ ಗುರು ದೇವೇಶ।
ದಾಸ ಮಹಿಪತಿ ಪ್ರಾಣೇಶ।

(ಮ. ಕೀ ೩

ಎನ್ನುತ್ತಾರೆ ಹರಿಯ ದಶಾವತಾರಗಳನ್ನು ಬಣ್ಣಿಸಿದ ರೀತಿ ಅಪರೂಪವಾದದ

ಮಧ್ವ-ಮತದಲ್ಲಿ ಶ್ರೀ ಹರಿಯು ಸರ್ವೋತ್ತಮನೂ, ಪುರುಷೋತ್ತಮ ಆಗಿದ್ದರೆ, ಲಕ್ಷ್ಮೀದೇವಿಯು ಈ ಪ್ರಕೃತಿಯ ನಿಯಾಮಕಳು. ಶ್ರೀ ಹರಿಯು ಅವ ಸೃಷ್ಟಿಯಲ್ಲಿ ಪ್ರೇರಿಸುವನು. ಈಕೆಯು ಅಚೇತನ ಪ್ರಕೃತಿಗೆ ಅಭಿ ನಿಯಾಮಕಳು. ಆಕೆಯ ಅನುಗ್ರಹದಿಂದ, ಚತುರ್ಮುಖ ಬ್ರಹ್ಮದೇ ಬ್ರಹ್ಮಾಂಡವನ್ನು ಸೃಜಿಸುವರು. ಶ್ರೀ ಹರಿಯು ಲಕ್ಷ್ಮೀದೇವಿಯ ಮುಖಾ ಬ್ರಹ್ಮಾದಿ ದೇವತೆಗಳಿಂದ ಈ ಜಗತ್ತಿನ ಎಲ್ಲ ವ್ಯಾಪಾರಗಳನ್ನು ನಡೆಸು ರಾಯರ ಕೃತಿಗಳಲ್ಲಿ ಲಕ್ಷ್ಮೀದೇವಿಯ ಚಿತ್ರ ಕೂಡ ಈ ಅರ್ಥದಲ್ಲಿ ಬಂದಿದ

'ನಮ್ಮಮ್ಮನ ಕಂಡೆ ಬೊಮ್ಮನ ಪಡೆದಿಹಳ' (ಮ. ಕೀ ೩೩೨) ಕೀರ್ತನೆಯಲ್ಲಿ 'ಮಾತಾ ಪಿತೃವೆಂಬುದು ಸೂತ್ರಧಾರಿ ತಾನೊಬ್ಬಳೆ' ಎನ್ನುತ ಜಗತ್ತು ಪಾರಮಾರ್ಥಿಕ ಸತ್ಯವೆಂಬ ವಿಷಯವನ್ನು ಕೂಡ ಅವರ ಅನೇಕ ಕೃತಿಗ ಕಾಣಬಹುದು.

ಮಹಿಪತಿರಾಯರು ಕ್ರಮಿಸಿದ ಮಾರ್ಗವು ರಾಜಯೋಗದ್ವಾದ ಭಕ್ತಿಯೋಗವು ಅವರ ಜೀವನದ ಸಹಜಗತಿಯಾಗಿತ್ತು. ಶ್ರೀ ಹರಿಯ ನಿರ್ದೋಷವಾದ ಭಕ್ತಿಯೇ ಮುಕ್ತಿಗೆ ಸಾಧನ ಎಂಬುದನ್ನು ಅವರು ಒಪ್ಪುತ್ತಾ ಬೇರೆ ಬೇರೆ ಪ್ರಕಾರದ ಸಾಧನ ಸಿದ್ಧಿಗಳು ಅವರ ಮಾಧ್ವ ಸಂಪ್ರದಾಯದ ಶ್ರ ಅಡ್ಡ ಬರಲಿಲ್ಲ. ಇನ್ನೊಂದು ಮಾರ್ಗದ ಸಹಾಯವನ್ನು ಪಡೆದುಕೊಂಡೂ ಅವ ಹರಿದಾಸರ ಮಾರ್ಗದಲ್ಲಿಯೇ ಮುಂದುವರೆದದ್ದು ಅವರ ಜೀವ ವೈಶಿಷ್ಟ್ಯವಾಗಿದೆ. ಶ್ರೀ ಹರಿಯನ್ನು ಅವರು ಆರಾಧಿಸಿದ ಬಗೆಯನ್ನು ನೋಡಿ ಈ ಮಾತು ಸ್ಪಷ್ಟವಾಗುತ್ತದೆ.

'ಸಕಲವೆನಗೆ ಶ್ರೀ ಹರಿಯೇ।
ತಂದೆ ತಾಯಿ ಸ್ವಹಿತಾತ್ಮನು ನೀನೆ।
ಬಂಧು ಬಳಗ ಸರ್ವಾತ್ಮನು ನೀನೆ।
ದೈವ ಗುರು ಕುಲಗೋತ್ರನು ನೀನೆ।
ಕಾವ ಕರುಣ ಸೂತ್ರಾಂತನು ನೀನೆ।

(ಮ. ಕೀ. ೫೨

ಶ್ರೀ ಹರಿಯೇ ಎಲ್ಲದ್ದಕ್ಕೂ ಕಾರಣನು. ಎಲ್ಲವೂ ಶ್ರೀ ಹರಿಯ ಸ್ವರೂಪವೇ ಆಗಿ ಆ ಶ್ರೀ ಹರಿಯನ್ನು ಸೇವಿಸಿ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕು. ಶ್ರೀ ಹರಿ ಸೇವೆಯು ಮುಕ್ತಿಗಿಂತಲೂ ಮೀಗಿಲಾದುದು ಎಂಬುದೇ ಮಹಿಪತಿರಾಯ ಸಂದೇಶವಾಗಿದೆ.

'ಸೇವೆ ಸುಖವೋ ಶ್ರೀ ಹರಿ ಸೇವೆ ಸುಖವೋ।
ಸೇವೆಗಿಂದಧಿಕ ಸುಖ ಸಾಯೋಜ್ಯ ಮುಕುತಿ ಪದದೊಳಗಿಲ್ಲ।
--- --- ---
ದಾಸನಾಗಿ ವಾಸುದೇವನ ಪಾದ ಕಮಲಾರಾಧಿಸುವ॥ (ಮ ಕೀ ೬೨

ಇಂಥ ಶ್ರೀ ಹರಿಯನ್ನು ನಂಬಿದವರಿಗೆ ಜಗದೊಳಗೆ ಸರಿಯಾರು? ಎಂ ಕೇಳುತ್ತ ತಾವು ಹರಿದಾಸರು ಎಂದು ಅಭಿಮಾನಪೂರ್ವಕವಾಗಿ ಹೇಳಿಕೊಳ್ಳುತ್ತಾ ಹೀಗೆ ಹರಿದಾಸರ ದಾಸರಾಗಿ ಶ್ರೀ ಹರಿಯನ್ನೇ ಹೊಂದಿ ಬದುಕಿ ಇಹ-ಪ ಸುಖವನ್ನು ಪಡೆಯುವುದೇ ಜೀವನದ ಉದ್ದೇಶವೆಂದು ಹೇಳುತ್ತಾರೆ.

'ಹೊಂದಿ ಬದುಕಿರೋ ಮನವೆ ಇಂದಿರೇಶನ।
--- --- ---
ಹರಿಚರಣ ಕಮಲವ ಕಂಡು।
ಹರಿನಿಜ ಧ್ಯಾನ ನೆಲೆಗೊಂಡು।
ಹರಿಕರುಣವ ಪಡಕೊಂಡು।
ಹರಿನಾಮಾಮೃತ ಸವಿದುಂಡು।
--- --- --- ---
ಶ್ರೀ ಹರಿಸೇವೆ ಮಾಡಿಕೊಂಡು।
ಇಹ ಪರ ಸುಖ ಸೂರೆಗೊಂಡು।
ಬಾಹ್ಯಾಂತ್ರ ಪೂರ್ಣಮನಗಂಡು।
ಮಹಿಪತಿಸ್ವಾಮಿ ವಾಲ್ಗೈಸಿಕೊಂಡು॥ (ಮ. ಕೀ ೬೫

ಮಧ್ವ ಸಿದ್ಧಾಂತದ ಇನ್ನೊಂದು ಪ್ರಮೇಯವು ಜೀವರಾಶಿಯೆಲ್ಲ ಶ್ರೀ ಹರಿ ಅಧೀನವಾಗಿದೆ ಎಂಬುದು ಅದನ್ನು ರಾಯರು ತಮ್ಮ ಹಲವಾರು ಕೀರ್ತನೆಗಳ ಸೊಗಸಾಗಿ ನಿರೂಪಿಸಿದ್ದಾರೆ.

'ಆನೆ ಮೊದಲಿರುವೆ ಕಡೆ ತಾಂ ನಡೆಸುತಿರಲಿಕ್ಕೆ।
ಜನಕೊಡ್ಡಿ ಕೈಯ ನಾ ದಣಿಯಲೇಕೆ।
ಅನುದಿನ ಹರಿವಾಕ್ಯ ಅನುಭವಿಸುತಿರಲಿಕ್ಕೆ।
ಅನುಮಾನವಿಡಿದು ನಾ ಹೆಣಗಲ್ಯಾಕೆ।
ಸಂಸಾರ ಚಿಂತೆ ನಮ್ಮ ಸ್ವಾಮಿ ಶ್ರೀ ಹರಿಗುಂಟು।
ಕಂಸಾರಿ ಕೃಷ್ಣ ಕರುಣಿಸುವ ಇದರಿಟ್ಟು' (ಮ ಕೀ ೬೨

ಅದರಂತೆ 'ಬಲು ದೊಡ್ಡ ದೊರೆ ದೊರಕಿದೆನಗೊಬ್ಬ ನೋಡಿ' ಎಂಬ (ಮ ಕೀ.೪೦೪) ಕೀರ್ತನೆಯಲ್ಲಿ ಹರಿ ಸರ್ವೋತ್ತಮತ್ವ, ಹರಿಯ ಅಧೀನತೆ, ತಾರತಮ ಮೊದಲಾದ ಮಧ್ವ ಸಿದ್ಧಾಂತದ ಪ್ರಮೇಯಗಳನ್ನು ನೋಡಬಹುದು. ಇ

ದೃಷ್ಟಿಯಿಂದ 'ಇಂದು ಶ್ರೀ ಗುರುಪಾದಪದ್ಮ' (ಕೀ -೮೩), 'ಈತ ಶ್ರೀನಾ
ತ್ರೈಲೋಕ್ಯಕೀತ' (ಕೀ-೯೦) ಇವುಗಳಲ್ಲಿಯ 'ಶೇಷಶಯನ,' 'ಪಿತಾಮಹ
ಮೊದಲಾದ ಪದಗಳು ಹಾಗೂ 'ಕರುಣಾಕರನೀತ ಕರಿಭಯಹರಿದಾತ
ಪರಂದೈವ ಗುರುನಾಥ' (ಕೀ-೧೪೧) 'ನಮ್ಮ ಕುಲದೈವನೀತ ಬೆ
ಪಡೆದಾತ' (ಕೀ-೩೩೩) 'ಮಂಗಳಾರತಿ ಮಾಡಿ ಮಂಗಳ ಮಹಿಮಾನಂಗ ಜ
ತುಂಗ ವಿಕ್ರಮಂಗೆ ಮಂಗಳಾರತಿಯ' (ಕೀ-೪೭೮) 'ಲೇಸು ಲೇಸಾಯಿತು
ಗುರು ಕೃಪೆ ಲೇಸು ಲೇಸಾಯಿತು' (ಕೀ- ೪೮೬) ಮೊದಲಾದ ಕೀರ್ತನೆಗ
ದ್ವೈತಪರ ಪದಗಳನ್ನು ಗಮನಿಸಬೇಕು.

'ಲೇಸು ಲೇಸಾಯಿತು ಭಾಸ್ಕರ ಗುರುಕೃಪೆ' ಎಂಬ ಕೀರ್ತನೆ ವಾಸ್ತ
ಅವಧೂತ ಪರಂಪರೆಯ ಭಾಸ್ಕರ ಗುರುಗಳನ್ನು ಸ್ತುತಿಸುವ ಕೀರ್ತನೆ.
ಕೊನೆಯ ಸಾಲುಗಳು ಹೇಳುವ 'ಕೂಡಿತು ಸಮರಸವಾಗಿ ಮಹಿಪತಿ ಜೀವ ಒ
ಚರಣದಂಗುಷ್ಠದಲಿ' ಎಂಬುದು ಮಧ್ವ ಸಂಪ್ರದಾಯವನ್ನೇ ಹೇಳುತ್ತಿ
ಗಮನಾರ್ಹವಾಗಿದೆ.

ಹರಿತತ್ವ ಹೇಳುವ 'ಎನ್ನಪರಾಧವೇನು ನಿನ್ನ ಸೂತ್ರಾಡಿಸಿದ್ಹಾಂಗ ಆಡುವ
(ಕೀ ೧೦೨) 'ಕಾಯೋ ಕಾಯೋ ಕಾಯೋ ದಯಾನಿಧಿ ಕರುಣ
(ಕೀ-೧೬೫) ಎಂಬ ಕೀರ್ತನೆಗಳೂ ಉಲ್ಲೇಖಾರ್ಹವಾಗಿವೆ.

ಬಿಂಬಿರೂಪೀ ಪರಮಾತ್ಮನ ಸಾಕ್ಷಾತ್ಕಾರ ದ್ವೈತಭಾವ ಮೊದಲಾದವು
ಗುರುತಿಸುವ ಕೆಲವು ಕೀರ್ತನೆಗಳನ್ನು ನೋಡಬಹುದು.

'ಇಕ್ಕೋ ಘನ ಪರಬ್ರಹ್ಮದ ಬೆಳಗಿದು
ಶುಕಾದಿ ಮುನಿಗಳು ಸೇವಿಸುವದು' (ಕೀ. ೨

'ಧನ್ಯ ಗೈಸಿತು ಮೂಢ ಮಹಿಪತಿ
ಪ್ರಾಣ ಜೀವ ಕೈವಲ್ಯ ನಿಧಿ ಗುರುನಾಥ (ಕೀ. ೩

'ದೀನ ಮಹಿಪತಿಗೆ ಸನಾಥ ಮಾಡುವ
ಸ್ವಾನುಭವ ಬ್ರಹ್ಮ ಭೋಗ' (ಕೀ-೪

'ಬುಧ ಜನರನುದಿನ ಸೇವಿಸುತಿಹ್ಯ
ಸದಮಲವಾದ ಸದಾ ಸುವಿಸುಖ' (ಕೀ-೬

'ಧನ್ಯಗೈಸಿತು ಮಹಿಪತಿ ಪ್ರಾಣಜೀವನ' (ಕೀ-೬

ಮುಂಬಿಗಾಗ್ಯಾವೈನ್ನೊಳು ಸು ಉಲ್ಲಾಸ
ಂಬುಜಾಕ್ಷನ ಕಂಡೆ ಸು ಪ್ರಕಾಶ
ಂಬಿ ತುಳುಕುತಲ್ಕದ ಬಲು ಹರುಷ
ಂಬು ಸಾಲದು ಬ್ರಹ್ಮಾಂಡ ಆಕಾಶ
ೀನ ಮಹಿಪತಿ ಸ್ವಾಮಿ ಕೃಪಾಸಿಂಧು
ನೋಹರ ಮಾಡಿದತಾನೆ ಬಂದು' (ಕೀ-೬೯)

ೀನ ಮಹಿಪತಿಗಾನಂದ ಸುಕಾಲ
ಾನುಕೋಟಿ ತೇಜ ದಾಸಾನುಕೂಲ' (ಕೀ-೭೬)

ಾಸುತಾನೆ ಸರ್ವೇಶ ಭಾಸ್ಕರ ಕೋಟಿ ಪ್ರಕಾಶ (ಕೀ-೮೦)

ಾನುಕೋಟಿ ತೇಜ ಪ್ರಕಾಶ ನೋಡುವ
ೀನ ಮಹಿಪತಿ ಸ್ವಾಮ್ಯಂದು ಕೊಂಡಾಡುವ' (ಕೀ-೮೩)

ಣ್ಣಾರೆ ಕಂಡೆ ಸದ್ಗುರು ಚರಣ
ನ್ಯಧನ್ಯವಾಯಿತು ಮಹಿಪತಿ ಜೀವನ' (ಕೀ-೧೧೬)

ಶವ ಭವಿಸುವ ಅವಿನಾಶನ ಪ್ರಭೆಯಿದು
ಹಿಪತಿ ವಸ್ತು ಮಯವೊ' (ಕೀ-೧೧೯)

ಣ್ಣಾರೆ ಕಂಡೆ ಭಾನುಕೋಟಿ ಪ್ರಕಾಶ
ಮ್ಮ ಧನ್ಯ ಧನ್ಯವಾದ ಮಹಿಪತಿಯು' (ಕೀ-೧೯೭)

ಾಸ ಮಹಿಪತಿಯೊಳದೆ ವಾಸವಾಗ್ಯದೆ' (ಕೀ-೩೭೫)

ಳಗೇ ಬೆಳಗಾಯಿತು ಘನ ಗುರುದಯ
ಮನದೊಳು ನಿಜ ಒಡಮೂಡಿ' (ಕೀ-೪೨೪)

ಲೋಕಪಾಲಕ ಸ್ವಾಮಿತಾ ಸಹಕಾರಿ' (ಕೀ-೧೯)

ಹೀಗೆ ಇನ್ನೂ ಅನೇಕ ಕೀರ್ತನೆಗಳನ್ನು ಉದಾಹರಿಸಬಹುದು. ಮೇಲ್ನೋಟಕ್ಕೆ ದ್ವೈತ ಪರವಾದ, ಅವಧೂತ ಪಂಥದ ಪರಮಾತ್ಮನೊಡನೆ ಐಕ್ಯ ರ್ಥವನ್ನೀಯುವ ಅವರ ಕೀರ್ತನೆಗಳನ್ನು ಕೂಡ ಸೂಕ್ಷ್ಮವಾಗಿ ನೋಡಿದ ್ವೈತಪರ ಭಾವನೆಯೇ ಕಂಡು ಬರುತ್ತದೆ.

'ಸೂರ್ಯನಿಲ್ಲದ ಸುಪ್ರಕಾಶ ತುಂಬೇದ ಹೇಳಲೇನ
ಚಂದ್ರನಿಲ್ಲದೆ ಬೆಳದಿಂಗಳು ಬಿದ್ದದ ಬಹಳ' (ಕೀ-೧೧)

ಎನ್ನುವ ಪದ್ಯದಲ್ಲಿ ಪ್ರಕಾಶದ ಅನುಭವವನ್ನು ನಿರೂಪಿಸುತ್ತ ಕೊನೆಯ ಸಾಲಿ 'ದೀನ ಮಹಿಪತಿಗೆ ತಾನೆ ತಾನಾದ ಸದ್ಗುರುವೀಗ' ಎಂದು ಹೇಳುತ್ತಾರೆ. ' ವಾಸ್ತವವಾಗಿ ' ದೀನ ಮಹಿಪತಿ ತಾನೆ ತಾನಾದ' ಎಂದು ಹೇಳದೆ 'ದೀನ ಮಹಿ ತಾನೆ ತಾನಾದ' ಎಂಬ ಚತುರ್ಥಿ ವಿಭಕ್ತಿಯನ್ನು ಉಪಯೋಗಿಸಿದ್ ಗಮನಿಸಬೇಕು. ಸಂಬಂಧವಾಚಕವಾದ ಚತುರ್ಥಿ ವಿಭಕ್ತಿಯ ಪ್ರಯೋಗವು ತ ಅನುಭವದೊಡನೆ ಐಕ್ಯವನ್ನು ಹೇಳದೆ ಪರಮಾತ್ಮನು ತಮಗೆ 'ತಾನೆ ತಾ ಸದ್ಗುರುವಾದ' ಎಂದು ಮಾತ್ರ ಹೇಳಿರುವುದು ಪರಮಾತ್ಮನ ನಾದ ಸ್ವರೂಪ ನಿರೂಪಿಸುವಾಗ ತಾವು ಮಾತ್ರ ಭಿನ್ನವಾಗಿಯೇ ಉಳಿಯುತ್ತಾರೆ.

ಮಧ್ವ ತತ್ವಗಳಲ್ಲಿ ಅಚಲವಾದ ನಂಬುಗೆಯನ್ನಿಟ್ಟ ರಾಯರು ತಮ್ಮ ಹರಿಭ ತಕ್ಕಂತೆ, ತಮ್ಮ ಆಚಾರ್ಯರಾದ ಶ್ರೀ ಮಧ್ವರನ್ನು ಕೊಂಡಾಡಿರುವುದನ್ನು ಗಮನಿಸಬೇಕಾದುದು ಅಗತ್ಯವಾಗಿದೆ.

'ಗುರು ಮಧ್ವ ಮುನಿರನ್ನ ಮೂರು ಪರಿಯ ದೋರಿದೆ ನಿನ್ನ।
ಹರಿಭಕ್ತಿಯಲಿ ಅವಿಚ್ಛಿನ್ನ ಸರಿಯಾರು ಧರೆಯೊಳು ನಿನ್ನ।
ಸ್ಮರಣೆಯಲಿಹೆ ರಾಮನ ಪರಮ ಪಾವನ್ನ।।

ಅತಿ ಪರಾಕ್ರಮ ಕ್ಷಿತಿಯೊಳು ನಿನ್ನದೆ ನೇಮ।
ಪ್ರಥಮದಲ್ಲಾದೆ ಹನುಮ ದ್ವಿತೀಯದಲ್ಲಾದೆ ಭೀಮ।
ತೃತೀಯದಲಿ ಪೂರ್ಣಪ್ರಜ್ಞನೆನಿಸಿದೆ ನಿಸ್ಸೀಮ।।

ಸಾಹ್ಯಕ್ಕೆ ಕಾರಣ ಮಹಾದೈತ್ಯರ ಮರ್ದನ।
ಶ್ರೀ ಹರಿ ಸಾನ್ನಿಧ್ಯ ಪೂರ್ಣ ಇಹ ಸಕಲ ನಿಪುಣ।
ಮಹಿಪತಿ [illegible] ಪ್ರಾಣ ಸ್ವಹಿತ ಸಾಧನ।। (ಕೀ-೨೧

ಹೀಗೆ ಶ್ರೀ ಹರಿಯ ಸಾನ್ನಿಧ್ಯ ವಿಶೇಷವಿರುವ ಆಚಾರ್ಯ ಮಧ್ವರ ಸ್ತುತಿಸಿದ್ದಾರೆ. ಅವಿಚ್ಛಿನ್ನವಾದ ಹರಿಭಕ್ತಿಯಲ್ಲಿ ಅವರಿಗೆ ಸರಿಯಾದವರು ಯಾ ಇಲ್ಲವೆಂದೂ ಹೇಳಿದ್ದಾರೆ. ಮತ್ತು ಗುರು ಮಧ್ವರು ವಾಯುದೇವರ ಅವತ ಎಂಬುದನ್ನು ನೆನೆದಿದ್ದಾರೆ. ಆಚಾರ್ಯ ಗುರುಮಧ್ವರನ್ನು ಸ್ಮರಿಸುವದರೊಂ ತಮ್ಮ ಇನ್ನೊಂದು ಕೀರ್ತನೆಯಲ್ಲಿ ಗುರು ಪರಂಪರೆಯನ್ನು ಸ್ತುತಿಸಿದ್ದಾರೆ. 'ನೆನೆ ನಮಿಸುವೆನು ವಾರಂ ವಾರ' (ಕೀ-೩೭೧) ಎಂಬ ಕೀರ್ತನೆಯನ್ನು ಗಮನಿಸಿ ವಂಶಪರಂಪರೆಯಾಗಿ ಈ ಮನೆತನದವರ ಆಚಾರ -ವಿಚಾರಗಳ ಸಂಪ್ರದಾಯ ಮಧ್ವಮತಾನುಯಾಯಿಗಳೆಂಬುದು ಸ್ಪಷ್ಟವಾಗುತ್ತದೆ.

ಮೊದಲೇ ಹೇಳಿದಂತೆ ಅವರ ಮಾರ್ಗ ಕೇವಲ ಭಕ್ತಿಯದಾಗಿರಲಿಲ್ಲ. ಲೌ

ಜೀವನದಿಂದ ಅವರನ್ನು ಆಧ್ಯಾತ್ಮದ ಕಡೆಗೆ ಸೆಳೆದ ಶಕ್ತಿ ಯೋಗ ಪ್ರಧಾನವಾ
ಅವರ ಚಿತ್ತ ಆತ್ಮಾನು ಸಂಧಾನದ ಮೂಲಕ ಆ ಪರಮಾತ್ಮನನ್ನು, ಪರವಸ್ತು
ಪರಬ್ರಹ್ಮನನ್ನು ಕಂಡು, ಆ ಚಿತ್ಸುಖವನ್ನು ಅರಿಯುವತ್ತ ಹೊರಳಿತು.
ಕಾರಣಗಳಿಂದ "ಅವರು ಶ್ರೀ ಮನ್ಮಧ್ವಾಚಾರ್ಯರು ಪ್ರತಿಪಾ
ಹರಿಸರ್ವೋತ್ತಮತ್ವವನ್ನು ನಂಬಿ, ಆ ಮೂಲಕ ತಮ್ಮ ಆಧ್ಯಾತ್ಮಿಕ ಬಲ
ಮೊದ-ಮೊದಲು ಬೆಳೆಸಿಕೊಂಡರು ಎನ್ನಲು ಅಡ್ಡಿಯಿಲ್ಲ' ಎಂಬ ಡಾ.
ವರದರಾಜರಾವ್ ಅವರ ಅಭಿಪ್ರಾಯ ಸರಿಯಲ್ಲ //೬// ಯಾ
ಬೆಳೆಸಿಕೊಳ್ಳಲು ಮೊದಮೊದಲು ಅಥವಾ ಕೊನೆಕೊನೆಗೆ ಎಂಬ ಕಾಲಾವಕ
ಅವರ ಜೀವನದಲ್ಲಿ ಬರಲಿಲ್ಲ. ಅಭೂತಪೂರ್ವವಾದ ಅನುಭವವು ಒಂದು
ಕಳೆಯುವುದರ ಒಳಗಾಗಿ ಅವರಿಗೆ ಬಂದು ಬಿಟ್ಟಿತ್ತು. ಅದನ್ನು ಅವರ ಪ
ಒದಗಿಸಿಕೊಟ್ಟ ಸಕಲ ಶ್ರೇಯಸ್ಸು ಸಾರವಾಡದ ಮಹಾಯೋಗಿಗಳಾದ ಶ್ರೀ ಭ
ಸ್ವಾಮಿಗಳಿಗೆ ಸೇರಿದ್ದೆಂದು ರಾಯರೇ ಹೇಳುತ್ತಾರೆ. ಆ
ಯೋಗಾನುಭವಗಳನ್ನು ಹೇಳುವಾಗಲೂ ಕೂಡ ತಾವು ನಂಬಿದ, ಮಧ್ವ
ಸೂಕ್ಷ್ಮ ತತ್ವಗಳನ್ನು ಅನುಭವಗಳನ್ನು ಮರೆಯದೆ ವ್ಯಕ್ತಪಡಿಸಿರು
ಗಮನಾರ್ಹವಾಗಿದೆ. ಅದರ ಪ್ರತ್ಯೇಕ ಅಭ್ಯಾಸದ ಅಗತ್ಯವಿದೆಯೆಂದು ಹೇಳಬಹ

ಆದ್ದರಿಂದ ಅವರ ಆಧ್ಯಾತ್ಮಿಕ ಬಲದ ಬೆಳವಣಿಗೆಗೂ ವಂಶಪಾರಂಪರ್ಯ
ಬಂದ ಸಂಪ್ರದಾಯಕ್ಕೂ ತಳಕು ಹಾಕುವುದು ಉಚಿತವೆನಿಸುವುದಿಲ್ಲ. ಶ್ರದ್ಧೆ
ಸಿದ್ಧಿ ಬೇರೆ, ಶ್ರದ್ಧೆ ರಕ್ತಗತವಾಗಿ ಬಂದದ್ದು ಸಿದ್ಧಿ ಸ್ವ ಸಾಧನದಿಂದ ಬಂ
ಆದಕ್ಕಾಗಿ ಮಧ್ವಮತ ಸಂಪ್ರದಾಯದ ತಮ್ಮ ಶ್ರದ್ಧೆಯನ್ನು ಬದಲಿಸಿಕೊ
ಪ್ರಮೇಯವೂ ರಾಯರಿಗೆ ಬರಲಿಲ್ಲ. ಕೊನೆಯವರೆಗೂ ಅವರು ಮಾಧ್ವರಾ
ಉಳಿದರು. ಆ ಮತದಲ್ಲಿಯ ತತ್ವಗಳಿಗೆ ಬದ್ಧರಾಗಿದ್ದರು. ಅದರಂತೆ ಅವರು
ರಾಜಯೋಗ ಮಾರ್ಗದಲ್ಲಿ ಸಾಧಿಸಿದ ಸಿದ್ಧಿಯೂ ಅನನ್ಯವಾಗಿದೆ.
ಮಾತಿನಲ್ಲಿಯೇ ಹೇಳುವದಾದರೆ "ಆಡೇನಂದರ ಆ ಮಾತು ನಾಡಿಗೇನು ತಿ
ಪಡೆದವಗೆ ದೋರಿತು ಬಿಡದ್ದಾಂಗಾತು" (ಕೀ-೧೩೩) ಅದರ ಕಿಂಚಿತ್ ದ
ಪ್ರಯತ್ನವನ್ನು ಈಗ ಮಾಡಬಹುದು.

## ೬.೩ ಸಾಧನೆ

ಆಧ್ಯಾತ್ಮಿಕ ಅನುಭವಗಳು ಅಂತರಂಗದ ಜಗತ್ತಿಗೆ ಸೇರಿದವುಗಳು. ಸ
ಸಿದ್ಧಪುರುಷನ ಅಂತರಂಗದ ಅನುಭವಗಳನ್ನು ಅರ್ಥ ಮಾಡಿಕೊಳ್ಳು
ಅವುಗಳನ್ನು ವಿಶ್ಲೇಷಿಸಿ ವಿಮರ್ಶಿಸುವುದು ಅತ್ಯಂತ ಕಠಿಣದ ಕೆಲಸ. ಅನುಭ
ಅಂತರಂಗದ ಜೀವನ ಅದರಲ್ಲಿಯೂ ಅವರು ಪಡೆದ ಅನುಭವಗಳನ್ನು
ಬರೆಯುವುದು ಸಾಹಸದ ಮಾತಾಗುತ್ತದೆ. ತಮ್ಮ ಜೀವನ ಚರಿತ್ರೆ

ಯುವುದಕ್ಕೆ ಒಪ್ಪಿಗೆ ಕೇಳಿದ ಸಾಧಕರೊಬ್ಬರಿಗೆ ಮಹಾಯೋಗಿ ಶ್ರೀ ಅರವಿಂದರು
ಜೀವನ ಚರಿತ್ರೆಯನ್ನು ಬರೆಯುವುದು ಯಾರಿಂದಲೂ ಸಾಧ್ಯವಿಲ್ಲ ಏಕೆಂದರೆ
ಮಾನವೀಯ ಪ್ರಜ್ಞೆಯ ಆಚೆಗೆ ನಡೆದದ್ದು' ಎಂದು ಉತ್ತರ ಕೋಟ್ಟರು.
ಅನುಭಾವಿಯು ಏರಿದ ಎತ್ತರವನ್ನು ನಿರ್ದಿಷ್ಟವಾಗಿ ಹೇಳುವದು ಅಸಾಧ್ಯ.
ನ ನಡೆ ನುಡಿಗಳಿಂದ, ಸಮಾಜ ವ್ಯಕ್ತಿಗಳ ಜೊತೆಗೆ ಅವನು ಇಟ್ಟುಕೊಂಡ,
ಬಂಧಗಳ ಮೇಲಿಂದ, ಅಲ್ಲಲ್ಲಿ ವ್ಯಕ್ತಪಡಿಸಿದ ಶಬ್ದಗಳ ಮೂಲಕ ಅವರ ಸಿದ್ಧಿಯ
ರೂಪವನ್ನು ಊಹಿಸಿಕೊಳ್ಳಬಹುದು.

ಮಹಿಪತಿರಾಯರ ಆಧ್ಯಾತ್ಮಿಕ ಸಾಧನೆ, ಅವರು ಅನುಸರಿಸಿದ ಅನುಭಾವ
ಮಾರ್ಗ ಹಾಗೂ ಪಡೆದ ಸಿದ್ಧಿಗಳ ಕುರಿತು ಬರೆಯುವುದಕ್ಕೆ ಅವರ ಜೀವನದಲ್ಲಿ
ನಡೆದವೆನ್ನಬಹುದಾದ ಘಟನೆಗಳು ಹಾಗೂ ಅವರು ರಚಿಸಿದ ಕೀರ್ತನೆಗಳೇ
ಆಧಾರವಾಗಿವೆ. ಅವುಗಳನ್ನು ಕೀರ್ತನೆಗಳು ಎನ್ನುವುದಕ್ಕಿಂತ ಕೃತಿಗಳು ಅಥವಾ
ರಗಳು ಎಂದು ಕರೆಯುವುದೇ ಹೆಚ್ಚು ಸೂಕ್ತವೆನ್ನಿಸುತ್ತದೆ. ಈ ಕೃತಿಗಳ
ಆಧಾರದಿಂದ ಅವರ ಆಧ್ಯಾತ್ಮ ಜೀವನ ಸಾಧನೆ ಹಾಗೂ ಸಿದ್ಧಿಗಳ ಕುರಿತು ಇಲ್ಲಿ
ಹೇಳಲು ಪ್ರಯತ್ನಿಸುತ್ತಿರುವುದು ಒಂದು ಪ್ರಯೋಗವೇ ಹೊರತು, ಈ ಕುರಿತು
ಇದಮಿತ್ಥಂ' ಎಂದು ಅಲ್ಲ. ಅದಕ್ಕೆ ಮೊದಲು ಸಾಧಕನ ಜೀವನದ ಹಿನ್ನೆಲೆಯನ್ನು
ತಿಳಿದುಕೊಳ್ಳುವದು ಅವಶ್ಯವಾಗಿದೆ.

ಮನುಷ್ಯನು ಆಧ್ಯಾತ್ಮ ಜೀವನವನ್ನು ಯಾಕೆ ಬಯಸುತ್ತಾನೆ? ಈ ಮಾರ್ಗದತ್ತ
ಹೊರಳಲು ಕಾರಣವಾದರೂ ಏನು? ಎಂಬ ಪ್ರಶ್ನೆಗಳು ಉದ್ಭವಿಸುವುದ
ಸಹಜವಾಗಿದೆ. ಪ್ರತಿಯೊಬ್ಬನು ತನ್ನ ಜೀವನವನ್ನು ಸುಖಮಯವನ್ನಾಗಿ
ಮಾಡಿಕೊಳ್ಳುವಲ್ಲಿ ಎಂದಿನಿಂದಲೂ ಪ್ರಗತಿಯನ್ನು ಸಾಧಿಸುತ್ತ ಬಂದಿದ್ದಾನೆ. ಈ
ರಿತು ವೈಜ್ಞಾನಿಕ ಸಂಶೋಧನೆಗಳೂ ಅವನ ನೆರವಿಗೆ ಬಂದಿವೆ. ಈಗಲೂ ಕೂ
ಹೊಸ ಹೊಸ ಸಂಶೋಧನೆಗಳತ್ತ ಅವನು ಮುಂದುವರೆದಿದ್ದಾನೆ. ಆದರೂ ಮನುಷ
ಸುಖವಾಗಿದ್ದಾನೆಯೇ? ಎಂಬ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲ. ಅನಾ
ಕಾಲದಿಂದಲೂ ಅವನು ಎದುರಿಸುತ್ತಿರುವ ಮೂಲಭೂತ ಸಮಸ್ಯೆಗಳು ಇನೂ
ಪರಿಹಾರ ಕಾಣದೆಯೇ ಉಳಿದಿವೆ. ಹಾಗಾದರೆ ಪರಿಹಾರ ಕಾಣದ ಮೂಲಭೂ
ಸಮಸ್ಯೆಗಳು ಯಾವವು? ತನಗೆ ತಿಳಿದೋ ಅಥವಾ ತಿಳಿಯದೆಯೊ ಮನುಷ
ಹುಡುಕುತ್ತಿರುವುದು ದುಃಖರಹಿತವಾದ ಆನಂದ, ಮರಣ ರಹಿತವಾದ ಜೀವನ
ಇವುಗಳನ್ನು ಪಡೆಯಲು ಮಾನವನು ನಿರಂತರವಾಗಿ ಹೋರಾಟವನ್ನು ನಡೆಸಿಯೆ
ದ್ದಾನೆ. ಇವುಗಳನ್ನು ಪಡೆಯಲು ಅಸಂಖ್ಯ ತೊಂದರೆಗಳನ್ನೂ ಎದುರಿಸಿದ್ದಾನ
ಅನೇಕ ಆಘಾತಗಳನ್ನು ಸಹಿಸಿದ್ದಾನೆ. ಇಷ್ಟಾಗಿಯೂ ಅವುಗಳನ್ನು ಪಡೆಯಲ
ವಿಫಲನಾಗಿದ್ದಾನೆ. ಆದರೆ ಅವುಗಳನ್ನು ಪಡೆದೇ ತೀರುವ ಅಭಿಪ್ಸೆಯು ಅವ

ಹೃದಯದಲ್ಲಿ ಬೆಳೆಯುತ್ತಲೇ ನಡೆದಿದೆ. ಈ ಅಭೀಪ್ಸೆಯ ಪರಿಪೂರ್ಣತ
ಮಾನವನು ಹುಡುಕಿಕೊಂಡ ಮಾರ್ಗ ಆಧ್ಯಾತ್ಮ ಜೀವನವಾಗಿದೆ. ಪ್ರತಿಯ
ಪ್ರಜ್ಞಾವಂತ ಮನುಷ್ಯನು ಮಾನವನ ಮೂಲಭೂತ ಸಮಸ್ಯೆಗಳ ಪರಿಹಾರಕ್ಕೆ
ಜೀವನದ ಪರಿಪೂರ್ಣತೆಗೆ ಆಧ್ಯಾತ್ಮದ ಕಡೆಗೆ ಹೊರಳುವುದು ಸಹಜವಾಗಿ

ಸರಿ, ಪ್ರಜ್ಞಾವಂತ ಮನುಷ್ಯನು ಆಧ್ಯಾತ್ಮದ ದಾರಿಯನ್ನು ಬಯಸುತ್ತಾನೆ.
ಅದು ಯಾವಾಗ ಮತ್ತು ಹೇಗೆ ಎಂಬುದು ಈ ವರೆಗೆ ರಹಸ್ಯವಾಗಿಯೇ ಉ
ಜೀವನದಲ್ಲಿಯ ಈ ತೆರನಾದ ಪರಿವರ್ತನೆಯ ಕಾಲ-ಕಾರ
ಬೇರೆ-ಬೇರೆಯಾಗಿಯೇ ಇವೆ. ಆದರೂ ಈ ಮಾರ್ಗದಲ್ಲಿ ನಡೆದ ಯೋ
ಅನುಭಾವಿಗಳ, ಸಂತರ ಜೀವನ ಚರಿತ್ರೆಗಳನ್ನು ಅವಲೋಕಿಸಿದಾಗ ಅವ
ಆಧ್ಯಾತ್ಮದ ದಾರಿಯತ್ತ ಹೊರಳಲು ಸಾಮಾನ್ಯವಾದ ಕೆಲವು ಕಾರಣಗಳು
ಬರುತ್ತವೆ.

೧ ಬಾಲ್ಯದಿಂದಲೂ ಬೆಳೆದುಬಂದ ಆಧ್ಯಾತ್ಮಿಕ ವಾತಾವರಣ ಹಾ ಸಂಸ್ಕಾರಗಳು ಇದಕ್ಕೆ ಉದಾಹರಣೆಯಾಗಿ, ಶಂಕರ-ಮಧ್ವ ಶ್ರೀಪಾದರಾಯರು, ವ್ಯಾಸತೀರ್ಥರು ಮೊದಲಾದವರ ಹೆಸರುಗ ಹೇಳಬಹುದು.

೨ ಜೀವನದಲ್ಲಿ ತೀವ್ರ ನಿರಾಸೆಯನ್ನು ಅನುಭವಿಸಿ, ಜೀವನದ ವಿಫಲತೆಯ ಅನುಭವಿಸಿ ಅನಂತರ ಆಧ್ಯಾತ್ಮದತ್ತ ಹೊರಳಿದವರು - ಇಲ್ಲಿ ಗೌ ಬುದ್ಧ, ಕನಕದಾಸ ಮೊದಲಾದವರನ್ನು ಹೇಳಬಹುದು.

೩ ಅಕಸ್ಮಾತ್ತಾಗಿ ಎಂಬಂತೆ ನಡೆದ ವಿಲಕ್ಷಣ ಘಟನೆಗಳಿಂದ ಆಯಾಚಿತ ಒದಗಿ ಬಂದ ಗುರುಗಳ ಅನುಗ್ರಹದಿಂದ ತಮ್ಮ ಜೀವನದ ಗತಿಂ ಬದಲಿಸಿ ಆಧ್ಯಾತ್ಮದತ್ತ ಹೊರಳಿದವರು, ಜಯತೀ (ಟೀಕಾರಾಯರು), ತುಳಸೀದಾಸರು, ಅರವಿಂದರು, ವಿವೇಕಾ ಮೊದಲಾದವರ ಹೆಸರುಗಳನ್ನು ಉಲ್ಲೇಖಿಸಬಹುದು.

ಮಹಿಪತಿರಾಯರು ಈ ಮೂರನೆಯ ಗುಂಪಿಗೆ ಸೇರಿದವರಾ
ಸಾರವಾಡದಲ್ಲಿ ಭಾಸ್ಕರ ಸ್ವಾಮಿಗಳನ್ನು ಭೇಟಿಯಾಗುವುದಕ್ಕಿಂತ ಮೊದಲು
ಅರ್ಥದಲ್ಲಿ ಅವರು ಸಾಧಕರಾಗಿರಲಿಲ್ಲ. ಭಾಸ್ಕರ ಸ್ವಾಮಿಗಳ ಭೆಟ್ಟಿ ಮತ್ತ
ಅನುಗ್ರಹಗಳು ರಾಯರ ಜೀವನದಲ್ಲಿ ಸಂಪೂರ್ಣ ಪರಿವರ್ತನೆಯನ್ನೇ
ಮಾಡಿದುವು.

ಭಾಸ್ಕರ ಸ್ವಾಮಿಗಳ ಮೊದಲು ಸೂಫಿ ಸಂತ 'ನಂಗಾಶಾಹ'ನ ಭೆಟ್ಟಿ
ಉಂಗುರದ ಕಥೆಗಳು ಮರಾಠಿ ಚರಿತ್ರೆಯಲ್ಲಿ ಬರುತ್ತವೆ. ಆದರೆ ಇತರತ್ರ
[illegible] ದೊರೆಯುವುದಿಲ್ಲ. ವಿಶೇಷತಃ ಸಾರವಾಡದ ಭಾಸ್ಕರ

ಕುರಿತು ಮಹಿಪತಿರಾಯರು ತಮ್ಮ ಹಲವಾರು ಕೃತಿಗಳಲ್ಲಿ ಸ್ಮರಿಸಿ
ನಂಗಾಶಾಹನ ಕುರಿತು ಒಂದು ಕೃತಿಯಲ್ಲೂ ಉಲ್ಲೇಖಿಸದಿದ
ಗಮನಾರ್ಹವಾಗಿದೆ. ಆದರೂ ಅವರ ಒಂದು ಕೃತಿ 'ಜಯದೇವ ಜಯದೇವ
ಗುರು ನಾಗೇಶ' (ಕೀ- ೨೪೦) ದಲ್ಲಿಯ 'ನಾಗೇಶ'ವನ್ನು ಅರ್ಥಮಾಡಿಕೊಳ್ಳು
ಕಠಿಣವಾಗುತ್ತದೆ. ಮುಂದಿನ ನುಡಿಗಳು ಹಿಂದುಗಳ ನಾಗದೇವತೆಯ
ಉಲ್ಲೇಖಿಸುವುದಿಲ್ಲ. ಪ್ರತಿಯಾಗಿ 'ಜನ್ಮ ಮರಣಗಳೆಂಬ ಖಚ್ಚಿ ಕವಡಿಗಳು'
ಸಾಲುಗಳು ಸೂಫಿ ಸಂತರ ಶಬ್ದಗಳಂತೆ ಕಾಣುತ್ತವೆ. ಈ ನಾಗೇಶನೇ 'ನಂ
ಅಥವಾ 'ನಂಗಾಶಾಹ' ಇರಬಹುದೇ ಎಂಬ ಸಂದೇಹ ಬರುತ್ತದೆ. ಹಾ
ಅದೊಂದು ಅಪೂರ್ವ ಏಕೈಕ ಕೃತಿ ಎನಿಸುತ್ತದೆ. ಆದರೆ ಮುದ್ರಿತ ಪಾಠದ ವ್ಯ
ಇತರ ಹಸ್ತಪ್ರತಿಗಳಲ್ಲಿ ಈ ಕೃತಿಯು ದೊರೆಯುವುದಿಲ್ಲ.

ಈ ಕಾರಣಗಳಿಂದ ಮಹಿಪತಿರಾಯರ ಪರಿವರ್ತನೆಗೆ ಮೊದಲ ಕಾರಣಕತ
ಭಾಸ್ಕರ ಸ್ವಾಮಿಗಳೆಂದೇ ಭಾವಿಸಲಾಗಿದೆ.

ಯೋಗ ಸಾಧನ ಮಾರ್ಗವು ತನ್ನದೇ ಆದ ರೀತಿ ಹಾಗೂ ನಿಯಮಗ
ಹೊಂದಿದೆ. ಸಾಧಕನು ಪ್ರಾಮಾಣಿಕವಾಗಿ ತನ್ನ ಸಾಧನ ಮಾರ್ಗ
ಗೊತ್ತಿಲ್ಲದೆಯೇ ಮುಂದುವರೆದಂತೆ ಅವನಿಗೆ ಯೋಗ್ಯ ಕಾಲದಲ್ಲಿ ಯ
ಗುರುಗಳು ದೊರೆತು ಅವರಿಂದ ಮಾರ್ಗದರ್ಶನವೂ ದೊರೆಯುತ್ತದೆ. ಆದೆ
ಪೂರ್ವನಿಯೋಜಿತವಾಗಿದ್ದರೂ, ಆ ನಿರ್ದಿಷ್ಟ ಸಮಯ ಒದಗಿ ಬರುವ
ಸಾಧಕನಿಗೆ ಅದರ ಸುಳಿವು ಕೂಡ ದೊರೆಯುವುದಿಲ್ಲ. ಟೀಕಾರಾಯರಿಗೆ
ಅಕ್ಷೋಭ್ಯತೀರ್ಥರ ಭೆಟ್ಟಿ, ಸ್ವಾಮಿ ವಿವೇಕಾನಂದರಿಗೆ ಶ್ರೀ ರಾಮಕೃಷ್ಣ ಪ
ಹಂಸರ ಭೆಟ್ಟಿ ಇವು ಸಾಧಕನಿಗೆ ಒದಗಿ ಬರುವ ಘಟನೆಗಳು. ಇವುಗಳಿಂದ
ಮಾರ್ಗದ ವಿಚಿತ್ರ ರೀತಿಯ ಅರಿವಾಗದೇ ಇರದು. ಈ ಕುರಿತು 'ಸನತ್ಸು ಜಾತಿ
ಯೋಗ ಹಾಗೂ ಅದರ ಉದ್ದೇಶಗಳು' ಎಂಬ ಗ್ರಂಥದಲ್ಲಿ ವಿಶದವಾಗಿ ಹೇ
ಸಾಧನ ಮಾರ್ಗವು ದೊರೆಯಬೇಕಾದರೆ ಸಾಧಕನಿಗೆ ನಾಲ್ಕು ಸಂಗತಿಗಳು ಅವಶ್ಯ.

೧.ಸಂಕಲ್ಪ, ೨.ಕಾಲ, ೩.ಗುರು ಹಾಗೂ ೪.ಶಾಸ್ತ್ರ, ಇವುಗಳೇ ಆ ನಾ
ಸಂಗತಿಗಳು, ಸಾಧನ ಮಾರ್ಗದಲ್ಲಿ ಮುಂದುವರೆಯಲು - ಸಾಧಕನಿಗೆ
ಸಂಕಲ್ಪವು ಅವಶ್ಯವಾಗಿದೆ. ಅದಕ್ಕೆ ಯೋಗ್ಯ ಕಾಲವು ಒದಗಿ ಬರಬೇಕು. ಕಾ
ಪಕ್ವವಾದಾಗ ನಿಯತ ಗುರುಗಳು ದೊರೆಯುತ್ತಾರೆ ಮತ್ತು ಮುಂದಿನ ಸಾಧ
ಶಾಸ್ತ್ರಜ್ಞಾನದ ಅವಶ್ಯಕತೆ ಇದೆ. ಅದುಕೂಡ ದೈವಾನುಗ್ರಹದಿಂದ ಲಭ್ಯವಾಗುತ್ತ

ದೇವರಿದ್ದಾನೆಯೇ ಎಂಬ ಪ್ರಶ್ನೆ ಸ್ವಾಮಿ ವಿವೇಕಾನಂದರನ್ನು ಕಾಡುತ್ತಿ
ಅದಕ್ಕೆ ಉತ್ತರ ಹುಡುಕುವುದರಲ್ಲಿಯೇ ಅವರು ನಿರತರಾಗಿದ್ದರು. ದೇವರ ಅಸ್ತಿ

ಪ್ರಶ್ನೆ, ಅದನ್ನು ಹುಡುಕುವುದೇ ಅವರ ಸಂಕಲ್ಪವಾಗಿತ್ತು. ಯೋಗ್ಯ ಕಾಲವು ಬಂದಾ ಅವರಿಗೆ - ಶ್ರೀ ರಾಮಕೃಷ್ಣ ಪರಮ ಹಂಸರ ಭೆಟ್ಟಿಯಾಯಿತು. ರಾಮಕೃಷ್ಣ ಪರ ಹಂಸರ ತಪಸ್ಸಿನ ಫಲ ಸ್ವಾಮಿ ವಿವೇಕಾನಂದರ ಆಳವಾದ ಶಾಸ್ತ್ರ ವ್ಯಾಸಂಗ ಅವರ ಸಿದ್ಧಿಯ ಕಡೆಗೆ ಕರೆದೊಯ್ಯಿವು. ಮಳಖೇಡದ ಟೀಕಾರಾಯರ ವಿಷಯವೂ ಇ ರೀತಿಯಾಗಿದೆ. ದೇಶಪಾಂಡೆಗಳ ಮನೆತನದಲ್ಲಿ ಹುಟ್ಟಿದ ಧೊಂಡೋಪಂತ ಸಾಂಪ್ರದಾಯಿಕ ನಿತ್ಯಕರ್ಮಗಳನ್ನು ಮಾಡುತ್ತ ಶಾಸ್ತ್ರವ್ಯಾಸಂಗವನ್ನೂ ತಕ್ಕ ಮ ಮಾಡಿದ್ದರು. ಅವರ ಅಂತರಂಗದಲ್ಲಿ ಭಗವಂತನ ಕಡೆಗೆ ಒಲವು ಇರಲೇಬೇ ಬಹಿರಂಗದಲ್ಲಿ ಅದು ಕಾಣಿಸಿರಲಿಲ್ಲ. ಕಾಲವು ಪಕ್ವವಾದಾಗ ಅಕ್ಷೋಭ್ಯತೀರ್ಥರು ಭೆಟ್ಟಿಯಾದರು. 'ಕಿಂ ಪಶು: ಪೂರ್ವ ದೇಹೇ' ಎಂಬ ಗುರು ವಾಕ್ಯವು ಧೊಂಡೋಪಂತರಿಗೆ ಪೂರ್ವಜನ್ಮದ ಸ್ಮರಣೆಯನ್ನು ತಂದುಕೊಟ್ಟಿ ಅದು ಅವರ ಜೀವನದಲ್ಲಿ ಪರಿವರ್ತನೆಯ ಕ್ಷಣವಾಗಿ ಪರಿಣಮಿಸಿತು. ಮ ಅವರೇ ಜಯತೀರ್ಥರಾಗಿ ಟೀಕಾರಾಯರೆಂದು ಲೋಕವಿಖ್ಯಾತರಾದರು.

ಮಹಿಪತಿರಾಯರು ಬ್ರಾಹ್ಮಣ ವೈದಿಕ ಸಂಪ್ರದಾಯದಲ್ಲಿ ಬೆಳೆದ ಪರಂಪರೆಯಿಂದ ಶಾಸ್ತ್ರವ್ಯಾಸಂಗವನ್ನು ಮಾಡಿದವರಾಗಿದ್ದರು. ಧ ಪರಾಯಣರಾಗಿ, ಪ್ರಾಮಾಣಿಕವಾಗಿ ಜೀವನವನ್ನು ಸಾಗಿಸಿದ್ದರು. ಅ ರಾಜಕೀಯದಲ್ಲಿ ಸೇರಿ ಲೌಕಿಕವಾಗಿ ಸಾಕಷ್ಟು ಉನ್ನತ ಪದವಿಯನ್ನು ಪಡೆದ ಐಹಿಕ ಸುಖಭೋಗಗಳಲ್ಲಿ ಮುಳುಗಿದವರಾಗಿದ್ದರು. ಆದರೆ ಅಂತರಂ ಆಧಾರವು ಶುದ್ಧವಾಗಿ ಸಾಧನ ಜೀವನಕ್ಕೆ ಸಿದ್ಧವಾಗಿದ್ದರು. ಯೋಗ್ಯ ಗು ಅವಶ್ಯಕತೆ ಇತ್ತು. ಈ ಸಮಯದಲ್ಲಿ 'ನಂಗಾಶಾಹ' ನ ಭೆಟ್ಟಿ ಒಂದು ನಿಮಿ ಅವರಿಗೆ ಭಾಸ್ಕರ ಸ್ವಾಮಿಗಳ ಸಂದರ್ಶನವು ಒದಗಿ ಬಂದಿತು. ಗುರು-ಶಿಷ ಮಿಲನವು ಮಹಿಪತಿರಾಯರ ಜೀವನದಲ್ಲಿ ಅಪೂರ್ವ ಬದಲಾವಣೆಯನ್ನು ತ ಈ ಭೆಟ್ಟಿಯ ನಂತರ ರಾಯರು ತಮ್ಮ ಇಡೀ ಜೀವನವನ್ನು ಸಾಧನಕ ಮೀಸಲಿಟ್ಟರು.

ಗುರುಗಳ ಮೊದಲ ದರ್ಶನದಲ್ಲಿಯೇ ರಾಯರಿಗೆ ದಿವ್ಯ ಅ ಅನುಭವವಾಯಿತು. ತಮಗೆ ಬಂದ ಅನುಭವವನ್ನು ಅವರು ತಮ್ಮ ಒಂದು ಕ ಸುಂದರವಾಗಿ ನಿರೂಪಿಸಿದ್ದಾರೆ.

'ಇಂದ್ಯೆನ್ನ ಜನ್ಮ ಪಾವನವಾಯಿತು
ತಂದೆ ಶ್ರೀಗುರು ನಿಮ್ಮ ಚರಣದರುಶನದಿ' (ಕೀ-೮೮)

ಎಂದು ಪ್ರಾರಂಭವಾಗುವ ಕೃತಿಯು ಗೂಢ ಆಧ್ಯಾತ್ಮಿಕ ಅನು ಒಳಗೊಂಡಿದೆ. ಕೊನೆಯ ನುಡಿಯು ಅವರಿಗೆ ಗುರುದರ್ಶನವು ಒದ

ರಿಯನ್ನು ಸ್ಪಷ್ಟವಾಗಿ ಹೇಳುತ್ತದೆ.

> 'ಭಾಸ್ಕರಸ್ವಾಮಿಯು ಕರುಣಾಳು ಮೂರ್ತಿಯು।
> ಮೂಢಮಹಿಪತಿಯ ಕೃಪಾಂಬುಧಿಯು।
> ಕರುಣದಿ ಅಭಯ ಹಸ್ತವನು ಶಿರಸದಲ್ಲಿಡಲಾಗಿ।
> ಧನ್ಯನಾದೇನು ಸತಿಪತಿ ಸಹವಾಗಿನ್ನು।।

ಗುರುಚರಣಗಳಲ್ಲಿ ನಮಸ್ಕರಿಸಿದಾಗ ಭಾಸ್ಕರ ಸ್ವಾಮಿಗಳು ತಮ್ಮ ವರದ ಹಸ್ತವ ಮಹಿಪತಿರಾಯರ ತಲೆಯಮೇಲಿಟ್ಟರು. ಆ ಕ್ಷಣವೇ ಮಹಿಪತಿರಾಯರಿಗೆ ದಿ ಅನುಭವವಾಯಿತು. "ಅರ್ಕ ಮಂಡಲಗಳು, ರವಿ-ಶಶಿ ಕಿರಣಗ ಥಳ-ಥಳಿಸುವ ಪ್ರಭೆಯನ್ನು ಅವರು ನೋಡಿದರು. ಓಂಕಾರ ಮೊದಲ ದ್ವಾದಶನಾಮದ ವೇದ ಘೋಷಗಳನ್ನು ಕೇಳಿದರು. ಚಿನ್ಮಯ ಚಿದ್ರೂಪವನ್ನು ಕಂ ಡೆರಗಾದರು. ಏಕೋ ದೇವ ಈತ ವಿಶ್ವಾತ್ಮ ಹಂಸನೆಂದು ಕಂಡುಕೊಂಡರು. ಅ ಆತ್ಮದಲ್ಲಿ ಭಕ್ತಿ-ಮುಕ್ತಿಯು ಉದಾರಿಯಾಗಿ ಸಾರಿ ದೋರಿತು. ಉತ್ಪತ್ತಿ ಲಯದ ಬೀಜವು ಹುರಿದು, ಧರೆಯೊಳಗೆ ಗರ್ಭಪಾಶದ ಬಲಿಯು ಹರಿಯಿ ಇಪ್ಪತ್ತೊಂದು ಸಾವಿರ ಆರು ನೂರದ ಜಪದ ರೀತಿಯು ತಿಳಿಯಿತು. ಸುಷುಮ್ನದ ಪ್ರಾಣೇಶ ಮೂರ್ತಿಯ ಅರಿವು ಮೂಡಿತು. ಅಂಧತ್ವ ಕಳೆದು ಪ್ರಕಾಶ ಮೂಡಿತ ಈ ಅಭುಭವವೇ ವಿಲಕ್ಷಣವಾದದ್ದು ಅದು ಭಾಸ್ಕರ ಸ್ವಾಮಿಗಳ ವರದ ಹಸ್ತ ಸ್ಪಶ ಪರಿಣಾಮವು. ಮಹಿಪತಿರಾಯರ ಹೃದಯದ ಸಂಕಲ್ಪವು ಶಾಸ್ತ್ರಾಭ್ಯಾಸಂಗದಿ ಅಂತರಂಗದ ಶುದ್ಧಿಯಾಗಿ ಸಕಾಲವು ಒದಗಿ ಬಂದಾಗ ಗುರು ಭಾಸ್ಕರರ ದರ್ಶನವ ಅವರ ಜೀವನವು ಧನ್ಯವಾಯಿತು. ಆದರೆ ಇದೆಲ್ಲ ಗುರು ದರ್ಶನ ಸ್ಪ ಮಾತ್ರದಿಂದ ಸಾಧ್ಯವೆ? ವರದ ಹಸ್ತವನ್ನು ಶಿರಸದಲ್ಲಿಟ್ಟಾಕ್ಷಣ ಈ ಅನುಭ ಸಾಧ್ಯತೆ ಇದೆಯೇ ಎಂಬ ಸಮಸ್ಯೆಗೆ ಈ ಶತಮಾನದ ರಾಮಕೃಷ್ಣ ಪರಮಹಂ ಹಾಗೂ ವಿವೇಕಾನಂದರ ಕಥೆಯೇ ಸಾಕ್ಷಿಯಾಗಿದೆ. ವಿವೇಕಾನಂದರಿಗೆ ಪರಮಹಂ ದೇವರನ್ನು ತೋರಿಸಿದ ಕಥೆ ಲೋಕವಿಖ್ಯಾತವಾಗಿದೆ.

ಸಾಧನ ಮಾರ್ಗದಲ್ಲಿ ಪ್ರವೇಶಿಸಿದ ಸಾಧಕನು, ಸಾಧನೆಮಾಡಿ ಮ ವಿಧಗಳಲ್ಲಿ ಸಿದ್ಧಿಯನ್ನು ಪಡೆಯಬೇಕಾಗುತ್ತದೆ. ಪರಮಾತ್ಮನ ಸಾಕ್ಷಾತ್ಕಾರ ಮೊದಲನೆಯದು ಆತ್ಮ ಸಾಕ್ಷಾತ್ಕಾರ. ತನ್ನಲ್ಲಿಯೇ ಅಡಗಿದ ಪರಮಾ ಬಿಂಬರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವದು - ಅದು ವೈಯಕ್ತಿಕ ಸಾಕ್ಷಾತ್ಕಾರವೆನಿಸುತ್ತದೆ. ಅನಂತರ ಎರಡನೆಯ ಹಂತ ವಿಶ್ವಸಾಕ್ಷಾತ್ಕಾರ. ಅ ಪರಮಾತ್ಮನ ರೂಪವನ್ನು ಇಡೀ ವಿಶ್ವದ ಪ್ರತಿಯೊಂದು ವಸ್ತುವಿನಲ್ಲಿ ಅನುಭವಿಸುವುದು. ಮೂರನೆಯ ಹಂತ ವಿಶ್ವಾತೀತ ಸಾಕ್ಷಾತ್ಕಾರ. ತನ್ನಲ್ಲಿ, ವಿಶ್ವ ಕಂಡ ಪರಮಾತ್ಮನು ವಿಶ್ವಾತೀತನಾಗಿರುವುದನ್ನು ಅನುಭವಿಸುವುದೇ ಆಗಿದೆ. ಇವ

ಗಾಗಿ ಸಾಧಕನು ಮೊದಲು ತನ್ನಲ್ಲಿಯ ಲೋಪದೋಷಗಳನ್ನು
ಸಿಕೊಳ್ಳಬೇಕಾಗುತ್ತದೆ. ಆಗ ಆತನು ಮನಸ್ಸು ದೇಹಗಳಲ್ಲಿ ಪವಿತ್ರನಾಗುವನು.
ಯಿಂದ ಪರಮಾತ್ಮನನ್ನು ಆರಾಧಿಸುವನು. ತನ್ನ ಹೃದಯದಲ್ಲಿ ಪರಮಾತ್ಮನ
ನವನ್ನು ಪಡೆಯುವನು. ಒಮ್ಮೆ ಹೀಗೆ ಆತ್ಮ ಸಾಕ್ಷಾತ್ಕಾರವಾದ ಮೇಲೆ
ಕನು ನಿಮ್ನ ಪ್ರಕೃತಿಯಿಂದ ಮುಕ್ತನಾಗುವನು. ಅವನ ಅಹಂಕಾರವು
ರ್ಣವಾಗಿ ಇಲ್ಲದಾಗಿ ಜೀವನವೆಲ್ಲವೂ ಪರಮಾತ್ಮನ ಸಂಕಲ್ಪವೆಂಬುದು ಅವನ
ಭವಕ್ಕೆ ಬರುತ್ತದೆ. ಕರ್ಮ ಬಂಧನದಿಂದ ಮುಕ್ತನಾಗುವನು ಮತ್ತು ಈ ಜೀವನ
ಲೆಯನ್ನು ಅವನು ಕೇವಲ ಸಾಕ್ಷಿಯಾಗಿ ಅವಲೋಕಿಸತೊಡಗುವನು. ಅವನ
ವನವೆಲ್ಲವೂ ಭಗವಂತನಿಗೆ ಅರ್ಪಿತವಾಗಿ ಕೇವಲ ದೈವೀ ಸಂಕಲ್ಪದಂತೆಯೇ
ನು ಜೀವಿಸುವನು ಮತ್ತು ಭಗವಂತನ ಸಂಕಲ್ಪದ ಪೂರ್ಣತೆಗಾಗಿಯೇ ಅವನ
ವಿಸುವನು. ಅವನ ನಿತ್ಯದರ್ಶನಕ್ಕಾಗಿ ಹಂಬಲಿಸುವನು.

ಹೀಗೆ ಭಗವಂತನ ಸಾಕ್ಷಾತ್ಕಾರವಾದ ಮೇಲೆ ಆ ಭಗವಂತನು ಇಡೀ ವಿಶ್ವವನ್ನೆ
ಂಬಿರುವ ಅನುಭವವು ಸಾಧಕನಿಗೆ ಆಗುತ್ತದೆ. ಸೃಷ್ಟಿಯೆಲ್ಲವೂ ಭಗವಂತ
ಭಿವ್ಯಕ್ತಿ, ಎಲ್ಲವೂ ಭಾಗವತ ಚೇತನ, ಸರ್ವವೂ ಮಂಗಲಮಯ. ಪವಿ
ರಮಾತ್ಮನನ್ನು ಉಳಿದು ಬೇರೆ ಏನೂ ಇಲ್ಲ. ಈ ವಿರಾಟ್ ವಿಶ್ವವೆಲ್ಲವ
ಗವಂತನ ಸಂಕಲ್ಪ ಮತ್ತು ಎಲ್ಲದರಲ್ಲಿಯೂ ಅಂದರೆ ಒಳಗೆ, ಹೊರಗೆ, ಮೇ
ಗೆ, ಹಿಂದೆ, ಮುಂದೆ, ಎಡಕ್ಕೆ, ಬಲಕ್ಕೆ ಹೀಗೆ ಎಲ್ಲ ಕಡೆಗೆ ಕೇವಲ ಭಗವಂತ
ಸ್ತಿತ್ವವೇ ತುಂಬಿದೆ ಎಂಬ ಅನುಭವವನ್ನು ಪಡೆಯುವನು.

ಇಡೀ ವಿಶ್ವವನ್ನು ತುಂಬಿದ ಹಾಗೂ ಎಲ್ಲವೂ ತಾನೇ ಆಗಿರುವ ಭಗವಂತ
ಈ ವಿಶ್ವವನ್ನು ಮೀರಿ ಅದರ ಆಚೆಗೂ ಇರುವನು. ತನ್ನ ಲೀಲೆಗಾಗಿ ತಾನೇ ಸೃಷ್ಟಿ
ಈ ವಿಶ್ವದ ಯಾವ ಬಂಧನಗಳಿಗೂ ಅವನು ಒಳಗಾಗಿಲ್ಲ. ಅವನು ವಿಶ್ವಾತೀತನ
ಸ್ವತಂತ್ರನೂ ಸ್ವಯಂ ಪೂರ್ಣನೂ, ಸಕಲ ಗುಣ ಪರಿಪೂರ್ಣನೂ ಆಗಿರುವ
ಸಾಧಕನು ಈ ವಿಶ್ವಾತೀತ ಪರಮಾತ್ಮನ ಸಾಕ್ಷಾತ್ಕಾರದ ಅನುಭವವ
ಪಡೆಯುವನು.

ಮಹಿಪತಿರಾಯರು ತಮ್ಮ ಸಾಧನದಿಂದ ಈ ಮೂರು ಅವಸ್ಥೆಗಳ ಸಿದ್ಧಿಯ
ಪಡೆದವರಾಗಿದ್ದರು. ಸಿದ್ಧಿಯನ್ನು ಪಡೆಯುತ್ತಿದ್ದಂತೆ ಕ್ರಮವಾಗಿ ಅವುಗಳನ್ನು ತ
ಕೃತಿಗಳಲ್ಲಿ ಸ್ಪಷ್ಟವಾಗಿ ನಿರೂಪಿಸಿದರು. ಅವರ ಯೋಗಾನುಭವವ
ಆಶ್ಚರ್ಯಕರವಾದ ರೀತಿಯಲ್ಲಿ ಅಭಿವ್ಯಕ್ತವಾಗಿದೆ. ಅತ್ಯಂತ ಗೂಢ ಹಾ
ರಹಸ್ಯವೆಂದು ತಿಳಿಯಲಾದ ಅನುಭವಗಳನ್ನು ಕೂಡ ಅವರು ಸುಲಭವಾದ ಹಾ
ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಹೇಳಿದ್ದಾರೆ. ಅವರ ಅನುಭವಗಳನ್ನು

ಗಳಲ್ಲಿಯೇ ತಿಳಿದುಕೊಳ್ಳುವುದೂ ಒಂದು ಆನಂದದ ಅನುಭವ.

ಮಹಿಪತಿರಾಯರು ತಮ್ಮ ಸಾಧನಕ್ಕೆ ಬಳಸಿದ್ದು ರಾಜಯೋಗ, ರಾಜಯೋಗದ ಮುಖ ಉಪಕರಣವೆಂದರೆ ಮನಸ್ಸು, ಸಾಮಾನ್ಯ ಮನಸ್ಸನ್ನು ನಿಯಂತ್ರಿಸಿ, ಸ್ಥಿರಗೊಳಿಸಿ ಅದನ್ನು ದೈವೀ ಪ್ರಜ್ಞೆಯತ್ತ ಹರಿಬಿಡಬೇಕು. ಆಸನ ಪ್ರಾಣಾಯಾಮಗಳ ಸಹಾಯದಿಂದ ದೈಹಿಕ ಶಕ್ತಿ ಪ್ರಾಣಶಕ್ತಿಗಳನ್ನು ಸ್ವಚ್ಛಗೊಳಿಸಿ ಏಗ್ರಗೊಳಿಸಬೇಕು. ದೈಹಿಕ ಹಾಗೂ ಪ್ರಾಣಶಕ್ತಿಗಳನ್ನು ಶುದ್ಧಗೊಳಿಸುವುದರಿಂದ ಸ್ವತ ದೈವೀ ಪ್ರಜ್ಞೆ ಮತ್ತು ಶಕ್ತಿಗಳನ್ನು ಧರಿಸಲು ಅವು ಶಕ್ತವಾಗುವವು. ಈ ಹಿಕ ಹಾಗೂ ಪ್ರಾಣ ಶಕ್ತಿಗಳ ಮೇಲೆ ಅವಲಂಬಿಸಿದ ಮನಸ್ಸು, ಅವುಗಳ ಾಯದಿಂದ ತಾನೂ ಶುದ್ಧವಾಗಿ ಏಕಾಗ್ರತೆಯನ್ನು ಸಾಧಿಸುವುದು. ನಿಮ್ನಸ್ತರದ ಾರಗಳು ಹಾಗೂ ಭಾವನೆಗಳಿಂದ ಮುಕ್ತವಾದ ಮನಸ್ಸು ಊರ್ಧ್ವಗಾಮಿಯಾಗಿ ಗುತ್ತ ದೈವೀ ಪ್ರಜ್ಞೆಯನ್ನು ಮುಟ್ಟುತ್ತದೆ. ಈ ದೈವೀ ಪ್ರಜ್ಞೆಯನ್ನು ಮುಟ್ಟಿದ ನಸ್ಸು ಸಮಾಧಿ ಸ್ಥಿತಿಯನ್ನು ಹೊಂದುತ್ತದೆ. ಸಮಾಧಿ ಸ್ಥಿತಿಯನ್ನು ಹೊಂದಿದ ನಸ್ಸು ಆತ್ಮದ ಮುಕ್ತಿಗೆ ಸಹಾಯಕವಾಗಿ ಆತ್ಮನಲ್ಲಿ ಪರಮಾತ್ಮನ ೂರ್ತಿಯನ್ನು ಕಾಣಲು ಸಾಧ್ಯವಾಗುತ್ತದೆ.

ಸಾಧನದ ಪ್ರಾರಂಭದಲ್ಲಿ ಅದರಲ್ಲಿಯೂ ಧ್ಯಾನಮಾರ್ಗದಲ್ಲಿ ಮನಸ್ಸಿನ ಕಾರಗಳು ಏಕಾಗ್ರತೆಗೆ ಭಂಗವನ್ನುಂಟು ಮಾಡುತ್ತವೆ. ಮನಸ್ಸು ಸ್ವಭಾವತಃ ಂಚಲವಷ್ಟೆ. ಆ ಚಂಚಲ ಮನಸ್ಸಿನ ಹೊಯ್ದಾಟ ನಿಂತು ಅದು ಸ್ತಬ್ಧವಾಗದೆ ುಂದಿನ ದಾರಿಯು ಸುಗಮವಾಗುವುದಿಲ್ಲ. ಭಾಸ್ಕರ ಸ್ವಾಮಿಗಳ ಕೃಪೆಯಿಂದ ತಮ್ಮ ನಸ್ಸು ಹೇಗೆ ಶಾಂತವಾಯಿತು ಎಂಬುದನ್ನು ಮಹಿಪತಿರಾಯರು ತಮ್ಮ ಅನೇಕ ಶಿಗಳಲ್ಲಿ ಹೇಳಿದ್ದಾರೆ.

> 'ಲೇಸಾಯಿತು ಲೇಸಾಯಿತು ಭಾಸ್ಕರ ಗುರುಕೃಪೆ ಲೇಸಾಯಿತು।
> ಹಸ್ತವಿಡಲು ಎನ್ನಮಸ್ತಕದ ಮೇಲೆ ಸ್ವಸ್ಥಹೊಂದಿತು ಮನ ನಿಶ್ಚಯದಲಿ।।'
>
> (ಮ.ಕೀ-೪೮೬)
>
> 'ಲೇಸಾಯಿತು ಸದ್ಗುರುಕೃಪೆ ಲೇಸು ಲೇಸಾಯಿತು।
> ನೀಡಿದಭಯ ಹಸ್ತ ಮಾಡಿತು ಮನಸ್ವಸ್ಥ।
> ಗೂಢವಾಗಿಹ್ಯ ವಸ್ತುಗೂಡಿತು ಸಾಭ್ಯಸ್ತ। (ಕೀ-೪೮೭)

ಗುರುಕೃಪೆಯಿಂದ ಅವರ ಮನಸ್ಸು ಶಾಂತವಾಗಿ ಅಂತರ್ಮುಖವಾಯಿತು. ಂತರಂಗದಲ್ಲಿಯ ಪರಮಾತ್ಮನತ್ತ ಹೊರಳಿತು. ಸಾವಧಾನ ಚಿತ್ತದಿಂದ ಅಂತಸ್ಥ ರಮಾತ್ಮನೆಡೆಗೆ ಅವರ ಭಕ್ತಿಯು ಹರಿಯಿತು. ಆಗ ಪರಮಾತ್ಮನ ದರ್ಶನದ ಂಬಲ ಅಧಿಕವಾಗತೊಡಗಿತು. ಹಂಬಲ ಹೆಚ್ಚಾದಂತೆ ಪರಮಾತ್ಮನ ದರ್ಶನದ

ಾ ಕಾಣಹತ್ತಿದುವು.

ಂದು ಹೊಳೆವುತದೆ ಸುಚಿನ್ನಬೋಧ।
ಾದೆ ಕಂಡೆವೆನೊ ಸದ್ಗುರು ಶ್ರೀಪಾದ।
ಾ್ರಣದೊಡೆಯ ಬಾಪ್ಪಾಂಗನೇನೋ।
ಪೂರ್ಣ ಕ್ಷಣಕ್ಕೊಮ್ಮಾಗುತಿದೆ ಸುಶಕುನ।
ಣ್ಣು ಬ್ಯಾರುತಿದೆ ಬಲದೆನ್ನ।
ಕೆನ್ನಾಗ್ಯಾಗಮ್ಯ ತಾನೇನೋ ಸುಪ್ರಸನ್ನ।
ಹೋಳಭುಜ ಹಾರುತಿದೆ ಬಹಳ।
ಬಲಗಣ್ಣು -ಬಲಭುಜಗಳು ಹಾರುತ್ತ ಶುಭಶಕುನಗಳು ತೋರುತ್ತಿದ್ದಂತೆ,
ಬುದ್ಧಿ ಮನಸಿಗಾಗುತಿದೆ ವಿಕಾಸ।
ಸಧ್ಯ ಹೃದಯವಾಗುತದೆ ಉಲ್ಲಾಸ।
ಸಾಧ್ಯವಾಗುವ್ಹಾಂಗ್ಹಾನೇನೋ ತಾ ಸರ್ವೇಶ।
ಖೂನ ದೋರಿ ಬರುತದೆನಗೊಂದು।
ಭಾನುಕೋಟಿ ತೇಜ ತಾ ಬಾಪ್ಪಾಂಗಿಂದು।
ದೀನ ಮಹಿಪತಿಗುರು ಕೃಪಾಸಿಂಧು। (೬೯-೮೭)

ಭಗವಂತ ಇನ್ನೇನು ಬಂದೇಬಿಟ್ಟ, ಬಂಧು ದರ್ಶನ ಕೊಡುತ್ತಾನೆಂಬ ಶುಭ ಗಳಾದುವು. ಆದರೆ ಇದು ದರ್ಶನವಲ್ಲವಲ್ಲ! ಮತ್ತೆ ಸಾಧನೆ ದುವರೆಯಿತು. ಅದರ ಪರಿಣಾಮವಾಗಿ ಅವರಿಗೆ ಮತ್ತೆ ಅನೇಕ ಭವಗಳಾದವು. ರಾಜಯೋಗ ಮಾರ್ಗದಲ್ಲಿಯ ಒಂದೊಂದೇ ಬಾಗಿಲುಗಳು ಯುತ್ತ ಹೋದವು. ಈಗ ಮನಸ್ಸು ಅಂತರ್ಮುಖವಾಯಿತಷ್ಟೆ. ಅನಂತರ ಲಾಧಾರದಲ್ಲಿ ನಿದ್ರಿಸುತ್ತಿರುವ ಕುಂಡಲಿನಿಯು ಜಾಗ್ರತವಾಗಿ ಬೆನ್ನಹುರಿಯ ಾ-ಪಿಂಗಳ ನಾಡಿಗಳ ಮಾರ್ಗದಿಂದ ಮೇಲಕ್ಕೇರಿ ಸುಷುಮ್ನಾ ನಾಡಿಯ ತುದಿಯ ಲಿ ಏರುತ್ತದೆ. ಅಲ್ಲಿಂದ ಕಂಠದಲ್ಲಿಯ ವಿಶುದ್ಧ ಚಕ್ರದ ಮುಖಾಂತರ ಮುಂದೆ ತಲೆಯಲ್ಲಿಯ ಬ್ರಹ್ಮರಂಧ್ರದವರೆಗೆ ಸಾಗುವುದು. ಅಲ್ಲಿ ಸಹಸ್ರದಳ ಲದಲ್ಲಿ ಲೀನವಾಗುವುದು. ಈ ರೀತಿ ಕುಂಡಲಿನಿ ಜಾಗ್ರತವಾಗಿ ಮೇಲಕ್ಕೆ ೀಗುವಾಗ ಸಾಧಕನಿಗೆ ವಿವಿಧ ಅನುಭವಗಳು ಬರುತ್ತವೆ. ಹೃದಯ ಚಕ್ರದಲ್ಲಿ ಡಲಿನೀ ಶಕ್ತಿಯು ಸಂಚಾರ ಮಾಡುವಾಗ ಅನಾಹತ ನಾದಗಳು ಕೇಳಿಸುತ್ತವೆ. ್ರುಮಧ್ಯದಲ್ಲಿ ಏಕಾಗ್ರತೆಯನ್ನು ಸಾಧಿಸಿದಾಗ ಹೊಳೆ-ಹೊಳೆವ ಪ್ರಕಾಶಗಳು ಸುತ್ತವೆ. ಆಗ ಸಹಸ್ರಾರದಲ್ಲಿ ಕೋಟಿಸೂರ್ಯರ ಬೆಳಕು ತೋರಿ ಪರಮಾತ್ಮ ರ್ಶನವಾಗುತ್ತದೆ. ಅಂಥ ಪರಮಾತ್ಮನ ದರ್ಶನವನ್ನು ಪಡೆದ ಮಹಿಪತಿರಾಯರ ಮ್ಮ ಅನುಭವಗಳನ್ನು ಪದರು-ಪದರಾಗಿ ಬಿಡಿಸಿ ಇಡುತ್ತಾರೆ.

'ಒತ್ತಿ ಆಧಾರ ಬಲದೆತ್ತಿ ಕುಂಡಲಿನಿಯ।
ಕೆತ್ತಿ ಸರ್ಪತ್ತಿ ಮುಖಮಾಡಿ ಊರ್ಧ್ವ।
ಗತಿಯು ಮತ್ತೆ ಷಡಚಕ್ರಗಳ।
ಗತಿಗಳನು ದೋರಿದಾತ ಸಾಕ್ಷಾತ ಗುರುವು।।' (೬೯-೨೦೯

ತಿ ಜಾಗ್ರತವಾದ ಕುಂಡಲಿನಿಯು ಮುಂದೆ ಸಾಗುತ್ತದೆ.

ಇಡಾ ಪಿಂಗಳಮಧ್ಯ ನೋಡಿ ಈಗ।
ನಾಡಿ ಸುಷುಮ್ನವಿಡಿದು ಕೂಡಿ ಬ್ಯಾಗ।
ಕೋಡ ಬಲ್ಲಿದ ಬ್ರಹ್ಮಾನಂದ ಭೋಗ।
ಗೂಢ ವಿದ್ಯವಿದು ತಾ ರಾಜಯೋಗ।।' (ಕೀ-೩.೭೭)

ನುತ್ತೆ ಕುಂಡಲಿನಿಯು ಇನ್ನೂ ಮುಂದೆ ಸಾಗುತ್ತದೆ.

ಆಧಾರವಂ ಬಲಿದು ಸ್ವಾಧಿಷ್ಠಾನವದಾಟಿ।
ನಾದವಿಡಿದು ನೋಡು ಮಣಿಪುರದ।
ಒದಗಿ ಕುಡುವ ಅನಾಹತ ಹೃದಯಸ್ಥಾನವ।
ಸಾಧಿಸಿ ನೋಡುವದು ವಿಶುದ್ಧವ।
ಭೇದಿಸಿ ನೋಡುವದಾಜ್ಞಾಚಕ್ರ ದ್ವಿದಳ।
ಸಾಧಿಸುವದು ಸುಖ ಸಾಧು ಜನ।
ಅಧರದಲಿಹ್ಯ ತಾ ಅಧಿಷ್ಠಾನವ ನೋಡು।
ಅಧಿಪತಿ ಬ್ರಹ್ಮಾಂಡ ಸಹಸ್ರದಳ ಕಮಲ।
ಹೊಳೆಯುತಿಹ ಭಾಸ್ಕರ ಪ್ರಭೆಯು ಕೂಡಿ।
ಮೂಲಸ್ಥಾನದ ನಿಜ ನೆಲೆ ನಿಭವ ನೋಡು।
ಬಾಲಕನೊಡೆಯ ಮಹಿಪತಿ ಸ್ವಾಮಿಯು।' (ಕೀ-೩.೮೫)

ಹೀಗೆ ಮೂಲಾಧಾರದಿಂದ ಸಹಸ್ರಾರದವರೆಗೆ, ಷಡಚಕ್ರಗಳನ್ನು ಭೇದಿಸಿ ,ದಳದಲ್ಲಿ ಮಹಿಪತಿರಾಯರ ಪ್ರಜ್ಞೆಯು ಸ್ಥಿರವಾಗಿ ನಿಂತಿತು. 'ಕನೊಡೆಯ ಮಹಿಪತಿ'ಯ ದರ್ಶನವಾಯಿತು. ಆಗ ಅವರಿಗೆ ಧನ್ಯತೆಯ ಭಾವ ನಾಯಿತು. ಮತ್ತು ಈ ರೀತಿ ಸಿದ್ಧಿಯನ್ನು ಪಡೆಯದ ಜನ್ಮ ವ್ಯರ್ಥವೆನಿಸಿತು.

'ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ।
ಕರ್ತುಸದ್ಗುರು ಪಾದ ಅರ್ತು ಬೆರೆಯದವನ ಜನ್ಮ।
ಇಡಾಪಿಂಗಳೆರಡು ಥಡಿಯ ಮಧ್ಯ ಸುಷುಮ್ನದಲಿ।
ಗುಪ್ತವಾಹಿನಿಯ ಸುಸ್ನಾನ ಮಾಡದವನ।
ಪಿಂಡ ಬ್ರಹ್ಮಾಂಡ ಭ್ರೂಮಧ್ಯ ತ್ರಿವೇಣಿ ಕ್ಷೇತ್ರ।
ಪುಣ್ಯಸಂಗಮದ ತೀರ್ಥಯಾತ್ರೆ ಮಾಡದವನ ಜನ್ಮ।
ಆರು ಸೋಪಾನವೇರಿ ಮೂರು ಗೋಪುರವ ದಾಟಿ।
ಮೇಲಗಿರಿಯಲಿಹ್ಯ ಮಹಿಪತಿಯ ಮೂರ್ತಿನೋಡದ ಜನ್ಮ।।
(ಮ. ಕೀ. ೪೯೨)

'ಮೇಲಗಿರಿಯಲಿಹ್ಯ ಮಹಿಪತಿಯ' ಮೂರ್ತಿಯನ್ನು ನೋಡದವನ ಜನ್ಮ ್ಥವೆಂದು ಹೇಳುತ್ತ, ಮೇಲಗಿರಿಯನ್ನು ಹತ್ತುವ ದಾರಿಯನ್ನು ಅವರೇ ದ್ದಾರೆ. ಆ ದಾರಿಯಲ್ಲಿ ನಡೆದು ಅವರು ಮಹಿಪತಿಯನ್ನು ನೋಡಿದ್ದಾರೆ. ಹಾಗೆ ಲಗಿರಿಯ ಮಹಿಪತಿಯ ಮೂರ್ತಿಯನ್ನು ಕಾಣುವ ಸಾಧನೆಯಲ್ಲಿ ನಿರತರಾದಾಗ

ರಿಗೆ ಇನ್ನೂ ಹಲವಾರು ದಿವ್ಯ ಅನುಭವಗಳಾಗಿವೆ. ವಿವಿಧ ನಾದಗಳನ್ನು
'ದ್ದಾರೆ. ಹೊಳೆ-ಹೊಳೆವ ಬೆಳಕನ್ನು ಕಂಡಿದ್ದಾರೆ.

ಯೋಗಾನು-ಭವದಲ್ಲಿ ನಾದ, ಕಳೆ ಮತ್ತು ಬಿಂದು ಎಂಬ ಮೂರು ಶಬ್ದಗಳ
ುಚಿತವಾದವುಗಳು. ಸಾಧಕನಿಗೆ ವಿವಿಧ ನಾದಗಳು ಕೇಳಿಸುತ್ತವೆ
ಕಾಶಮಯವಾದ ಬಿಂದುವಿನ ದರ್ಶನವಾಗುತ್ತದೆ. ಅದು ಕೋಟಿ ಸೂರ್ಯ
ಕಾಶದಪ್ಪಿರುತ್ತದೆ. ಆಗ ಸಾಧಕನು ಆನಂದ ಸಾಗರದಲ್ಲಿ ಮುಳುಗಿ ಏಳುತ್ತಾ
ವನ ಇಂದ್ರಿಯಗಳು ಶಾಂತವಾಗುತ್ತವೆ. 'ಘನಸುಖ'ದ ನಿರಂತರ ಅನುಭವ
ದಗಿ ಬರುತ್ತದೆ. ಕರ್ಮಬಂಧನವು ಕಳಚಿ ಜನ್ಮವು ಸಾರ್ಥಕವಾಗುತ್ತದೆ. ಆದ
ರಿಯನ್ನು ರಾಯರ ಬಾಯಿಯಿಂದಲೇ ಕೇಳಬೇಕು.

'ಓಂಕಾರ ಮೊದಲಾದ ಶ್ರುತಿ ವೇದ ಘೋಷಗಳು।
ಧಿಮಿಧಿಮಿಸುವ ಮಹಾಶಬ್ದಗಳು ವಾದ್ಯಗಳು।
ಘೇಳಿನಿಸುವ ಶ್ರುತಿನಾದಗಳು ಭೇದಗಳು ಕೇಳುವದು ನಿತ್ಯದಲಿ।
ಗರ್ಜಿಸುವ ಭೃಂಗಿ ಶಂಖನಾದ ಧ್ವನಿಗಳು।
ಭೋರಿಡುವ ಭೇರಿ ಮೃದಂಗ ವೇಣೆಯಗಳು।
ಚಿಣಿ-ಚಿಣಿ ತಂತ್ರ ಮೊದಲಾದ ಸಂಕಾರಗಳು ಕೇಳಿ ಪಾವನನಾದೆನು। (ಕೀ-
'ಓಂಕಾರ ಮೊದಲಾದ ದ್ವಾದಶನಾದದಾ।
ಧಂದದ ಘೋಷವ ಕೇಳಿ ಬಧಿರತ್ವಕಳೆದಿನ್ನು।' (ಕೀ-
'ಕೀಳ ಬರುತದೆ ಹೇಳಗುಡುತದೆ।
ತಾಳ ಮೃದಂಗವು ಭೋರಿಡುತದೆ'

ಹೀಗೆ ವಿವಿಧ ನಾದಗಳು

'ಒಂದೊಂದು ಪರಿ ಕೇಳಿಸುವ ಹು।
ನ್ನೊಂದರ ಮೇಲಿನ್ನೊಂದರ ಘೋಷ।
ಧೀಂ ಧೀಂ ಧೀಂ ಧೀಂ ಧೀಂ ಧೀಂ।
ಧೀಂ ಧೀಂ ಮಿಡಗುತಿಹ್ಯ ಆನಂದಸುಖ।। (ಕಿ

ಈ ಧಿಮಿಗುಡುವ ಆನಂದಸುಖವು,

'ಜುಮ್ಮು ಜುಮ್ಮುಗುಡುತಿದೆ ರೋಮಾಂಚಗಳು।
ಧಿಮಿ ಧಿಮಿಗುಡತದೆ ನಾದಧ್ವನಿಗಳು।' (

'ಘುಮ ಘುಮಗುಡುತ ನಾದನುಹಾತವು।
ಧಿಮಿಗುಡುತದೆ ಬಲುತಾನವೋ।।
ಜುಮ್ಮು ಜುಮಗುಡುತದೆ ಝೇಂಕಾರವು।
ಸುಮ್ಮನೆ ಓಂಕಾರವೋ।।
ಝುಮ್ಮನೆ ಒಮ್ಮಿತಿಗ್ಘೇಳೆನಿಸುತಿರೆ।
ಬ್ರಹ್ಮಾನಂದದ ಘೋಷವೋ।।'

ಉಮ್ಮಸ ಬಲು ತುಂಬ್ಯೆದೆಮ್ಯೊಳು ಬರುತದೆ।
ಒಮ್ಮನದಲಿ ನಿಮ್ಮದೆಪೋ।।' (ಕೀ-೧೬

'ಗೆ ಅನುಭವಿಸಿದ ಸುಖದ ಕುರಿತು ಮತ್ತೆ-ಮತ್ತೆ ಹೇಳುತ್ತಾರೆ.

'ಕೇಳದಾ ಕೇಳದೆವು ಘೇಳಿಸುವದೆನ್ನೊಳಗೆ।
ಹೇಳೀನೆಂದರೆ ಬಾರದು ಸುಳುವು ಇನ್ನೊಬ್ಬರಿಗೆ।
ತಾಳಮೃದಂಗ ಭೇರಿ ಭೋರಿಡುತ ಒಳ ಹೊರಗೆ।
ತಿಳಿದೇನಂದರದೇ ನೋಡಿ ಉಲುವು ತಾ ತನ್ನೊಳಗೆ।।' (ಕೀ-೮೬

ನನ್ನು ಹೇಳಬೇಕೆಂದರೂ ಹೇಳಲು ಬಾರದಂಥ ಸುಖ, ಕೇಳದ್ದನ್ನು ಕೇಳಿದರಂತೆ ಥದ್ದನ್ನು ಕೇಳಬೇಕಾದರೆ,

'ಧಿಮಿ ಧಿಮಿಗುಡುತಿಹುದು ಬಲು ತಾಳ ಭೇರಿ ಮೃದಂಗ।
ಬ್ರಹ್ಮಾನಂದದ ಸುಖದೋರುವದು ಮೇದಿನಿಯೊಳು ಸತ್ಸಂಗ।
ಒಮ್ಮನವಾದರೆ ಸಾಧಿಸಬಹುದು ಸುಮ್ಮನೆ ಪ್ರಾಣಲಿಂಗ।
ಘಮ ಘಮಗುಡುತಿಹುದು ಘನಮಹಿಮೆಯು ಕೇಳುವದಂತರಂಗ।।'' (ಕೀ-೩೪೨

:ಗೆ ಒಮ್ಮನವಾದರೆ ಸುಮ್ಮನೆ ಪ್ರಾಣಲಿಂಗನನ್ನು ಸಾಧಿಸಬಹುದು. ಆಗ

'ಝೇಂ ಝೇಂ, ಝೇಂ ಝೇಂಕರಿಸುತದ।
ಕಂಜನಾಭನ ಕರುಣಾನಂದ ನೋಡಿರ್‍ಯೋ।
ಘೇಳಿನಿಸುತದ ತಾಳ ಮೃದಂಗವು।
ಒಳಹೊರಗಿದು ಧಿಮಿಗುಡುತದ।
ಅನಾಹತ ಧ್ವನಿ ಅನುಭವ ನೋಡಿರೋ।
ಅನುದಿನ ಸಾಧಿಸಿ ಘನ ಬೆರೆದಾಡಿರೋ।। (ಕೀ-೧೯೩

:ಗೆ ಅನುದಿನವೂ ಇದನ್ನು ಸಾಧಿಸಬಹುದು. ಆದರೆ ಇಷ್ಟಕ್ಕೆಯೇ ಮುಗಿಯಲಿಲ್ಲ.

'ನಿಧ್ರಸ್ಯಕರ್ಣದ ಸಾದ್ರಶ್ಯ ನೋಡೆಂದು ಹೊ।
ದ್ವಾದಶನಾದವು ಸಾಧಿಸಿ ಕೇಳುದು ಹೊ।
ಗಾದೆಯು ಮಾತಲ್ಲ ಭೇದಿಸಿ ತಿಳಿಯುದು ಹೊ।
ಓದುವ ಓಂಕಾರನಾದವು ತಿಳಿವದು ಹೊ। (ಕೀ-೨೦೩

:ಗೆ ಅನಾಹತನಾದಗಳನ್ನು ಕೇಳಿದ ಅನಂತರ ಹೊಳೆಹೊಳೆವ ಪ್ರಕಾ ಂಚರಿಸಹತ್ತುತ್ತದೆ. ಅದರ ಅನುಭವವೂ ಅಪರೂಪದ್ದಾಗಿದೆ.

'ಥಳಥಳಗುಡುತ ಕಳೆಮಳೆಗಳು।
ಒಳಗೆ ಹೊರಗೆ ನಿಮ್ಮದೆ ಹೊಳಹೊ।
ಥಳಥಳ ಭಾಸುವ ಬೆಳಗಿನ ಬೆಳಗು।
ಝುಳ ಝುಳಿಸುವ ನಿಮ್ಮದೆ ಸುಳಿವು।
ಸುಳಿ ಸುಳಿದಾಡುವ ನೆಲೆ ನಿಭ ನಿಜವಿದು।
ಒಳತಾಗ್ಯದೆ ನಿಮ್ಮದೆ ಬಲವೊ।
ಸಳ ಸಳ ಸುರಿವುತ ತುಳುಕುತ ತುಂಬೇದ।
ಒಲಿವುತ ನಿಮ್ಮ ದಯದೊಲವೊ।।' (ಕೀ-೧೬

'ಹೊಳೆಯುತ ಸುಳಿಯುತ ಉಲವುತಲ್ಕದ
ತಾ ಸದಮಲ ಸುಖಕಲ್ಲೋಳ।
ಥಳಥಳಗುಡುತ ಮೊಳೆ ಮಿಂಚಿನ ಕಳೆ
ಬೆಳಗು ದೋರುತಲ್ಕದ ಬಹಳ।
ಹೇಳಲಳವಲ್ಲದು ಬಲು ಸೂಕ್ಷ್ಮ ತಿಳಿದವ
ತಾ ವಿರಳ।
ಇಳೆಯೊಳು ನಿಜ ಆನಂದವನು ದೋರಿತು।
ಸ್ವಾನುಭವದ ಸುಕಾಲ।।' (ಕೀ

ಅಪರೂಪವಾದಂಥ ಆ ಬೆಳಕು ಹೇಳಲು ಅಸಾಧ್ಯವಾದದ್ದು ಬಲು ಸೂಕ್ಷ್ಮವಾ
ಆದರೆ ಈ ಭೂಮಿಯ ಮೇಲಿನ ನಿಜವಾದ ಆನಂದವೆಂದು ಅವರು ಹೇಳು
ಮತ್ತು

'ಉದಯಾಸ್ತಿಲ್ಲದ ಬೆಳಗಿನ ಪ್ರಭೆಯು।
ತುದಿಮೊದಲಿಲ್ಲದೆ ತುಂಬಿತು ಪೂರ್ಣ।
ಬುಧಜನರನುದಿನ ಸೇವಿಸುತಿಹ್ಯ।
ಸದಮಲವಾದ ಸದಾ ಸವಿಸುಖ।।' (ಕೀ

'ಭಾನುಕೋಟಿ ತೇಜವಾಗಿ ರೂಪದೋರಿತು।
ತಾನೆ ತನ್ನಿಂದೊಲಿದು ದಯವ ಬೀರಿತು।
ಜ್ಞಾನ ಭಕ್ತಿ ವೈರಾಗ್ಯವನ್ನು ಅರುಹಿತು।
ನಾನು ನೀನೆಂಬ ಅಹಂಭಾವ ಹರಿಯಿತು।
ಧನ್ಯಗೈಸಿತು ಮಹಿಪತಿ ಪ್ರಾಣ ಜೀವನ। (ಕೀ

ಹೀಗೆ ಧನ್ಯಗೈಸಿದ ಆ ಮಹಿಪತಿಯ ಪ್ರಾಣಜೀವನವು,

'ಮಿರಿ ಮಿರಿ ಮಿಂಚುವ ಪರಿ ಪರಿ ಭಾಸುವ।
ವರ್ಣದೋರುವದನೇಕ।
ಥರಥರದಲಿ ತುಂಬಿ ಸಾಂದ್ರವಾಗಿದೋರುವ।
ಪರಮುನಿಗಳಿಗೆ ಕೌತುಕ।
ಸುರಿಸುರಿದು ಸುರಿವ ಸೂರ್ಯಕೋಟಿ ಕಿರಣ।
ಪರಿಪೂರ್ಣವಾಗಿಹ್ಯ ಮೂರುಲೋಕ।
ತರುತರುವಾಯದಲಿತನುಮನದೊಳಗೆ।
ದೋರುತಿಹುದು ಬ್ರಹ್ಮಸುಖ।
ಧನ್ಯಗೈಸಿತು ಮೂಢಮಹಿಪತಿ ಪ್ರಾಣಜೀವ।
ಕೈವಲ್ಯ ನಿಧಿ ಗುರುನಾಥ।। (

'ಅರ್ಕ ಮಂಡಲಗಳು ರವಿಶಶಿಕಿರಣವು।
ಝುಳಝುಳಿಸುವ ಪ್ರಭೆನೋಡಿ ಅನಿಮಿಷ ದೃಷ್ಟಿಲೆನ್ನ। (

'ತೆರೆದು ನೋಡಲು ಅಂತರಾತ್ಮದೊಳು ಪ್ರಭೆಯಗಳು।
ಥಳಥಳಿಸುವಾ ಮಹಾತೇಜಗಳು ಪುಂಜಗಳು।
ಹೇಳಲಿನ್ನೇನದ ಹೊಳವಗಳು ಸುಳಿವಗಳು ನೋಡುವದು ಅನಿಮಿಷದಲಿ
ರವಿಶಶಿತಾರೆಗಳು ಸೂಸುತಿಹ್ಯ ಕಿರಣಗಳು
ಭಾಸಿಸುವ ನಾನಾ ವರ್ಣಗಳು ಛಾಯಗಳು
ತುಂಬಿಹ ಬೆಳಗಿನ ಕಳೆಯಗಳು ಕಾಂತಿಗಳು ಕಂಡು ಬೆರಗಾದೆನು (ಕೀ-೭

'ಇಕ್ಕೊ ಘನಪರಬ್ರಹ್ಮದ ಬೆಳಗಿದು।
ಶುಕಾದಿ ಮುನಿಗಳು ಸೇವಿಸುವದು।
ಉದಯಾಸ್ತಮಾನಗಳಿಲ್ಲದ ಬೆಳಗಿದು ಸದೋದಿತವಾದ ಸುಬೋಧವಿದು।
ಲೇಸಾಗಿ ಮಹಿಪತಿ ಸಾಧಿಸಿದು ಭಾಸ್ಕರಕೋಟಿ ಪ್ರಕಾಶವಿದು।। (ಕೀ-೨೯

ಹೀಗೆ ಹೊಳೆಹೊಳೆವ ಪ್ರಕಾಶವನ್ನು ಕಂಡಾಗ ಅದುವೇ ಪರಮಾತ್ಮವೆಂಬ ಅರಿ
ಸಾಧಕನಿಗೆ ಆಗುತ್ತದೆ. ಮಹಿಪತಿರಾಯರಿಗೂ ಅದೇ ಅನುಭವವಾಯಿತು.

'ಸುಳಿ ಸುಳಿದಾಡುತ ಹೊಳೆವುತ ಎನ್ನೊಳಗೆ।
ಥಳಥಳಿಸುವ ತೇಜಃ ಪುಂಜವಿದು।
ಮಳೆ ಮಿಂಚಿನ ಪರಿ ಕಳೆದೋರುತಲ್ಯದೆ।
ಝಳಝಳಿಸುತ ಎನ್ನ ಮನದೊಳಗೆ।
ಕಣ್ಣಾರೆ ಕಂಡೆ ಭಾನುಕೋಟಿ ಪ್ರಕಾಶ।
ನಿಮ್ಮ ಧನ್ಯಧನ್ಯವಾದ ಮಹಿಪತಿಯು।।' (ಕೀ-೧೯೨)

'ನೀಲ ವರ್ಣದೊಳಗೆ ಥಳಥಳ ಗುಡುತದೆ।
ಮ್ಯಾಲೆ ಮಂದಿರದೊಳಗೆ ಲೋಲ್ಯಾಡುತಿದೆ।
ದಾಸ ಮಹಿಪತಿಯೊಳದೆ ವಾಸವಾಗ್ಯದೆ।। (ಕೀ-೩೭೫)

'ಭಾನುಕೋಟಿ ತೇಜ ತಾನೆ ತಾನಾದನು ಎನ್ನಮನದೊಳು ಈಗ।
ದೀನ ಮಹಿಪತಿಗೆ ಸನಾಥ ಮಾಡುವ ಸ್ವಾನುಭವ ಬ್ರಹ್ಮಭೋಗ। (ಕೀ-೪೦)
'ಬೆಳಗು ಬೆಳಗು ಬೆರೆದವನೆ ತಾ ಕುಲಕೋಟಿಗಳು ಧನ್ಯ।
ಮಳೆ ಮಿಂಚಿನ ಕಳೆಕಾಂತಿಗಳಿಡುತ ದೋರಿದ ಸದ್ಗುರು ಪುಣ್ಯ।

ಬೆಳಗೇ ಬೆಳಗಾಯಿತು ಘನಗುರುದಯ ಮನದೊಳು ನಿಜಒಡಮೂಡಿ।
ಬೀಳುವ ತಿಮಿರಾಂಧದ ಭವ ಪಾಶವಕಳೆದನು ಸದ್ಗುರು ಪಾದವಕೂಡಿ।।'
(ಕೀ-೪೨೪)

'ಬಣ್ಣಾ ಬಣ್ಣದಿ ಕಂಡೆ ಗುರುಸ್ವರೂಪನ
ಕಣ್ಣಾರೆ ಕಂಡೆ ಸದ್ಗುರುಚರಣ
ಧನ್ಯಧನ್ಯವಾಯಿತು ಮಹಿಪತಿ ಜೀವನ' (ಕೀ-೧೧೬)

ಹೀಗೆ ಮಹಿಪತಿರಾಯರು ತಮ್ಮ ಸಾಧನೆಯಲ್ಲಿ ಕಂಡ ಅನುಭವಗಳನ್ನು ಸಲವೂ ಬೇರೆ ಬೇರೆ ರೀತಿಯಲ್ಲಿ ಬಗೆಯಲ್ಲಿ, ಹೇಳುತ್ತಾರೆ. ಇಂಥ ಽ-ಪ್ರಕಾಶಗಳ ಅನುಭವಗಳಲ್ಲಿಯೂ ರಾಯರ ಅನುಭವ, ಅಭಿವ್ಯಕ್ತಿಗಳು ಷ್ಟರೀತಿಯದಾಗಿವೆ. ಆಂತರಿಕ ಅನುಭವಗಳನ್ನು, ಉಳಿದವರ ಅನುಭವಕ್ಕೂ ಽವಂತೆ, ಅಥವಾ ಅನುಭವದ ತುಸುಮುಟ್ಟಿನ ಅರಿವನ್ನು ಮೂಡಿಸುವಂತೆ ಅವರು ರಿಸುವ ರೀತಿಯು ಅನನ್ಯವಾಗಿದೆ. ನಾದ-ಪ್ರಕಾಶಗಳನ್ನು ಕಂಡ ಬಗೆಯನ್ನು ವು ರೀತಿಯಲ್ಲಿ ಕಿವಿಗೆ ಕೇಳಿಸುವಂತೆ, ಕಣ್ಣಿಗೆ ಕಾಣುವಂತೆ ವಿವರಿಸಿದ್ದರೂ ನೊಂದು ಸಲ ಹೀಗೂ ಹೇಳುತ್ತಾರೆ.

'ಏನೋ ಎಂತೋ ತಿಳಿಯದು ತಿಳಿಯದು
ಒಳಗೋ ಹೊರಗೊ ಬೈಗೊ ಬೆಳಗೊ
ಕಾಳೋ ಬೆಳದಿಂಗಳವೊ
ಮಳಿಯೋ ಮಿಂಚೊ ಹೊಳಪೊ ಸಳವೊ
ತಿಳಿಯದ ಕಳೆ ಕಾಂತಿಗಳು''
ಉದಿಯೊ ಅಸ್ತೊ ಆದ್ಯೊ ಅಂತ್ಯೊ
ಮಧ್ಯೊ ತಾ ತಿಳಿಯದು
ತುದಿ ಮೊದಲಿಲ್ಲದೆ ಸದಮಲಬ್ರಹ್ಮವು
ಉದಿಯವಾಗಿಹ್ಯದು ನೋಡಿ
ಜೀವೊ ಭಾವೋ ಶಿವೊ ಶಕ್ತ್ಯೊ
ಆವದು ತಾ ತಿಳಿಯದು
ಘವಘವಿಸುವ ಅವಿನಾಶನ ಪ್ರಭೆಯಿದು
ಮಹಿಪತಿ ವಸ್ತು ಮಯವೊ।। (ಕೀ-೧೧೯)

ಸು ಹೇಳುವಲ್ಲಿ ಕೂಡ ಆ ಪರಾತ್ಪರ ವಸ್ತುವಿನ ಪರಿಚಯವನ್ನು ತಮ್ಮದೇ ಆದ ಽಯಲ್ಲಿ ಮಾಡಿಕೊಡುತ್ತಾರೆ. ಈ ಕುರಿತು ಇನ್ನು ಅನೇಕ ಅವರ ಕೃತಿಗಳನ್ನು ಾಹರಿಸಬಹುದು. ಹೀಗೆ ನಾದ ಪ್ರಕಾಶಗಳ ಅನುಭವದಲ್ಲಿ ಸಾಧಕನಿಗೆ 'ನಿಜ ಽ'ದ ಅರಿವು ಬರುವದನ್ನು ಅವರು ಹೇಳಿದ್ದಾರೆ. ಈ ಸುಖವು ಸ್ವಯಂಭೂ ದ್ದು. ಪರಮಾತ್ಮನು ಆನಂದಮಯನಾಗಿರುವನು. ಪರಮಾತ್ಮನ ಾಕ್ಷಾತ್ಕಾರವನ್ನು ಪಡೆದ ಸಾಧಕನು ಕೂಡ ಸದಾಕಾಲ ಈ ಆನಂದವನ್ನು ಽಭವಿಸುತ್ತಿರುತ್ತಾನೆ. ರಾಯರ 'ನಿಜಸುಖ'ವನ್ನು ನೋಡಬೇಕು.

'ಆನಂದ ವಾಗ್ಯೇದ ಸ್ವಾನಂದ ಯೋಗ
ಏನೆಂದ್ಹೇಳಲಿ ಸ್ವಾನುಭವದ ಸುಭೋಗ
ಸುಖಿಗರುತದ ಶಿಖಾಮಧ್ಯ ಸಂತ್ರಾಧಾರಿ
ಬೇಕಾದರ ನೋಡಿ ಷಡಚಕ್ರವೇರಿ' (ಕೀ-೧೯)

ಂದವಾಯಿತು ಸ್ವಾನಂದ ಘನಸುಖ
ಮನದೊಳಗೆ ತನ್ನಿಂದ ತಾನೊಲಿದು' (ಕೀ-೨೦)

ಖನೋಡಿ ನಮ್ಮ ಸ್ವಾನುಭವದ
ರಿಂದ ಮೀರಿ ಬಲು ಸುಸ್ವಾದ
ರಿಂದ ಕೇಳಿ ನಿಜ ಬೋಧ
ಮುನಿ ಸೇವಿಸುದಾ
ು ನೋಡಿ ಆರು ಚಕ್ರವೇರಿ
ಯುತಿದೆ ಸುಖ ಸಂತ್ರಾಧಾರಿ
ರ್ಗರೆಯುತಿದೆ ಅನಂತ ಪರಿ (ಕೀ-೧)

ಚೆಲ್ಲೀದ ಪೂರ್ಣ ಹರಿಯಸುಖನಿಧಾನ
ಮುನಿಗಳ ಪ್ರಾಣಶರಣ ಜನರಾಭರಣ' (ಕೀ-೧೨)

ತರುವಾಯದಲಿ ತನುಮನದೊಳಗೆ ದೋರುತಿಹುದು ಬ್ರಹ್ಮಸುಖ।
ಕಾಣಿಸಿ ಪುಣ್ಯಗೈಸುತಿಹುದು ಎನ್ನೊಳಾನಂದ ಭರಿತ।
ಷ್ಠೀಳಲಿ ಅನುಭವಾನಂದ ಸುಖ ಜನಮನದೊಳು ತಾ ಸಾಕ್ಷಾತ।'' (ಕೀ-೩೯)

ದಮಯ ಘನ ತುಂಬಿ ತುಳುಕುತಿಹುದು।
ಜ್ಞಾನ ಸಮುದ್ರದ ಲೋಟಗಳು।
ಷ್ಠೀಳಲಿ ಸ್ವಾನಂದ ಸುಖ ಆನಂದೋ।
ದ ಆಟಗಳು।।' (ಕೀ-೫೨)

ಳೆ ಗರೆವುತಲಿದೆ ಸ್ವಸುಖದಾನಂದೋಬ್ರಹ್ಮ।
ಮಹಿಪತಿಗೆ ನಿತ್ಯಭಿನವ ನೋಡಿ ಸಂಭ್ರಮ। (ಕೀ-೫೭)

ಗೆ ಒಮ್ಮೆ ಸ್ವಾನಂದ ಸುಖದ ಸುರಿಮಳೆಯು ಸಂತ್ರಾಧಾರೆಯಾಗಿ ಬೀಳುತ್ತಿರಲು ನ ಜೀವನವು ಧನ್ಯವೂ ಸಾರ್ಥಕವೂ ಆಗುವುದು. ಎಲ್ಲ ಬಂಧನಗಳನ್ನು ೊಂಡು ಅವನ ಮನಸ್ಸು ಪರಮಾತ್ಮನಲ್ಲಿ ಸಂಪೂರ್ಣವಾಗಿ ಲೀನವಾಗುತ್ತದೆ. ಪರಮ ಸಾಕ್ಷಾತ್ಕಾರದ ಅವಸ್ಥೆ. ಮಹಿಪತಿರಾಯರ ಈ ಅವಸ್ಥೆಯ ಪರಿಯೂ ಾಪದ್ಗಾಗಿದೆ.

'ಒದಗಿ ಬಂದಿದರಿಟ್ಟು ಸದಮಲ ಬ್ರಹ್ಮಸುಖ।
ಮೊದಲಿನ ಪುಣ್ಯ ಪೂರ್ವಾರ್ಜಿತವೋ।
ಧನ್ಯವಾಯಿತು ಮೂಢ ಮಹಿಪತಿ ಪ್ರಾಣಜೀವ।
ಮನವು ಆಯಿತು ಉನ್ಮನವೋ।' (ಕೀ-೧೪)

'ನೆನಿಯಲಿಕ್ಕೆ ಮನ ಘನ ಬೆರದಾಡುವ।
ಖೂನವಾಗುವದಿದೆ ರಾಜಯೋಗ।
ಅನುಭವಿಗಳಿಗೆ ಅನುಕೂಲವಾಗಿಸ್ಸು।
ಅನುವಾಗಿ ದೋರುದು ಬ್ಯಾಗ।
ಭಾನುಕೋಟಿ ತೇಜ ತಾನೆ ತಾನಾದನು।
ಎನ್ನ ಮನದೊಳು ಈಗ।
ದೀನ ಮಹಿಪತಿಗೆ ಸನಾಥ ಮಾಡುವ।
ಸ್ವಾನುಭವದ ಬ್ರಹ್ಮಭೋಗ।। (ಕೀ-೪

'ಭಿನ್ನವಿಲ್ಲದೆ ಸಹಸ್ರದಳದಲ್ಯಾಡುವ ಹಂಸನ।
ಕಣ್ಣ ಕಂಡು ಪಾವನವಾಯಿತು ವಾಸುದೇವನ। (ಕೀ-೬

'ತಾನೆಂಬುದರೊಳು ತಾನೆ ತಾನಾಗೇದ ಭಾನುಕೋಟಿ ಉದಿತ।
ದೀನ ಮಹಿಪತಿ ಸ್ವಾಮಿಯ ಸಾಕ್ಷಾತಾನಂದ ಘನಭರಿತಾ। (ಕೀ-೪

'ತತ್ವಸಾರದೊಂದೆ ತುತ್ತು ಅತಿ ಹರುಷಗೊಂಡಿತು
ನಿತ್ಯ ತೃಪ್ತಹೊಂದಿತು ಹಿತ ಮಹಿಪತಿಗಾಯಿತು' (ಕೀ-೪

'ಲೇಸು ಲೇಸಾಯಿತು ಎನಗೆ ಭಾಸ್ಕರ ಕರುಣವು
ಭಾಸುತಿಹುದು ವಾಸುದೇವನ ಪುಣ್ಯಚರಣವು
ಮೋಸವಿಲ್ಲದೆ ನೀಗಿತು ಜೀವನ ಜನ್ಮ ಮರಣವು
ದಾಸ ಮಹಿಪತಿಗಾಯಿತು ಘನಸ್ಮರಣವು' (ಕೀ-೬೮

'ನುಡಿಯು ಕೇಳದಂಥ ನುಡಿ ಕೇಳಿದೆವಿಂದು
ಕಡಿಗಾಯಿತು ನೋಡಿ ಹುಟ್ಟಿ ಬಾಹ ಜನ್ಮಸಂದು
ವಿಡಿದು ಗುರುಪಾದ ಜನ್ಮಸಾರ್ಥಕವಾಯಿತಿಂದು
ಪಡೆದ ಮಹಿಪತಿ ನಿಜಾನಂದ ವಸ್ತು ವಂದು' (ಕೀ-೮೬

ಂದು ಮಹಿಪತಿರಾಯರು ಬಗೆಬಗೆಯಾಗಿ ಆ ಚಿನ್ಮಯ ಚಿದ್ರೂಪನನ ಗಮಗೋಚರ – ನಿಜವಸ್ತುವನ್ನು, ಅಗಣಿತ ಗುಣಪರಿಪೂರ್ಣನನ ಗುಣ-ನಿರ್ಗುಣನನ್ನು, ಸುಗಮ ಸುಪಥ ಸಜ್ಜನರಾನಂದ, ಯೋ ನರನುಕೂಲನನ್ನು, ಪರಮಾತ್ಮನನ್ನು ನಿತ್ಯವೂ ಕಂಡು ಬಾಯ್ತುಂಬ ಬಣ್ಣಿಸಿದ್ದಾರೆ.

'ಮನೋಹರವಾಗುವ ಅನುಭವದೋರುತದೆ
ದೀನಮಹಿಪತಿಗೆ ಪಾವನ ಗೈಸುತದೆ' (ಕೀ-೩೩

ೀನ ಮಹಿಪತಿಯನ್ನು ಪಾವನ ಗೈಸುವ ಅದು ವಸ್ತುವೂ ಅಹುದು. ಪರಬ್ರಹ ್ರರೂಪವೂ ಹೌದು. ಅದನ್ನು ಏನೆಲ್ಲ ಹೆಸರಿನಿಂದ ಕರೆಯಬೇಕು?

'ನಿಗಮಗೋಚರ ನಿಜವಸ್ತು ನೀನೆ ಭಗತರಿಗೆ ಸಹಕಾರವೊ
ಅಗಣಿತಗುಣಪರಿಪೂರ್ಣ ನೀನೆ ಸುಗುಣ ನಿರ್ಗುಣ ನೀನೆವೋ
ಸುಗಮ ಸುಪಥ ಸಜ್ಜನರಾನಂದ ಯೋಗಿ ಜನರನುಕೂಲವೋ
ಬಗೆ ಬಗೆ ಸದ್ಗೈಸಿಹ ಮಹಿಪತಿಗುರು ಝುಗಝುಗಿಸುವ ಘನ ನೀನೆವೊ''

(ಕೀ

'ಇದೇ ಇದೇ ವಸ್ತು ಸನಾತನ ಒಂದೆ
ಆದಿ ಅನಾದಿಯಾಧಾರದಿಂದ
ದೇವಾದಿಗಳು ಮಾಡುವರಿದೇ ಧ್ಯಾನಾ
ಭವಹರಗುರು ಮೂರುತಿ ನಿಧಾನಾ
ಇಹಪರ ಸುಖ ದೋರುದಿದೆ ನೀಟ
ಮಹಿಪತಿಸ್ವಾಮಿ ಶ್ರೀಗುರು ಮಣಿಮುಗುಟ' (ಕೀ·

'ಇದೇ ಇದೇ ಸದ್ವಸ್ತು ನಮ್ಮ ಇದೇ ಇದೇ
ಲೇಸಾಗಿ ಪಾಲಿಸುತಿಪ್ಪ ದಾಸ ಮಹಿಪತಿಗಿದೆ
ಭಾಸ್ಕರ ಕೋಟಿ ಪ್ರಕಾಶ ವಸ್ತುವಿದೆ' (ಕೀ-
'ವಸ್ತು ಕಂಡೆನು ಒಂದ ಕರ್ತೃ ಸದ್ಗುರುವಿನ ಕೃಪೆಯಿಂದ' (ಕೀ-೬

ಹೀಗೆ ಆ ಪರಮಾತ್ಮನು ಒಮ್ಮೆ ವಸ್ತುವಾಗಿ ಕಂಡರೆ ಇನ್ನೊಮ್ಮೆ

'ಬಯಲಿಗೆ ನಿರ್ಬಯಲಾಗೆದ ಗುಹ್ಯಗೂಢಕೆ ಮೀರ್ಯದ
ಸೋಹ್ಯ ಸೂನ್ನಿದತ್ತಲದೆ ಕೈಯೊಳು ಸಿಲುಕದ' (ಕೀ-

'ಬೈಲಿಗೆ ನಿರ್ಬೈಲ ಭಾವಿಕ ಬಲ್ಲನು ಇದರ್ಹೊಯಿಲ
ಮಹಿಪತಿಗನುಕೂಲ ಜೀವನ್ಮುಕ್ತಿಗೆ ಇದು ಮೂಲ' (ಕೀ-೪

ಹೀಗೆ ಬಯಲು -ನಿರ್ಬಯಲಾಗಿಯೂ ಕಂಡಿದೆ. ಅದೇ ವಸ್ತು, ಅದೇ ಬಂ
ಅದೇ ನಿರ್ಬಯಲು,

'ಕಣ್ಣಾರೆ ಕಂಡ ಕೈವಲ್ಯ ಮನದ ವೈಶಾಲ್ಯ
ಕೈವಲ್ಯನಿಧಿ ನಿಶ್ಚಯ ದೇವಾಧಿದೇವ
ಅವಿನಾಶ ಪದ ಅಕ್ಷಯ ಶ್ರೀ ವಾಸುದೇವ
ಭಾವಾತ್ಮ ಭಜಕ ಹೃದಯ ಸರ್ವರೊಳಿಪ್ಪ
ಬಾಹ್ಯಾಂತ್ರ ಭಾಸುತಿಪ್ಪ ಮಹಿಪತಿ ಮನದೈವ' (ಕೀ-೧

'ಘನಸುಖ ದೋರುತದೆ ಎನಗಿಂದು
ಭಾನುಕೋಟಿ ಉದಯವಾದನೆಂದು
ದೀನ ಮಹಿಪತಿ ಸ್ವಾಮಿ ಕೃಪಾಸಿಂಧು
ಮನೋಹರ ಮಾಡಿದ ತಾನೆ ಬಂದು' (ಕೀ-

ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದಂತೆ 'ಆತ್ಮಾ ವಾ ಅರೇ ದೃಷ್ಟವ್ಯ: ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತ:' ಎಂಬಂತೆ ರಾಯರು ನಿತ್ಯದಲ್ಲೂ ಆ ಪರಮಾತ್ಮನನ್ನು ಕಾಣುತ್ತಿದ್ದರು. ಅವನ ವಿಷಯವನ್ನು ಕೇಳುತ್ತಿದ್ದರು. ಅವನ ... ತಿಳಿದುಕೊಳ್ಳುತ್ತಿದ್ದರು ಮತ್ತು ಪುನಃ ಪುನಃ ಅವನ ಧ್ಯಾನವನ್ನು ...ತ್ತಿದ್ದರು.

...ೀಗೆ ಪ್ರತಿನಿತ್ಯ ಪರಮಾತ್ಮನನ್ನು ಬಗೆ ಬಗೆಯಾಗಿ ಕಾಣುವ ರಾಯರು ಅವನ ...ಯನ್ನೂ ಮಾಡುತ್ತಿದ್ದರು. ಅದರ ಸೊಗಸನ್ನು ಅವರ ಬಾಯಿಯಿಂದಲೇ ...ವಿಸಬೇಕು. ವಿರಾಟ್ ಸ್ವರೂಪದ ಪರಮಾತ್ಮನ ಪೂಜೆ ವಿಶಾಲ ...ಪದ್ದಾಗಿರಬೇಕು. ಅವರ ಪೂಜೆಯ ಪರಿ, ಅವರ ಪರಮಾತ್ಮನ ಮಂಟಪ ತಳಿರು ...ಣಗಳು ಗಂಧ, ಅಕ್ಷತೆ, ಧೂಪ, ದೀಪ ನೈವೇದ್ಯ ತಾಂಬೂಲಗಳು ...ನೃಶವಾಗಿವೆ.

'ಮನವೆಂಬ ಮನಮಂಟಪವ ನಾಡುವ
ನೆನವು ನವರತ್ನದ ಸಿಂಹಾಸ(ನವ) ನಿಡುವ
ಜ್ಞಾನ ಧ್ಯಾನದೆಡಬಲದಿ ಪಿಡಿವ
ಅನುವಾಗಿ ಅನಿಮಿಷದಲ್ಲಿ ನೋಡುವ
ತನುವೆಂಬ ತಾರತಮ್ಯಭಾವ ಮಾಡುವ
ಅನುಭವದಿಂದನುಪಮನ ನೋಡುವ
ಆನಂದವೆಂಬ ಅಭಿಷೇಕವ ಮಾಡುವ
ಮನೋ ಅಭಿಷ್ಟೆಯ ಸುವಸ್ತ್ರ ನೀಡುವ
ಬುದ್ಧಿ ಭಾವನೆಯ ಗಂಧಾಕ್ಷತಿಡುವ
ಶುದ್ಧ ಸುವಾಸನೆ ಪರಿಮಳ ಮಾಡುವ
ಶಬ್ದ ಸುವಾಕ್ಯದ ಪುಷ್ಪವ ನಿಡುವ
ಸಿದ್ಧಾಂತವೆಂಬ ಸುಸೇವೆ ಮಾಡುವ
ಪೂರ್ವಕರ್ಮವೆಂಬ ಧೂಪಾರ್ತಿ ಮಾಡುವ
ಅರುವೆಂಬ ದೀಪದ ಏಕಾರ್ತಿ ಮಾಡುವ
ಸೇವಭಾವವೆಂಬ ನೈವೇದ್ಯವಿಡುವ
ವಿವೇಕದ ಉದಕ ಸಮರ್ಪಣೆ
ತ್ರಿವಿಧ ಗುಣವೆಂಬ ತಾಂಬೂಲನಿಡುವ' (ಕೀ-೮೩)

...ೀಗೆ ಮಹಿಪತಿರಾಯರು ತಮ್ಮ ಆತ್ಮದಲ್ಲಿ ಕಂಡುಕೊಂಡ ಪರಮಾತ್ಮನನ್ನು ...ತ್ತಿದ್ದರು. ಅನಂತರ ಅವರು ಆ ಪರಮಾತ್ಮನನ್ನು ಎಲ್ಲ ಕಡೆಗೂ ...ತ್ತಿದರು. ಸಾಧಕನ ಎರಡನೆಯ ಸಿದ್ಧಿಯಿದು. ಇಡೀ ವಿಶ್ವವೇ ಪರಮಾತ್ಮ...

ಸ್ವರೂಪವನ್ನು ವಿಶ್ವಾತ್ಮಕವಾಗಿ ಕಂಡು ಅನುಭವಿಸಿ ಬಣ್ಣಿಸಿದರು.

'ಎಲ್ಲಿ ನೋಡಿದರೆ ತಾ ಅಲ್ಲಿ ಗಿಹ್ಯ
ಎಲ್ಲ ಕಡೆಯಲ್ಲೇಕೋಮಯವ್ಹೋ
ಸುಲ್ಲಭವಾಗಿವ ಬಲ್ಲ ಜ್ಞಾನಿಗೆ ಭಾಸುತಿಹ್ಯ
ಫುಲ್ಲಲೋಚನ ಪ್ರಾಣದೊಲ್ಲಭನು
ಎತ್ತ ನೋಡಿದರತ್ತ ಸುತ ಸುತ್ತಲಿಹ್ಯ
ನಿತ್ಯವಾಗಿಹ್ಯ ಹೃತ್ಕಮಲದಲ್ಲಿ
ಸಾರಿ ಚೆಲ್ಲೇದ ಪರಬ್ರಹ್ಮ ಸ್ವರೂಪವಿದು
ಸೂರ್‍ಯಾಡಬಹುದು ಸುಜ್ಞಾನಿಗಳು' (ಕೀ-೧೨)

'ಎಡಕ ಬಲಿಕ ತಾಂ ತುಂಬೇದ
ದೃಢ ಮನಕ ತಾಂ ಸಿದ್ಧದ' (ಕೀ-೨೮)

ಇಂತಹ ಪರಬ್ರಹ್ಮ ಪರಮಾತ್ಮನು ಎಲ್ಲಕ್ಕೂ, ಎಲ್ಲರಿಗೂ ಆಧಾರವಾಗಿದ್ದಾನೆ ಮತ್ತು ಎಲ್ಲ ಕಡೆಗೂ ತುಂಬಿದ್ದಾನೆ.

'ಸರ್ವಸಾಕ್ಷಿ ಸರ್ವಾಧಾರ ಸರ್ವರೊಳು ಸರ್ವೇಶ್ವರ
ಸರ್ವಮಿದಂ ಖಲು ಬ್ರಹ್ಮವೆಂದು ಶ್ರುತಿಸಾರುತಿದೆ
ಇಹಪರ ಪರಿಪೂರ್ಣ ಮಹಾಗುರು ನಿರಂಜನ
ಮಹಿಪತಿ ಬಾಹ್ಯಾಂತ್ರದೊಳು ಸಹಕಾರ ಸಾಕ್ಷಾತ್ಮವಿದೆ'

ಸರ್ವಮಿದಂ ಖಲುಬ್ರಹ್ಮವೆಂಬುವಮಾತು ಇದುನೋಡಿ ಖೂನ
ಅರಹು ಇಲ್ಲದೆ ಜನದೊಳು ಬರುದೆ ಹೇಳ್ಯಾಡುದೇನ
ನಿರ್ವಿಕಲ್ಪನ ನಿಜ ನೆಲೆ ನಿಭವರಿತು ನೋಡಿಸ್ಥಾನ
ಸರ್ವಸಾಕ್ಷಿ ಸರ್ವಾರ್ಜಿತವೆಂಬ ವಸ್ತುನೋಡಿ ಪೂರ್ಣ' (ಕೀ-೫೭)

'ಕಣ್ಣಿನ ಹಿಂದಾಡುತಲಿದೆ ಮನ
ಕಣ್ಣಿಗೆ ಕಣ್ಣು ನೋಡಲುನ್ಮನ
ಕಣ್ಣಿನೊಳಾಡುತಿದೆ ಚಿದ್ಘನ
ಅಣುರೇಣುಕ ತಾ ಇದೆ ಪರಿಪೂರ್ಣ।' (ಕೀ-೧೩೬)

'ಅಣುರೇಣುದೊಳು ವ್ಯಾಪಿಸಿ ಜನಮನದೊಳು ತುಂಬಿಹ
ತನುಮನದೊಳು ತಾನೆ ತಾನಮ್ಮ
ಎತ್ತ ನೋಡಿದರತ್ತ ಸುತ್ತ ಸೂಸುವನಮ್ಮ
ನೆತ್ತಿ ಒಳಗೆ ಪೂರ್ಣಮೊತ್ತವಾದ ಪರಬ್ರಹ್ಮ'

'ಭಾಸ್ಕರ ಗುರುಶ್ರೀಪತಿಯು ವಿಶ್ವವ್ಯಾಪಕನೆಂಬ ಸ್ಥಿತಿಯು
ಸಾರಿ ದೂರುತಲಿದೆ ಶ್ರುತಿಯು ಘನಮಹಿಮಾನಂದ ಸ್ಫೂರ್ತಿಯು'

ಹೀಗೆ ವಿಶ್ವವ್ಯಾಪಕವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಕಂಡು ಆ
ಮಹಿಪತಿರಾಯರು ವಿಶ್ವಾತೀತವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆ

'ವಿಶ್ವತೋ ಚಕ್ಷು ನೀ ವಿಶ್ವತೋಮುಖನೀನೆ
ವಿಶ್ವತೋ ಬಾಹು ಸಾಕ್ಷಾತ್ ನೀನೆ
ವಿಶ್ವಾಂತ್ರ ಸೂತ್ರನೆ ವಿಶ್ವಂಭರನು ನೀನೆ
ವಿಶ್ವರಹಿತ ವಿರಾಜಿತನು-ನೀನೆ' (ಕೀ-೬

'ನಿರ್ವಿಕಲ್ಪ ನಿರ್ಗುಣನೀತ ನಿರ್ವಿಕಾರ ನಿಷ್ಕೃತೀತ
ನಿರ್ವಿಶೇಷನಾದ ನಿರಾಳನೀತ ನೋಡಿರೋ'
'ಸ್ವಯಂಭು ಸ್ವತಂತ್ರ ಸ್ವಪ್ರಕಾಶ
ಸ್ವಯಂ ಜ್ಯೋತಿ ಸ್ವರೂಪ ಸ್ವವಿಕಾಸ
ದ್ವೈತಾದ್ವೈತಕ ಸಹಿತ ಸ್ವವಿಲಾಸ
ಶ್ರೇಯ ಸುಖದಾಯಕನಹುದೊ ನೀ ಪರೇಶ' (ಕೀ-೨

'ತ್ರಿಗುಣಾತೀತ ತಾರಕ ನಿರಂಜನಗೆ
ಝುಗಝುಗಿಸುವ ಜಗನ್ಮೋಹನಗೆ
ಜಾಗಿಸುವ ಜಗತ್ರಯ ಜೀವನಿಗೆ
ಯೋಗಿ ಜನ ಧ್ಯಾನಿಸುವ ನಿರ್ವಾಣಗೆ' (ಕೀ-೨

'ಹಿಂಡದೈವದೊಡೆಯನು ಅನಂತಕೋಟಿ ಬ್ರಹ್ಮಾಂಡನಾಯಕನು
ಕಂಡು ಅದ್ವೈತ ಸುಖವು ಉಂಡವನಿಗಿದು
ಪಿಂಡ ಬ್ರಹ್ಮಾಂಡ ದೃಶ್ಯವು ಮಂಡಲದೊಳು
ಬ್ರಹ್ಮಾಂಡದಲಿಹ ಪ್ರಚಂಡ ಶ್ರೀಗುರು ಪಿಂಡಾಂಡದಿ ಕಂಡವೆಗಿಲ್ಲದೆ''

ಹೀಗೆ ಮಹಿಪತಿರಾಯರು ಯೋಗ ಮಾರ್ಗದಲ್ಲಿ ವಿವರಿಸಿದ ಆತ್ಮ-
ಹಾಗೂ ವಿಶ್ವಾತೀತ ಪರಮಾತ್ಮನನ್ನು ಕಂಡರು. ರಾಯರು ತಮ್ಮ ಅನುಭವಗ
ವಿವರಿಸುವಲ್ಲಿ ಇತರ ಹರಿದಾಸರಿಂದ ಭಿನ್ನರಾಗಿದ್ದಾರೆಂಬುದು ಸ್ಪಷ್ಟವಾ
ಗೂಢವಾದ ಅನುಭವಗಳನ್ನು ಮನಮುಟ್ಟುವಂತೆ ವಿವರಿಸುವಲ್ಲಿ ಅವರು
ಹಸ್ತರು. ಸಾಂಪ್ರದಾಯಕ ಹರಿದಾಸರು ವರ್ಣಿಸಿದ ಆಧ್ಯಾತ್ಮಿಕ ಅನುಭವಗ
ವ್ಯತಿರಿಕ್ತವಾದ ರೀತಿಯಲ್ಲಿ ಅವರು ಅಭಿವ್ಯಕ್ತಗೊಳಿಸಿದ್ದಾರೆ. ಪರಮಾ
ಸಾಕ್ಷಾತ್ಕಾರವನ್ನು ಪಡೆದಾಗ ಅವರು ಸವಿದ ಆನಂದವನ್ನು, ಸುಖ, ಸ್ವಾನುಭ
ಉಲ್ಹಾಸ ಎಂದು ಮುಂತಾಗಿ ಅನೇಕ ರೀತಿಯಿಂದ ವರ್ಣಿಸಿದ್ದಾರೆ. ಅ
ಪರಮಾತ್ಮನನ್ನು ವಸ್ತು, ಘನವಸ್ತು ಮುಂತಾಗಿ ನಪುಂಸಕ ಲಿಂಗದಲ್ಲಿಯ
ಬಣ್ಣಿಸಿದ್ದಾರೆ. ಬಯಲು, ನಿರ್ಬಯಲು, ಶೂನ್ಯ ಮೊದಲಾದ ವೀರಶೈವ ಶರ

ನುಡಿಗಳಿಂದಲೂ ಕರೆದಿದ್ದಾರೆ. ಪರಮಾತ್ಮನ ಸಗುಣ ರೂಪವನ್ನಂತ
ಮನೋಹರವಾಗಿ ಚಿತ್ರಿಸಿದ್ದಾರೆ. ಇವುಗಳಿಗೆ ಮೂಲ ಕಾರಣವೆಂದರೆ ರಾಯ
ಅಂದು ಪ್ರಚಲಿತದಲ್ಲಿದ್ದ ಅನುಭಾವ, ಅದ್ವೈತ, ನಾಥ, ವೀರಶೈವ, ಭಾಗವತ ಹಿ
ಎಲ್ಲ ಧರ್ಮಗಳ ಸಾಹಿತ್ಯವನ್ನು ಅಭ್ಯಾಸ ಮಾಡಿದ್ದುದಾಗಿದೆ. ಜೋ
ಬಾಲ್ಯದಿಂದಲೇ ಓದಿದ - ನಂಬಿದ ಮಾಧ್ವ ಸಾಹಿತ್ಯ ಹೃದಯಸ್ಥವಾಗಿತ್ತು. ಈ ಎ
ಮತಗಳ ಪರ್ಯಾಯ ಶಬ್ದಗಳನ್ನು ಉಪಯೋಗಿಸಿ ತಮ್ಮ ಅನುಭವಗಳ
ಹೇಳಿದ್ದರಿಂದ ಅದ್ವೈತಿಗಳು, ಅವಧೂತರು, ನಾಥರು, ಮಾಧ್ವರು ಹೀಗೆ ಎಲ್ಲರ
ತಂತಮ್ಮವರೆಂದು ಕರೆಯಲು ಸಾಧ್ಯವಾಯಿತು. ಆದರಿಂದಾಗಿ ''ಅವರ ಕೃತಿ
ಪ್ರಧಾನವಾದ ಆಧ್ಯಾತ್ಮಿಕ ತಳಹದಿಯಿಂದ (ಈ ಎಲ್ಲರೂ) ಒಂದು ರೀತಿಯಿಂ
ಶಿಥಿಲಗೊಳಿಸಿದ್ದಾರೆ. ಅನೇಕ ಕೃತಿಗಳಲ್ಲಿ ಶ್ರೀ ಮಹಿಪತಿದಾಸ
ಹರಿಸರ್ವೋತ್ತಮತ್ವ, ಅದಕ್ಕನುಗುಣವಾದ ದಾಸಭಾವ ಪೂರ್ಣವಾದ ಭಕ್ತಿ, ಹರಿ
ಅಂತರ್ಯಾಮಿತ್ವ, ಪ್ರೇರತ್ವ, ಸಮರ್ಪಣಭಾವದಿಂದ ಸಕಲಕರ್ಮಾನುಷ್ಠಾ
ಹೃದಯದಲ್ಲಿ ಬಿಂಬರೂಪೀ ಪರಮಾತ್ಮನ ಸಾಕ್ಷಾತ್ಕಾ
ಸ್ವ-ಸ್ವರೂಪಾನಂದಾವಿರ್ಭಾವ ರೂಪವಾದ ಮೋಕ್ಷ ಎಂಬ ತ
ಮಾಧ್ವಸಂಪ್ರದಾಯದ ಪ್ರಮೇಯಗಳನ್ನು ಸ್ಪಷ್ಟವಾಗಿ ಹೇಳಿದ್ದರೂ ಅವೆಲ್ಲ ಗೌ
ಕೆಳಗಿನ ಹಂತಗಳು ಎಂದು ಹೇಳುವವರು ಅವರ ಕೀರ್ತನೆಗಳ ತಾತ್ವಿಕ ತಳಹದಿಯ
ಶಿಥಿಲಗೊಳಿಸಿದಂತಾಗುತ್ತದೆ.'' ಎಂದು ಹೇಳಿದ ಪ್ರೊ. ಕೆ.ಟಿ.ಪಾಂಡುರಂಗಿ ಅ
ಅಭಿಪ್ರಾಯಗಳನ್ನು ಗಮನಿಸುವದು ಅಗತ್ಯವಾಗಿದೆ. //೮// ಹೇಳಿದ ರಿ
ಬದಲಾದ ತಕ್ಷಣ ತಾತ್ವಿಕ ಸಿದ್ಧಾಂತ, ನಂಬಿದ ಶ್ರದ್ಧೆ ಬದಲಾಗಬೇಕೆಂ
ಪ್ರಮೇಯವೇನೂ ಇಲ್ಲ. ಆದೇನಿದ್ದರೂ ಮೊತ್ತದಲ್ಲಿ ರಾಯರು ತವ
ಅನುಭವಗಳನ್ನು ಅಭಿವ್ಯಕ್ತಗೊಳಿಸಿದ ರೀತಿ ಬಹುಶಃ ಸಂತ ದಾಸ ಸಾಹಿತ್ಯದಲ್ಲಿಯ
ಅಪರೂಪವಾದದ್ದು ಎಂದು ಹೇಳದೇ ಇರಲಾಗದು. ಅವರ ಯೋಗಾನುಭವ
ಕೃತಿಗಳನ್ನು ವಿಶೇಷವಾಗಿ ಅಭ್ಯಸಿಸುವ ಅಗತ್ಯ ಇದೆ. ವಿವಿಧ ತತ್ವಗಳ ಪರ್ಯಾ
ಶಬ್ದಗಳನ್ನು ಉಪಯೋಗಿಸಿ ರಚಿಸಿದ ಇನ್ನು ಕೆಲವು ಕೃತಿಗಳನ್ನು ನೋಡಬಹುದು.

'ಮನಸಿಗೆ ಮನೋನ್ಮನ ಮಾಡಿ
ಘನ ಸುಖದೊಳು ಬೆರೆದಾಡಿ ಅನುಭವಿಸಿ ನೋಡಿ' (ಕೀ-೬.

'ಸುಖ ನೋಡಿ ನಮ್ಮ ಸ್ವಾನುಭವದ
ಸುಖರಿಂದ ಮೀರಿ ಬಲು ಸುಸ್ವಾದ' (ಕೀ-

'ಮನದ ಕೊನೆಯಲ್ಲಿದ್ದ ಘನಸುಖನೋಡಿರೋ ನೆನೆದು ಬ್ಯಾಗ
ಸ್ವಾನುಭವದಲನುಭವಿಸುವುದು ಬ್ರಹ್ಮ ಭೋಗ' (ಕೀ-೧.

'ಭೋಗ್ಯ ಭೋಗದ ಸಾರಸುಖವಿದು ಯೋಗಿ ಮಾನಸ ಜೀವನ
ಬಗೆಬಗೆಯಲನುಭವಿಸಿ ಮಹಿಪತಿ ಯೋಗ್ಯನಾಗೋ ಸನಾತನ' (ಕೀ-೧೭)

'ಆನಂದವಾಯಿತು ಸ್ವಾನಂದ ಘನಸುಖ
ತನುಮನದೊಳಗೆ ತನ್ನಿಂದ ತಾನೊಂದು
ಖೂನದೋರಿತು ಘನಗುರುಕೃಪೆ ಎನಗೆ'

ಇವು ಕೆಲವು ಕೃತಿಗಳು, ರಾಯರು ಅನುಭವಿಸಿದ ಪರಮಾತ್ಮನ ಸಾನಿಧ್ಯ
ಖದ ರೀತಿಗಳು. ಹಾಗೆ ಉಪನಿಷತ್ಕಾರರಂತೆ ಪರಮಾತ್ಮನನ್ನು ವಸ್ತು, ಗುರುತ
ಂಬ ನಪುಂಸಕ ಲಿಂಗದಲ್ಲಿಯ ಶಬ್ದಗಳಿಂದಲೂ ಬಣ್ಣಿಸಿದ್ದಾರೆ.

'ಸ್ವಸ್ತಮನ ಮಾಡಿ ವಸ್ತು ಇದೆ ನೋಡಿ
ಅಸ್ತವ್ಯಸ್ತ ಬ್ಯಾಡಿ ಸಾಭ್ಯಸ್ತ ನಿಜಗೂಡಿ' (ಕೀ-೨೯

'ವಸ್ತುವಿದೆ ನಿತ್ಯವಾದ ಅತ್ಯೋತ್ತಮಾನಂದ ಬೋಧ
ಎತ್ತ ನೋಡಿದರತ್ತ ಹತ್ತಿಲೆ ಸೂಸುತಲ್ಯದೆ' (ಕೀ-೩೫

'ಇದೆ ಇದೆ ವಸ್ತು ಸನಾತನ ಒಂದೇ
ಆದಿ ಅನಾದಿಯಾಧಾರದಿಂದೆ' (ಕೀ-೩೭

'ಮಹಿಪತಿ ಬಾಹ್ಯಾಂತ್ರದೊಳು ವಸ್ತು ವಿರಾಜಿಸುತಿದೆ
ಮಹಿಮರೇ ಬಲ್ಲರೀಸುಖ ನಾಮಾಮೃತದ ಸ್ವಾನುಭವದ' (ಕೀ-೧೯೧

'ವಿಸ್ತಾರದೋರುವ ವಸ್ತು ಇದೆಯೆಂದು
ವಿಸ್ತರಿಸೆನಗಿನ್ನು ದೋರಿತು ಮಾ' (ಕೀ-೪೮೬

ಇವುಗಳಲ್ಲದೆ ವಚನಕಾರರು -ಶಿವಶರಣರು ಕಂಡ ರೀತಿಯಲ್ಲಿ ಕೂಡ ರಾಯರ
ಮ್ಮ ಅನುಭವಗಳನ್ನು ಹೇಳಿದ್ದಾರೆ. ಅದರಂತೆ ಸಾಂಪ್ರದಾಯಕ ಹರಿದಾಸರು ಕಂ
ರಮಾತ್ಮನ ಸಗುಣ ದರ್ಶನದ ವರ್ಣನೆಯನ್ನೂ ಮಾಡಿದ್ದಾರೆ ಇವುಗಳನ್ನು ಈ
ೂದಲೆ ನೋಡಿಯಾಗಿದೆ.

ಈಗ ಹರಿದಾಸರಲ್ಲಿ ಗಣ್ಯರಾದ ಪುರಂದರದಾಸರು ಕನಕದಾಸರು ಪಡೆ
ಾಕ್ಷಾತ್ಕಾರದ ಅನುಭವಗಳು ಹಾಗೂ ರಾಯರ ಸಾಕ್ಷಾತಾರದ ಅನುಭವಗಳನ
ುಲನಿಕವಾಗಿ ನೋಡುವ ಕಿಂಚಿತ್ ಪ್ರಯತ್ನವನ್ನು ಮಾಡಿದರೆ ಅನುಭವಗ
ಂತರವನ್ನು ಅರ್ಥೈಸಲು ಸಹಾಯವಾಗುತ್ತದೆ.

## ೬.೪ ಸಾಕ್ಷಾತ್ಕಾರ (ತೌಲನಿಕ)

ಭಾರತೀಯ ಆಧ್ಯಾತ್ಮಿಕ ಪರಂಪರೆಯಲ್ಲಿ ಪ್ರತಿಯೊಬ್ಬ ಸಾಧಕನಿಗೂ ಆದ ರೀತಿಯಲ್ಲಿ ಸಾಧನೆ ಮಾಡಿ ಸಾಕ್ಷಾತ್ಕಾರವನ್ನು ಪಡೆದು ಸ್ವಾತಂತ್ರ್ಯವಿದೆ. ವೇದಕಾಲದಿಂದಲೂ ಈ ಪರಂಪರೆಯು ನಡೆದು ಅವ್ಯಾಹತವಾಗಿ ಮುಂದೆ ಸಾಗಿದೆ. ವೇದ ಮಂತ್ರಗಳಿಗೆ ಪ್ರತಿಯೊಂದು ಮ ಒಬ್ಬ ಋಷಿಯ ಮತ್ತು ದೇವತೆಯ ಹೆಸರನ್ನು ಹೇಳಲಾಗುತ್ತದೆ. ಉಪನಿ ಕಾಲದಲ್ಲಿಯೂ ಇದೇ ಪರಂಪರೆಯು ಮುಂದುವರೆದದ್ದನ್ನು ಕಾಣ ಅರ್ವಾಚೀನ ಕಾಲದಲ್ಲಿ ಕೂಡ ಇಂಥ ಉದಾಹರಣೆಗಳು ಬೇ ದೊರೆಯುತ್ತವೆ.

ಪರಮ ಸತ್ಯದ ಶೋಧನೆಯಲ್ಲಿ ಒಂದೇ ಮಾರ್ಗ ಮತ್ತು ಒಂದು ಎನ್ನುವ ಕಟ್ಟು ನಿಟ್ಟನ್ನು ಹಾಕದೇ ಇರುವುದರಿಂದ ಪ್ರತಿಯೊಬ್ಬ ಸಾಧಕನ ಶ್ರದ್ಧೆಗೆ ಅನುಗುಣವಾಗಿ ತನ್ನ ಸಾಧನ ಮಾರ್ಗವನ್ನು ಅನುಸರಿಸಿ ತನಗೆ ಇ ದೇವತೆಯನ್ನು ಸಾಕ್ಷಾತ್ಕರಿಸಿಕೊಳ್ಳುವುದು ಭಾರತೀಯ ಆಧ್ಯಾತ್ಮಿಕ ಪರ ವಿಶಿಷ್ಟ ಲಕ್ಷಣವಾಗಿದೆ. ಆದ್ದರಿಂದಲೇ ನಮ್ಮಲ್ಲಿ ಅನೇಕ ಆಧ್ಯಾತ್ಮಿಕ ಪರಂ ಅಸ್ತಿತ್ವದಲ್ಲಿವೆ. ಮತ್ತು ಅವು ಒಂದೊಂದೂ ಸತ್ಯದ ಮುಖವನ್ನೇ ತೋರಿ ಇವೆಲ್ಲವುಗಳೂ ಪರಮಸತ್ಯದ ಸ್ವರೂಪಗಳೇ ಆದದ್ದರಿಂದ ವಿವಿಧ ಆಕಾ ಬೆಳಗುವ ದೀಪಗಳಂತೆ ಹೊಳೆಯುತ್ತವೆ.

ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ, ಮಂತ್ರಯೋಗ, ಹಠ ರಾಜಯೋಗ, ಜಪ, ನಾಮಸಾಧನೆ, ತಂತ್ರ ಇವೇ ಮೊದಲಾದ ಅನೇಕ ಸಾಧನ ಮಾರ್ಗಗಳಿಂದ ಸಾಧಕನು ತನ್ನ ಆಧ್ಯಾತ್ಮಿಕ ಗುರಿಯನ್ನು ಮುಟ್ಟ ಪ್ರತಿಯೊಂದು ಮಾರ್ಗಕ್ಕೂ ಅದರದೇ ಆದ ಉಪಾಸನಾ ಪದ್ಧತಿಯಿದ್ದು ಮಾರ್ಗಗಳಲ್ಲಿ ಪಡೆಯುವ ಅಂತಿಮ ಸಿದ್ಧಿಯೂ ವೈಶಿಷ್ಟ್ಯ ಪೂರ್ಣವಾಗಿ ಪಡೆಯುವ ಆಧ್ಯಾತ್ಮಿಕ ಅನುಭವಗಳೂ ವಿಶಿಷ್ಟ ರೀತಿಯದಾಗಿರುತ್ತವೆ. ಇದ ಒಬ್ಬ ಸಾಧಕನು ಒಂದೇ ಮಾರ್ಗದಿಂದ ನಡೆದು ಒಂದೇ ರೀತಿಯ ಅನುಭ ಪಡೆಯಬೇಕೆಂಬ ನಿರ್ಬಂಧವೇನೂ ಇಲ್ಲ. ತನ್ನ ಮೂಲ ಸಾಧನೆಯೊಂದಿ ಮಾರ್ಗಗಳ ಸಾಧನೆಗಳನ್ನೂ ಮುಂದುವರೆಸಿ ಅವುಗಳ ಅನುಭವ ಪಡೆಯಬಹುದು. ಶ್ರೀ ರಾಮಕೃಷ್ಣ ಪರಮ ಹಂಸರಂಥವರು ವಿವಿಧ ಪಂಥಗಳ ಸಾಧನೆಯನ್ನು ಮಾಡಿ ಬೇರೆ - ಬೇರೆ ಆಧ್ಯಾತ್ಮಿಕ ಅನುಭ ಪಡೆದದ್ದು ಗೊತ್ತಿರುವ ವಿಷಯವಾಗಿದೆ.

ಈ ದೃಷ್ಟಿಯಿಂದ ಹರಿದಾಸರ ಸಾಧನ ಮಾರ್ಗ ಮತ್ತು ಅವರು ಪಡೆ
ಧ್ಯಾತ್ಮಿಕ ಅನುಭವಗಳು ಉಳಿದ ಮಾರ್ಗಗಳ ಸಾಧಕರು ಪಡೆದ ಅನುಭವಗಳಿಗಿಂ
ನ್ನವಾಗಿವೆ. ಹರಿದಾಸರ ಸಾಧನ ಮಾರ್ಗವು ಮುಖ್ಯವಾಗಿ ಭಕ್ತಿ ಮಾರ್ಗದ್ದಾಗಿದೆ
ರಮಾತ್ಮನು ಒಡೆಯ ತಾನು ಸೇವಕ ಎಂಬ ಭಾವವೆ ಪ್ರಧಾನವಾದದ್ದು, ಭಕ್ತಿ
ಪ್ರಧಾನ ಸಾಧನ ಮಾರ್ಗವಾದದ್ದರಿಂದ ಹೃದಯವೇ ಸಾಧನ ಕೇಂದ್ರವಾಯಿತು. ಭಕ್ತಿ
ಾವವು ಸಾಧನದ ಪ್ರಮುಖ ಅಂಗವಾಗಿದೆ. ಪರಮಾತ್ಮನಲ್ಲಿ ಶುದ್ಧವಾ
ಕ್ತಿಯನ್ನು ತೋರುವುದರಿಂದ ಸಾಧಕನ ಹೃದಯವೂ ಶುದ್ಧವಾಗಿ ಅವ
ಂತ:ಕರಣಗಳು ಪವಿತ್ರವಾಗುವವು. ಶುದ್ಧ ಭಕ್ತಿ ಭಾವನೆಯ ಫಲವಾ
ೃದಯದಲ್ಲಿ ಪರಮಾತ್ಮನ ದರ್ಶನವಾಗುವದು. ಪರಮಾತ್ಮ ದರ್ಶನದಿಂ
ೀವವು ಶುದ್ಧವೂ, ಶಾಂತವೂ, ಆನಂದಮಯವೂ ಆಗುವದಲ್ಲದೆ ಎಲ್ಲಕಡೆಗು
ಲ್ಲದರಲ್ಲಿಯೂ ಪರಮಾತ್ಮನ ಶುದ್ಧ ಪ್ರೇಮವೇ ಅನುಭವಕ್ಕೆ ಬರುವದು. ಅದೆ
ುಕ್ತಿಯ ಮಾರ್ಗವಾಗುವದು.

ದಾಸ್ಯ ಭಾವವೇ ಮುಖ್ಯವಾಗಿರುವುದರಿಂದ ಮತ್ತು ಹರಿದಾಸರೆಲ್ಲರೂ ಮಾಧ
ುತಾನುಯಾಯಿಗಳಾದ್ದರಿಂದ ಅವರ ಸಾಧನ ಮಾರ್ಗದಲ್ಲಿ ಅದ್ವೈತಭಾವ
ರುವುದಿಲ್ಲ. ನಿರಂತರವೂ ಪರಮಾತ್ಮನು ಒಡೆಯ, ಜೀವರುಗಳು ದಾಸರು-ಎನ್ನು
ಾವನೆ ಇರುವುದರಿಂದ ಪರಮಾತ್ಮನೊಡನೆ ಐಕ್ಯದ ಅನುಭವವು ಹರಿದಾಸಪಂಥ
ಾಧಕರಿಗೆ ಬರಲಾರದು. ಪರಮಾತ್ಮನನ್ನು ಸಕಲಗುಣ ಪರಿಪೂರ್ಣನೆಂದು ಅವರ
ುಪಾಸನೆ ಮಾಡುವರು. ಪರಮಾತ್ಮನ ಆನಂದಮಯ ಸುಂದರ ರೂಪವನ್ನೇ ಅವರ
ರಾಧಿಸುವರು. ಆದ್ದರಿಂದ ಪರಮಾತ್ಮನ ಆನಂದಮಯ ಸುಂದರ ರೂಪವನ್ನೆ
ವರು ಕಾಣುವರು ಮತ್ತು ತಮ್ಮ ಹೃದಯದಲ್ಲಿ ಕಂಡ ಪರಮಾತ್ಮನ ಸುಂದ
ೂಪವನ್ನು ಅಡಿಯಿಂದ ಮುಡಿಯವರೆಗೂ ಚಿತ್ರಿಸುವರು. ರಾಮ,ಕೃಷ್ಣ ಇತ್ಯಾ
ವತಾರ ರೂಪಗಳಲ್ಲಿ ಅವನನ್ನು ಕಂಡು ಆನಂದಿಸುವರು. ಮಹಿಪತಿರಾಯರು
ದಕ್ಕೆ ಹೊರತಾಗಿರಲಿಲ್ಲ ಎಂಬುದನ್ನು ಈ ಮೊದಲಿನ 'ಸಂಪ್ರದಾಯ' ವಿಭಾಗದ
ವರ ಅನೇಕ ಕೃತಿಗಳ ಮುಖಾಂತರ ನೋಡಿಯಾಗಿದೆ. ಮಹಿಪತಿರಾಯ
ೋಗಸಾಧನ ಮಾರ್ಗದಿಂದ ಕಂಡ ಪರಮಾತ್ಮನ ಸಾನಿಧ್ಯವನ್ನು ಇತರ ಹರಿದಾಸ
ಶೇಷತ: ಪುರಂದರ - ಕನಕದಾಸರು ಕಂಡ ಪರಿಯನ್ನು ಚರ್ಚಿಸುವುದು ಇಲ್ಲಿ
ುಖ್ಯ ಉದ್ದೇಶವಾಗಿದೆ. ಅದು ಹರಿದಾಸರು ನಿರೂಪಿಸಿದ ಸಾಕ್ಷಾತ್ಕಾರಕ್ಕ
ುಹಿಪತಿರಾಯರ ನಿರೂಪಣೆಗೂ ಇರುವ ಅಂತರವನ್ನು ಗುರುತಿಸ
ಹಾಯವಾಗಬಹುದು.

ಯೋಗಮಾರ್ಗ ಸಾಧನದ, ಸಾಕ್ಷಾತ್ಕಾರದ ಅನುಭವಗಳು ಪುರಂದರದಾ

ಕೃತಿಗಳಲ್ಲಿ ಕ್ವಚಿತ್ತಾಗಿ ಬರುತ್ತವೆ. ಹಾಗೆ ಬಂದಾಗ ಕೂಡ ಆ ಸಗುಣಮೂರ್ತಿಯೇ ಕಾಣುವುದು ಸ್ವಾಭಾವಿಕವಾಗಿದೆ. ರಾಮ, ಮಹಾಭಾರತ ಮೊದಲಾದ ಕಾವ್ಯಗಳಲ್ಲಿ ಬರುವ ಪುರುಷೋ ಮೂರ್ತಿಗಳೇ ಅವರ ಕಣ್ಣಿಗೆ ಗೋಚರವಾಗುತ್ತವೆ.

'ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ.//೯//
'ಕಂಡೆ ನಾ ಗೋವಿಂದನ
ಪುಂಡರೀಕಾಕ್ಷ ಪಾಂಡವಪಕ್ಷ ಕೃಷ್ಣನ' //೧೦//
'ಕಂಡೆ ನಾ ಕನಸಿನಲಿ ಗೋವಿಂದನ' //೧೧//

ಮೊದಲಾದ ಕೀರ್ತನೆಗಳಲ್ಲಿ ಮೊದಲಿನ ಸಾಲುಗಳು ಮಾತ್ರ ಪರ ನಿಶ್ಚಿತ ಅವಸ್ಥೆಯನ್ನು ಸೂಚಿಸುತ್ತವೆ. ಆದರೆ ಅನಂತರದ ವಿವರ ಮಹಿಮೆ ಇಲ್ಲವೆ ಸಗುಣರೂಪದ ವರ್ಣನೆಗಳಾದ 'ಅ 'ಉಟ್ಟಪೀತಾಂಬರ' 'ತೊಟ್ಟಮುತ್ತಿನ ಹಾರ' 'ಕೈಯಲ್ಲಿ ಕೊ ಒಡ್ಯಾಣ' ಇತ್ಯಾದಿಗಳಿಗೆ ಸೀಮಿತವಾಗಿ ಬಿಡುತ್ತವೆ. ಬಹು ಇತಿಹಾಸ, ಪುರಾಣಗಳನ್ನು ಓದಿ ಕಲ್ಪಿಸಿಕೊಂಡ ಔಪಾಸ್ಯಮೂ ಅವರು ಕಾಣುತ್ತಿರಬೇಕು. ತೀರ ಕ್ವಚಿತ್ತಾಗಿ ಅವರುಗಳು ಈ ಹೋಗುತ್ತಾರೆ.

'ಕಣ್ಣಿನೊಳಗೆ ನೋಡೋ ಹರಿಯ ಒಳ
ಗಣ್ಣಿನಿಂದಲಿ ನೋಡೋ ಮೂಜಗದೊಡೆಯ' //೧೨//

ಎಂಬ ಪುರಂದರ ದಾಸರ ಕೀರ್ತನೆಯಲ್ಲಿ ಯೋಗದ ಪ್ರಾರ ಆಗುತ್ತದೆ.

'ಆಧಾರ ಮೊದಲಾದ ಆರುಚಕ್ರ
ಶೋಧಿಸಿ ಬಿಡಬೇಕು ಈ ಕ್ಷಣ ಮೂರು
ಸಾಧಿಸಿ ಸುಷುಮ್ನ ದಾರಿ ಅಲ್ಲಿ
ಭೇದಿಸಿ ನೀ ಪರಬ್ರಹ್ಮನ್ನ ಸೇರು' ।।೧।।

ಎಂದು ಹೇಳುತ್ತಾರೆ. ಮುಂದಿನ ನುಡಿಯಲ್ಲಿ

'ಎವೆ ಹಾಕದೆ ಮೇಲೆ ನೋಡು ಮುಂದೆ
ತವಕದಿಂದಲಿ ವಾಯುಬಂಧನ ಮಾಡು
ಸವಿದು ನಾಮವ ಪಾನಮಾಡು ಅಲ್ಲಿ
ನವ ವಿಧ ಭಕ್ತಿಲಿ ನೀ ನಲಿದಾಡು' ।।೨।।

ಎನ್ನುತ್ತಾರೆ. ಮೊದಲ ನುಡಿಯಲ್ಲಿ ಯೋಗಸಾಧನದ ಹೆಜ್ಜೆ ಪರಬ್ರಹ್ಮನನ್ನು ಸೇರು ಎಂದ ಪುರಂದರದಾಸರು ಎರಡನೆ ವಾಸ್ತವವಾಗಿ ಆ ಹೆಜ್ಜೆಗಳಲ್ಲಿ ದೊರೆಯುವ ಅನುಭವ ಪರಬ್ರಹ್ಮನನ್ನು ಸೇರಿದ ಮೇಲೆ ದೊರೆಯುವ ಬ್ರಹ್ಮಾನಂ ಹೇಳಬೇಕಾಗಿತ್ತು. ಆದರೆ ಧ್ಯಾನದ ರೀತಿಯನ್ನು ಹೇಳುತ್ತ, ಪರ

ವಾ ಸೇರಿದ ಬ್ರಹ್ಮಾನಂದವನ್ನು ಹೇಳದೆ. ಅವನ 'ನಾಮವ ಪಾನ ಮಾಡು ಅಲ್ಲಿ
ವಿಧ ಭಕ್ತಿಲಿ ನೀ ನಲಿದಾಡು' ಎಂದು ಬಿಡುತ್ತಾರೆ. ಮತ್ತೆ ಕೊನೆಯ ನುಡಿಯಲ್ಲಿ

'ಅಂಡದೊಳಗೆ ಆಡುತಾನೆ ಭಾನು
ಮಂಡಲ ನಾರಾಯಣ ನೆಂಬುವನೆ
ಕುಂಡಲಿ ತುದಿಯೊಳಿದ್ದಾನೆ
ನಮ್ಮ ಪುರಂದರ ವಿಠಲನು ಪಾಲಿಸುತಾನೆ ।।೩।।

ದು ಕುಂಡಲಿನಿಯು ಜಾಗ್ರತವಾದ ಹಾಗೂ ಸಹಸ್ರಾರದಲ್ಲಿ ಕಾಣು
ರಾಯಣನನ್ನು ಗುರುತಿಸಿ, ಆ ಪುರಂದರ ವಿಠಲನು ನಮ್ಮನ್ನು ಪಾಲಿಸುತ್ತಾ
ದು ತಾವು ಹೊರಗೆ ನಿಂತು ಹೇಳಿದಂತೆ ಹೇಳುತ್ತಾರೆ. ಬ್ರಹ್ಮಾನಂದವೆಂದ
ದ್ವೈತ ಭಾವವೆಂದೇನೂ ಅಲ್ಲ. ಬಿಂಬರೂಪೀ ಪರಮಾತ್ಮನನ್ನು ಕಂಡಾಗ ಆಗು
ನಂದವು ಕೂಡ ಬ್ರಹ್ಮಾನಂದವೆನಿಸುತ್ತದೆ. ಇಂಥ ಒಂದು ಸಂದರ್ಭದ
ಹಿಪತಿರಾಯರು ತಮ್ಮ ಅನುಭವಗಳನ್ನು ಹೇಳಿದ್ದನ್ನು ಗಮನಿಸಬೇಕು.

'ಲೇಸು ಲೇಸಾಯಿತು ಭಾಸ್ಕರ ಗುರುಕೃಪೆ ಲೇಸ ಲೇಸಾಯಿತುವಮಾ'।। ಎಂ
ರ್ತನೆಯಲ್ಲಿ (ಕೀ - ೪೮೬) ಮೊದಲು ಮನ ಸ್ವಸ್ಥವಾದುದನ್ನು ಹೇ
ಸ್ತಾರವಾದ ವಸ್ತು ಇದೆಯೆಂದು ವಿಸ್ತರಿಸೆನಗಿನ್ನುದೋರಿತು' ಎಂದು ಹೇಳುತ್ತಾ
ನಂತರ ಅದು ಕೊಟ್ಟ ಸವಿಸುಖವನ್ನು ಹೇಳಿ ಅದುವೆ 'ಸಕಲೋತ್ತಮನ
ಕಾಕ್ಷರ ಬ್ರಹ್ಮ ಏಕೋಮಯವಾಗಿದೋರಿತು' ಎಂದು ಹೇಳುತ್ತಾರೆ. ಕೊನೆಯ
ಬ್ರಹ್ಮಸಾಕ್ಷಾತ್ಕಾರದ ಅಂತಿಮ ಭಾವ 'ಕೂಡಿತು ಸಮರಸವಾಗಿ ಮಹಿಪತಿ ಜ
ಡೆಯನ ಚರಣದಂಗುಷ್ಠದಲಿ' ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಇ
ದ್ವೈತಭಾವದ ಬ್ರಹ್ಮಾನಂದದ ಸುಖ ಎಂದು ಬೇರೆ ಹೇಳಬೇಕಾಗಿಲ್ಲ.

ಪುರಂದರದಾಸರ 'ಕಣ್ಣಾರೆ ಕಂಡೆ ವಚ್ಯುತನ ಕಂಚಿ। ಪುಣ್ಯಕೊ
ರಿರಾಜವರದನ।।' ಎಂಬ ಕೀರ್ತನೆಯಲ್ಲಿ, //೧೩// 'ಭಾನುಕೋಟಿ ತೇಜದವ
ವಕಾನನಕೆ ದೀಪ್ತ ಹವ್ಯವಾಹನನ। ದಾನವರೆದೆ ದಲ್ಲಣನ ಮುನಿ। ಮಾ
ಕಂಸಯೆಂದೆನಿಸಿ ಮೆರೆವನ' ಎಂಬ ಸಾಲುಗಳಲ್ಲಿ ಹಾಗೂ 'ಲಗ್ಗೆಯೇ ವೈಕು
ಗ್ಗೆಯೇ' ಎಂಬ ಕೀರ್ತನೆಯಲ್ಲಿ //೧೪// 'ಭ್ರೂಮಧ್ಯದೆಡೆಯೆ
ನಾಸಿಕಾಗ್ರದೊಳು। ನೇಮದಿಂದ ದೃಷ್ಟಿಯ ನಿಲ್ಲಿಸಿ' ಎಂಬ ಸಾಲುಗ
ಯೋಗಸಾಧನ ಮಾರ್ಗದ ಪ್ರಕಾಶ, ಏಕಾಗ್ರತೆ ಹಾಗು ಸಾಕ್ಷಾತ್ಕಾರದ ಕಿಂ
ದರ್ಶನವನ್ನು ಕಾಣಬಹುದಾಗಿದೆ. ಆದರೆ ಮಹಿಪತಿರಾಯರ ಇಂಥ ಅನುಭ
ಪದಗಳು ಸ್ಪಷ್ಟವಾಗಿವೆ. ನಾನಾವಿಧವಾದ ಪ್ರಕಾಶವನ್ನು ಕಂಡ, ನಾದವನ್ನು ಕೇ
ಅವರ ಅನುಭವದ ಅನೇಕ ಕೃತಿಗಳನ್ನು ಈ ಮೊದಲೇ ಉಲ್ಲೇಖಿಸಲಾಗಿದೆ.

'ಬ್ರಹ್ಮಾನಂದದ ಸಭೆಯೊಳಗಲ್ಲಿ
ಸುಮ್ಮನೆ ಇರುತಿಹದೇನಯ್ಯ'

ಎಂಬ ಕೀರ್ತನೆಯಲ್ಲಿ //೧೫// ಪುರಂದರದಾಸರು ಗೂಢ ಆಧ್ಯಾತ್ಮಿಕ ಅನುಭವ ವರ್ಣನೆಯನ್ನು ತುಸು ಮಾಡಿದ್ದಾರೆ. ಪರಮಾತ್ಮನ ಸನ್ನಿಧಿಯ ಬ್ರಹ್ಮಾನಂದದ ಶಾಂತವಾಗಿರುವ ಆತ್ಮನ ವರ್ಣನೆ 'ಮಾಡದು ಕೂಡದು ಉಣ್ಣದು ಮಾಣದ ಕಾಡದು ಬೇಡದು ಕಂಗೆಡದು' ಎಂದು ಊಹಿಸಿಕೊಂಡರೂ, ಇಂಥ ಸಂಕೀರ್ಣ ಅನುಭವಗಳನ್ನು ಹೇಳುವಾಗಲೂ ಕೊನೆಗೆ ಅವರು 'ಬಲ್ಲಿದ ನಮ್ಮ ಪುರಂ ವಿಠಲ। ಗಲ್ಲದೆ ತಿಳಿಯದು ಜಗದೊಳಗೆ' ಎಂದು ಬಿಡುತ್ತಾರೆ. ಪರಮಾತ್ಮ ಅನುಭವವು ನಮ್ಮ ತಿಳುವಳಿಕೆಗೆ ಅತೀತವಾದದ್ದು ಎಂದು ಸ್ಪಷ್ಟವಾಗಿ ಹೇಳುತ್ತಾ ಆದರೆ ಮಹಿಪತಿರಾಯರು

'ಕಣ್ಣಾರೆ ಕಂಡೆವು ಚಿನ್ಮಯದ ರೂಪ ಕಣ್ಣಾರೆ ಕಂಡೆವು ಮಾ।
ಕಣ್ಣೊಳಗಿಹುದು ಕಾಣಿಸಿಕೊಳ್ಳದು ಕಣ್ಣಿಗೆ ಕಣ್ಣಾಗಿ ದೋರುದು ಮಾ।
ಕಣ್ಣಿನೊಳಗಿನ್ನು ಕಣ್ಣಾರೆ ಕಾಣುವ ಜಾಣರಿಗೆ ಪೂರ್ಣಗೈಸುವದು ಮಾ।
ಆಡುತ ಮಾಡುತ ಅಡಗುತಲಿಹುದು ಗೂಢಗುಹ್ಯವಾಗಿ ದೋರದು ಮಾ।
ನೋಡೇನೆಂದರ ತನ್ನ ಗೂಡಿನೊಳಗದೆ ಹಿಡದೇನಂದರೆ ಕೈಗೂಡದು ಮಾ।
ಉತ್ತಮರೊಳಗೆ ಅತ್ಯಂತವಾಗಿನ್ನು ಅತ್ತಿತ್ತಲಾಗದೆ ಇಹುದು ಮಾ।
ನಿತ್ಯನಿಜವಾದ ವಸ್ತುಮಹಿಪತಿ ಹೃತ್ಕಮಲದೊಳು ಕಂಡೆನು ಮಾ।

(ಕೀ- ೧೩೪

ಹೀಗೆ ಕಣ್ಣಿಗೆ ಕಂಡದ್ದನ್ನು ನಮ್ಮ ಮುಂದೆ ಇರಿಸುತ್ತಾರೆ. ಗೂಢಗುಹ್ಯವಾಗಿರ ವಸ್ತು ಯಾವುದು? ಅದು ಹೇಗೆ ಕಾಣುತ್ತದೆ. ಆದರ ಪರಿಯನ್ನು ಇಷ್ಟು ಸ್ಪಷ್ಟವ ಉಲ್ಲೇಖಿಸಿದ್ದನ್ನು ಬೇರೆಡೆ ಕಾಣುವುದು ಅಪರೂಪ ಎನಬಹುದು. ಇಲ್ಲಿ ರಾಯ ತಮ್ಮ ಹೃತ್ಕಮಲದಲ್ಲಿ ಕಂಡ ನಿತ್ಯ ನಿಜವಾದ ವಸ್ತು ಮಹಿಪತಿಯು ಬಿಂಬರೂ ಪರಮಾತ್ಮನೆಂದು ಬೇರೆ ಹೇಳಬೇಕಾಗಿಲ್ಲ.

ಕನಕದಾಸರು ಕೂಡ ಈ ಯೋಗ ಸಾಧನ ಮಾರ್ಗವು ಅತಿ ಗಹನವಾದದ್ದೆಂದ ಇದನ್ನು ಎಲ್ಲರೂ ಅರಿಯರು ಎಂಬುದನ್ನು ಹೇಳುತ್ತಾರೆ. 'ಬಲ್ಲವರಿನಿಬರು ಎಲ್ಲಾ ಅರಿಯರು ಫುಲ್ಲಲೋಚನನೆಂಬುದನು' ಎಂದು ಹೇಳುತ್ತ ಇದನ್ನು ಬ ವೇದ-ಪುರಾಣಕಾಲಗಳ ವ್ಯಕ್ತಿಗಳ ಪಟ್ಟಿಯನ್ನು ಕೊಡುತ್ತಾರೆ. //೧೬// ಪುರಂ ದಾಸರಂತೆ ಅವರು ಕೂಡ ಅಲ್ಲಲ್ಲಿ ತಮ್ಮ ಕೃತಿಗಳಲ್ಲಿ ಯೋಗಸಾಧನ ಮಾರ್ಗ ಪರಿಚಯವನ್ನು ಮಾಡಿಕೊಡುತ್ತಾರೆ.

'ದಾಸನಾಗಬೇಕು ಸದಾಶಿವನ ದಾಸನಾಗಬೇಕು
ದಾಸನಾಗಬೇಕು ಕ್ಲೇಶಪಂಚಕವಳಿದು
ಆಸೆಯಲ್ಲಿ ಮನ ಸೂಸದೆ ಸರ್ವದಾ'

ಎಂಬ ಕೀರ್ತನೆಯಲ್ಲಿ

'ಆರು ಚಕ್ರದಿ ಮೆರೆವ - ಅಖಂಡನ
ಮೂರು ಗುಣವ ತಿಳಿದು'

ಎಂಬುದಾಗಿ ಆರು ಚಕ್ರಗಳ ವಿಷಯವನ್ನು ಹೇಳುತ್ತಾರೆ. ಆದರೆ ಅಲ್ಲಿಯೂ 'ಆರ ಮೂರು ಹದಿನಾರು ತತ್ವವ ಮೀರಿ। ತೋರುವ ಕಾಗಿನೆಲೆಯಾದಿಕೇಶವನಡಿ' ಎಂದು ಪರಮಾತ್ಮನು ಅದೆಲ್ಲವನ್ನೂ ಮೀರಿ ಇರುವನೆಂಬುದಾಗಿ ಹೇಳುತ್ತಾರೆ. //೧೭//

'ಇಷ್ಟು ದಿನ ವೈಕುಂಠ। ಎಷ್ಟು ದೂರವೋ ಎನುತಲಿದ್ದೇ। ದೃಷ್ಟಿಯಿಂದಲಿ ನಾನು ಕಂಡೆ। ಸೃಷ್ಟಿಗೀಶನೇ ಶ್ರೀರಂಗಶಾಯಿ' ಎಂಬ ಕೀರ್ತನೆಯಲ್ಲಿ ಅವರು ಪಡೆ ದೃಷ್ಟಾಂತದ ಚಿತ್ರಗಳನ್ನು ಕೊಡುತ್ತಾರೆ. ಅಲ್ಲಿ 'ವನ ಗೋಪುರಗಳು, ಘ ಸರೋವರಗಳು, ಕನಕ ಗೋಪುರಗಳು' ಅವರಿಗೆ ಕಾಣಿಸುತ್ತವೆ. ಮುನಿಗಳ ತುಂಬುರರು, ನಾರದರು ಎಲ್ಲರೂ ಅಲ್ಲಿರುತ್ತಾರೆ. ಈ ಎಲ್ಲ ಪರಿವಾರ ದೇವತೆಗ ಮಧ್ಯ ಅವರು 'ರಂಗಶಾಯೀ ಕಾಗಿನೆಲೆಯಾದಿ ಕೇಶವನನ್ನು' ಕಾಣುತ್ತಾರೆ.//೧೮/ ಇಲ್ಲಿ ಅನುಭವದ ವೈಶಿಷ್ಟ್ಯ ಕಂಡರೂ 'ತಾರತಮ್ಯ'ದ ಕಲ್ಪನೆಯೇ ಮೂಲವಾಗಿ ಎನಿಸದಿರದು.

'ಆರಿಗಳವಲ್ಲಾತ್ಮ ಯೋಗ ಸಿದ್ಧಿ
ಸೇರಿ ಸುಜ್ಞಾನದಲಿ ಸವಿದುಂಬಗಲ್ಲದೆ'

ಎಂಬ ಇನ್ನೊಂದು ಕೀರ್ತನೆಯಲ್ಲಿ ಕನಕದಾಸರು ಆತ್ಮಯೋಗದ ಉಲ್ಲೇಖವನ ಮಾಡುತ್ತಾರೆ. ಆದರೆ ವಿವರಗಳಿಲ್ಲ. ಕೊನೆಯ ನುಡಿಯಲ್ಲಿ

'ಅಕಾರ ಉಕಾರ ಮಕಾರ ಎಂತೆಂಬ। ಓಂಕಾರಕೆ ಕೂಡಿ ಎರಡಿಲ್ಲದ।
ಸಾಕಾರ ಕಾಗಿನೆಲೆಯಾದಿಕೇಶವನ। ಆಕಾರದೊಡನಾಡುವರಿಗಲ್ಲದೆ।।

ಎಂದು ಹೇಳುತ್ತಾರೆ. //೧೯// 'ಕೂಡಿ ಎರಡಿಲ್ಲದ' ಎಂಬ ಮಾತನ್ನು ಹೇಳಿದರ ಸಾಕಾರ ಕಾಗಿನೆಲೆಯಾದಿಕೇಶವನ ಆಕಾರ ದೊಡನಾಡುವುದನ್ನು ಒತ್ತಿ ಹೇಳುತ್ತಾ ಯೋಗಾನುಭವಗಳನ್ನು ನಿರೂಪಿಸುವಾಗ ಅವರು ಬ್ರಹ್ಮಾನಂದವನ್ನು ಹೇಳ ಆಕಾರದೊಡನೆ ಆಡುವುದನ್ನು ಮಾತ್ರ ಹೇಳುತ್ತಾರೆ.

'ಎಲ್ಲಿ ನೋಡಿದರಲ್ಲಿ ರಾಮ ಇದ
ಬಲ್ಲ ಜಾಣರು ದೇಹದಲ್ಲಿ ನೋಡಣ್ಣ'

ಎಂಬ ಕೀರ್ತನೆಯಲ್ಲಿ

'ಕಣ್ಣೀ ಕಾಮನ ಬೀಜ ಈ
ಕಣ್ಣಿಂದಲೇ ನೋಡು ಮೋಕ್ಷಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು
ಒಳಗಣ್ಣಿಂದಲೆ ದೇವರ ನೋಡಣ್ಣ'

ಎಂದು ಒಳಗಣ್ಣಿನಿಂದ ಅಂದರೆ ಧ್ಯಾನದಿಂದ ಅಂತರಂಗದಲ್ಲಿ ಪರಮಾತ್ಮನ ಕಾಣಲು ಹೇಳುತ್ತಾರೆ. //೨೦// ಮುಂದೆ ಶ್ವಾಸಬಂಧನದಿಂದ, ಕುಂಭಕದ ಅನು ಪಡೆದು, ನಾಸಾಗ್ರದಲ್ಲಿ ಪರಮಾತ್ಮನ ಶಕ್ತಿಯ ಲೀಲಾವಿಕಾಸದ ಅನುಭವವ

ಪಡೆಯುವುದು ಮತ್ತು ಒಳಗಿವಿಯಲ್ಲಿ ನಾದವನ್ನು ಕೇಳುವ ರೀತಿಯನ್ನು ಸುಂದರವಾಗಿ ನಿರೂಪಿಸುತ್ತಾರೆ.

'ಕಿವಿಯೋ ಕರ್ಮಕೆ ದ್ವಾರ ಈ
ಕಿವಿಯಿಂದಲೇ ಕೇಳೋ ಮೋಕ್ಷಸಾರ
ಕಿವಿಯೋ ಕರ್ಮಕುಠಾರ ಒಳ
ಗಿವಿಯಲ್ಲಿ ಕಾಣೋ ನಾದದ ಬೇರ'

ಎಂದು ಹೇಳುತ್ತ ಯೋಗಾನುಭವವನ್ನು ಪಡೆಯುವ ರೀತಿಯನ್ನು ಸೂಚ್ಯ ಆದರೂ ನಿರ್ದಿಷ್ಟವಾಗಿ ಹೇಳಿ ಕೊನೆಗೆ 'ನಾಡಾಡಿ ದೈವಗಳೆಲ್ಲ ನಮ್ಮ ಬಡ ಕೇಶವನೊಬ್ಬನೆ ಬಲ್ಲ' ಎಂದು ಹೇಳಿ ಮುಗಿಸಿಬಿಡುತ್ತಾರೆ.

ಇಂಥ ಸಂದರ್ಭಗಳಲ್ಲಿ ಮಹಿಪತಿರಾಯರ ಅನುಭವಗಳು ನೇರವಾಗಿವೆ ಪ
ಸ್ಪಷ್ಟವಾಗಿವೆ ಅವರು ತಮ್ಮ ಗುರುಗಳಾದ ಭಾಸ್ಕರ ಸ್ವಾಮಿಗಳ ಸ
ಮಾತ್ರದಿಂದಲೇ ಪಡೆದ ಅನುಭವವನ್ನು ನೋಡಬಹುದು.

'ಅರ್ಕಮಂಡಲಗಳು ರವಿಶಶಿಕಿರಣವು
ಓಂಕಾರ ಮೊದಲಾದ ದ್ವಾದಶನಾದದಾ ಭೇದದ ಘೋಷ
ಚಿನ್ಮಯ ಚಿದ್ರೂಪಕಂಡು ಬೆರಗಾಗಿ ಮನ ಭ್ರಾಂತಿ ಅಜ್ಞಾನವನು
ಜರಿಯಲಿನ್ನ! ಏಕೋದೇವ ಈತ... ..... (ಕೀ-

ಅನುಭವಗಳು ಇಲ್ಲಿ ಸ್ಪಷ್ಟವಾಗಿವೆ. ಸಚಿತ್ರವಾಗಿವೆ. ಪ್ರಕಾಶ, ನಾದ ಚಿನ
ಚಿದ್ರೂಪಮಯವಾದ ಪರಮಾತ್ಮನ ಸಾಕ್ಷಾತ್ಕಾರವು ಸುಸ್ಪಷ್ಟ
ನಿರೂಪಿತವಾಗಿದೆ. ಆದರಂತೆ,

'ಮನಸಿಗೆ ಮನ ಹಚ್ಚಿ ಮನೋನ್ಮನ ಮಾಡಿ
ಘನಸುಖದೊಳು ಬೆರದಾಡಿ ಅನುಭವಿಸಿ ನೋಡಿ' (ಕೀ

'ದೂರಿಲ್ಲ ದೂರಿಲ್ಲ ತಿಳಕೊಳ್ಳಿ ಪೂರ್ಣ ಅರಿತು ಬ್ಯಾಗ
ತಿರುಗಿ ನೋಡಲು ತನ್ನೊಳು ದೋರುತಿದೆ ಬ್ರಹ್ಮಭೋಗ
ಸಾರವೇ ಸುಖಿಗರುವತದೆ ನೋಡಿರೋ ರಾಜಯೋಗ
ಪರದೆ ಇಲ್ಲದೆ ಗುರುತುದೋರುವಾ ನೋಡಿ ಕಣ್ಣಾರೆ ಈಗ' (ಕೀ-

ಎಂಬ ಪದಗಳಲ್ಲಿ ಅನುಭವಗಳು ಸ್ಪಷ್ಟವಾಗಿವೆ. 'ಘನ ಸುಖದ
ಬೆರೆದಾಡುವುದು' 'ಬ್ರಹ್ಮಭೋಗ' 'ಸಾರಸುಖ' ಹಾಗೂ ಪರದೆ ಇಲ್ಲದೆ ಗು
ತೋರುವ' ಅನುಭವಗಳು ಸ್ಪಷ್ಟವಾಗಿವೆ ಮತ್ತು ವಿಶಿಷ್ಟವಾಗಿವೆ.

ಇದೇ ಇದೇ ಬ್ರಹ್ಮಮಯ ಸದಮಲಾನಂದೋದಯ
ಉದಿಯಾಸ್ತಮಾನವಿಲ್ಲದೆ ಸದೋದಿತ ಭಾಸುತಿದ' (ಕೀ-

ಎಂಬಂಥ ಸಾಲುಗಳಿಗೆ ವಿವರಣನೆಯ ಅಗತ್ಯವೂ ಕಂಡು ಬರುವದಿಲ್ಲ.

ಆಧ್ಯಾತ್ಮದ ಅನುಭವಗಳು ಎಲ್ಲರಿಗೂ ಒಂದೇ ರೀತಿಯಾಗಿ ಬರಬೇಕೇ
ನಿಯಮವೇನೂ ಇಲ್ಲ. ಅದು ಸಾಧಕನು ಅನುಸರಿಸಿದ ಸಾಧನ ಮಾರ್ಗವ
ಅವಲಂಬಿಸಿರುತ್ತದೆ. ಬೇರೆ ಬೇರೆ ಸಾಧನ ಮಾರ್ಗಗಳನ್ನು ಅನುಸರಿಸಿ ಅ
ಮಾರ್ಗದಲ್ಲಿಯೇ ಅನುಭವಗಳನ್ನು ಪಡೆಯಬಹುದು. ಒಬ್ಬನೇ ಸಾಧಕನು ಅನೆ
ಪ್ರಕಾರದ ಅನುಭವಗಳನ್ನು ಪಡೆಯುವ ಸಾಧ್ಯತೆಗಳೂ ಇವೆ. ಸಾಧಕ
ಬರಬಹುದಾದ ವಿವಿಧ ಅನುಭವಗಳನ್ನು ಸ್ವಾಮಿ ಮುಕ್ತಾನಂದರು ತಮ
'ಚಿತ್‌ಶಕ್ತಿ ವಿಲಾಸ' ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ.

''ದೀಕ್ಷೆಯ ಫಲವು ಬೇರೆ ಬೇರೆ ಜನರಲ್ಲಿ ಬೇರೆ ಬೇರೆ ರೀತಿಯಿ
ಪ್ರಕಟವಾಗುತ್ತಿರುವುದರಿಂದ ಶಾಸ್ತ್ರಗಳಲ್ಲಿ ಅವುಗಳಿಗೆ, ಕ್ರಿಯಾವತಿ, ಕಲಾವ
ವರ್ಣಮಯಿ ಮತ್ತು ವೇಧಮಯಿ ಅಥವಾ ಜ್ಞಾನಮಯಿ ದೀಕ್ಷೆಗಳೆಂಬ ಹೆಸ
ಕೊಡಲಾಗಿದೆ. ಕ್ರಿಯಾವತಿ ದೀಕ್ಷೆಯಾದೊಡನೆ ಸಾಧಕನಿಗೆ ಯೋಗಾ
ಪ್ರಾಣಾಯಾಮ. ಬಂಧಮುದ್ರೆ, ಕುಂಭಕ ಇತ್ಯಾದಿ ಯೌಗಿಕ ಪ್ರಕ್ರಿಯೆಗ
ತಾವಾಗಿಯೇ ಸಂಭವಿಸುವವು. ಕಲಾವತೀ ದೀಕ್ಷೆಯಲ್ಲಿ ಅವನಿಗೆ ಜ್ಯೋತಿದರ್ಶ
ನಾದಶ್ರವಣ ದಿವ್ಯಗಂಧವಾಸನೆ ರಸಶಬ್ದ ಸ್ಪರ್ಶ ರೂಪಗಳ ಅನುಭವಗಳು ಆಗುತ್ತ
ಒಮ್ಮೊಮ್ಮೆ ಅವನಿಗೆ ದೇವ ದೇವತೆಗಳ ದರ್ಶನಲಾಭವೂ ಆಗುವ
ವರ್ಣಮಯೀ ದೀಕ್ಷೆಯಲ್ಲಿ ಕಾವ್ಯಗಳು, ಮಂತ್ರಗಳು ಸ್ಫುರಿಸ ಹತ್ತುವ
ವೇಧಮಯಿಯಲ್ಲಿ ಸುಷುಮ್ನಾ ನಾಡಿಯಲ್ಲಿ ಚಕ್ರವೇಧದ ಅನುಭವವಾಗುವ
ಜ್ಞಾನಮಯಿ ದೀಕ್ಷೆಯಲ್ಲಿ ಅವನ ಅಂತರಂಗದಲ್ಲಿ ಜ್ಞಾನೋದಯವಾಗುವ
ಕೆಲವು ಸಾಧಕರಿಗೆ ಈ ಎಲ್ಲವುಗಳ ಸಮ್ಮಿಶ್ರ ಅನುಭವವಾಗುವದು'' //೨೧/

ಮಹಿಪತಿರಾಯರಿಗೆ ಇಂಥ ಸಮ್ಮಿಶ್ರ ಅನುಭವಗಳು ಉಂಟಾಗಿರಬಹುದೇ
ಅವರ ಕೃತಿಗಳಿಂದ ಊಹಿಸಬಹುದಾಗಿದೆ. ಅಂತೆಯೇ ಅವರ ಆಧ್ಯಾ
ಅನುಭವಗಳು ವಿಶಿಷ್ಟವಾಗಿವೆ ಮತ್ತು ವೈವಿಧ್ಯಮಯವಾಗಿವೆ.

೬.೫ ಸುಪಥ ದರ್ಶನ

'ಉದ್ಧಾರೇದಾತ್ಮನಾತ್ಮನಂ' ಎಂಬಂತೆ ಪ್ರತಿಯೊಬ್ಬನು ಮೊದಲು 'ತನ್ನ
ತಾನು ಉದ್ಧರಿಸಿಕೊಳ್ಳಬೇಕು'. ತನ್ನನ್ನು ತಾನು ತಿಳಿದುಕೊಂಡಮೇಲೆ ಅದರಿಂದಾ
ಸ್ವಾಭಾವಿಕ ಪರಿಣಾಮಗಳೇ ಲೋಕೋದ್ಧಾರ, ಲೋಕ ಸಂಗ್ರಹ, ಲೋಕ
ಹಾಗೂ ಸರ್ವಭೂತಹಿತ. ಸುಂದರವಾಗಿ ಅರಳಿದ ಹೂವಿಗೆ ಸುವಾಸನೆಯ
ಬೀರಲು ಯಾರೂ ಹೇಳುವುದಿಲ್ಲ. ಅದರಂತೆ ಬೆಳಗುವ ಜ್ಯೋತಿಗೆ ಸುತ್ತ
ಕತ್ತಲನ್ನು ಕಳೆಯಲು ಅಥವಾ ಸುತ್ತಲೂ ಬೆಳಕು ಬೀರಲು ಯಾ
ಬಿನ್ನವಿಸಬೇಕಾಗುವುದಿಲ್ಲ. ಅದು ಅವುಗಳ ಗುಣಧರ್ಮ. ಹೂವು ವಿತರಿ

ವಾಸನೆಗೆ, ಜ್ಯೋತಿ ಬೀರುವ ಬೆಳಕಿಗೆ ವಿಧಿ ನಿಷೇಧಗಳಾಗಲಿ, ಕಟ್ಟು ಾಡುಗಳಾಗಲಿ ಇರುವುದಿಲ್ಲ. ಬೇಕಾದರೆ ಪಡೆಯಬಹುದು. ಇಲ್ಲವಾದರ ಡಬಹುದು. ಆದರೆ ಅವುಗಳು ತಮ್ಮ ಕೆಲಸವನ್ನು ಮಾಡುತ್ತಲೇ ಇರುತ್ತವೆ ದರಂತೆ ಮಹಾನುಭಾವರ, ಸತ್ಪುರುಷರ, ಸಂತರ ಹಾಗೂ ಹರಿದಾಸರ ಕೆಲಸ. ತಾವ ಂಡು ಉಂಡ ನಿತ್ಯ ಸತ್ಯವನ್ನು ಬಿತ್ತರಿಸುತ್ತಾರೆ. ಕೆಟ್ಟ ಮಾರ್ಗವನ್ನು ತೊರೆದ ನ್ಮಾರ್ಗದಿಂದ ಸದ್ಗತಿ ಪಡೆಯಿರಿ. ಎಂದು ಅವರು ಹೇಳುತ್ತಾರೆ. ಅದಕ್ಕೆ ಜಾತಿ ುತ, ಪಂಥಗಳ ಕಟ್ಟುಪಾಡುಗಳನ್ನು ವಿಧಿಸುವುದಿಲ್ಲ. ಮಾನವ ಕುಲ ಒಂದೇ, ಎಲ ಮಾನವರೂ ಉದ್ಧಾರವಾಗಬೇಕೆಂಬುದೇ ಅವರ ಹಂಬಲಲಾಗಿರುತ್ತದೆ. ಅಂತೆಯೆ 'ಮತವನ್ನು ಮೀರಿದ ನೀತಿ, ಧರ್ಮ ಮಾನವ ಮೌಲ್ಯಗಳು ಇವನ್ನು ದಾಸರ ಅರಿತವರಾಗಿದ್ದರು. ಇದಕ್ಕೆ ಹೆಚ್ಚಿನ ಬೆಲೆ ಕೊಡುವವರಾಗಿದ್ದರು. ಇವಿಲ್ಲದ ತಮ ಮತವೇ ಇರಲಿ ಅದನ್ನು ಅವರು ಒಪ್ಪಿಕೊಳ್ಳುತ್ತಿರಲಿಲ್ಲ ಆದ್ದರಿಂದೀ ದಾಸಸಾಹಿತ್ಯಕ್ಕೆ ಸರ್ವ ಮಾನ್ಯತೆ ದೊರೆಯಿತು.' ಎಂದು ಡಾ. ರಂ. ಶ್ರೀ. ಮುಗ ಅವರು ಹೇಳಿದರು. //೨೨//

ಹರಿದಾಸರು ಒಂದು ಸ್ಥಳದಲ್ಲಿ ನಿಲ್ಲುವವರಲ್ಲ. ತಾವು ಕಂಡ ನಿತ್ಯ ಸತ್ಯವನ ಹರಿಗುಣಗಾನ ಮಾಡುತ್ತ ತೀರ್ಥ ಕ್ಷೇತ್ರಗಳನ್ನು ಸುತ್ತುತ್ತಿದ್ದರು. ಆದರಿಂದ ಜನಸಾಮಾನ್ಯರ ಸಂಪರ್ಕ ಅವರಿಗೆ ಬರುತ್ತಿತ್ತು. ಆಗ ಲೋಕದಲ್ಲಿ ಕಂಡುಬರ ಡೊಂಕುಗಳ ಕುರಿತು ತಿಳಿಸಿ ಹೇಳುತ್ತಿದ್ದರು. ಕಣ್ಣಿಗೆ ಕಂಡ ವಿಷಯಗಳನ್ ಹರಿಸ್ತುತಿಗೆ, ಜೀವನ ಸಾರ್ಥಕತೆಗೆ ಬಳಸಿಕೊಂಡು ಕೀರ್ತನೆಗಳನ್ನು ಹಾಡಿದ ಅನ ಸಂದರ್ಭಗಳುಂಟು. ಪುರಂದರದಾಸರಂತೂ ದಿನನಿತ್ಯದ ಅನೇಕ ಘಟನೆಗ ಪಾರಮಾರ್ಥಿಕ ತಿರುವನ್ನು ಕೊಟ್ಟು ಭಕ್ತಿಯ ಪಥವನ್ನು ತೋರಿದ್ದಾರೆ. ಕಾ ಹಂಚುವದನ್ನು ಕಂಡಾಗ 'ಕಾಗದ ಬಂದಿದೆ ... ... ನಮ್ಮ ಪದುಮನಾಭ ತಾನೆ ಬ ಎಂದೋ, ಡಂಗುರ ಸಾರುವುದನ್ನು ಕೇಳಿದಾಗ 'ಡಂಗುರವ ಸಾರಿ ಹರಿ ಡಿಂಗರಿಗರೆಲ್ಲ' ಎಂದೋ, ಕಾಗೆ-ಕೋಳಿಗಳ ಕೂಗು ಕೇಳಿದಾಗ, ತಾಸು ಬಾರಿಸಿದ ಡೊಂಕುಬಾಲದ ನಾಯಿಯನ್ನು ಕಂಡಾಗ ಅವರ ಭಕ್ತ ಚೇತನ ಜಾಗ್ರತವಾದು ಕಾಣುತ್ತೇವೆ. ಇದು ಅವರವರು ನಡೆದು ಬಂದ ದಾರಿಯನ್ನು ಅವಲಂಬಿ ಪುರಂದರದಾಸರಂತೆ ಅಥವಾ ಉಳಿದ ಹರಿದಾಸರಂತೆ ಮಹಿಪತಿರಾ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿದವರಲ್ಲ. ವಿವಿಧ ದೇಶ ಕಾಲ ಸಂಪರ್ಕ ಕಡಿಮೆ ಎಂದೇ ಹೇಳಬೇಕು. ಅವರು ತಾವು ನೆಲೆಸಿದ್ದ ಕಾಖಂಡಿಕೆ ಬಿಟ್ಟು ಕದಲಿದವರಲ್ಲ. ತಾವಾಯಿತು ತಮ್ಮ ಸಾಧನವಾಯಿತು. ಅದಕ್ಕೆ ಕಾರ ಇದೆ. ಉಳಿದ ಹರಿದಾಸರುಗಳಂತೆ ಅಂದಿನ ವಾತಾವರಣದಲ್ಲಿ ಸ್ವತಂತ್ರ ತಿರುಗಾಡುವ ಸಾಧ್ಯತೆಗಳು ಇರಲಿಲ್ಲ. ರಕ್ಕಸಗಿ - ತಂಗಡಗಿ ಕಾಳಗದ ಅನಂತರ ಪ್ರದೇಶವೆಲ್ಲ ಮುಸ್ಲಿಮರ ಆಧಿಪತ್ಯಕ್ಕೆ ಒಳಗಾಗಿತ್ತು. ಯುದ್ಧದ ಆಘಾತದ

ನ್ನೂ ಆರಿರಲಿಲ್ಲ. ಆದ್ದರಿಂದ ಅವರಾಗಲೀ, ಅವರ ಸಮಕಾಲೀನರಾಗಲೀ, ತ
ಂಬೂರಿಗಳನ್ನು ಹಿಡಿದು ಊರಿಂದ ಊರಿಗೆ ಅಲೆದ ನಿದರ್ಶನಗ
ೂರೆಯುವುದಿಲ್ಲ. ಜೊತೆಗೆ ಮಹಿಪತಿರಾಯರು ಹಿಡಿದ ಮಾರ್ಗ
ೀಗಪ್ರಧಾನವಾದದ್ದು. ಆದು ಕೂಡ ಇದ್ದಲ್ಲಿಯೇ ಇರಲು ಪ್ರಚೋದಿಸಿರಬೇ
ದ್ದರಿಂದ ಉಳಿದ ಹರಿದಾಸರ ಕೃತಿಗಳಲ್ಲಿ ದೊರೆಯುವ ತೀರ್ಥಕ್ಷೇತ್ರ ಮಹಿಮೆಗ
ಯರ ಕೃತಿಗಳಲ್ಲಿ ದೊರೆಯುವುದಿಲ್ಲ. ಆದರಂತೆ ತತ್ತ್ವೋಪದೇಶ, ಲೋಕ ನೀತಿ
ತಿಗಳೂ ಕಡಿಮೆ ಎಂದೇ ಹೇಳಬಹುದು.

ಇಂಥ ಒಂದು ಸಂದರ್ಭ ಜಯತೀರ್ಥರ ಕಾಲದಲ್ಲಿ ಬಂದುದನ್ನು ನೆನೆಸಬಹುದ
ಠಾಧಿಪತಿಗಳಾಗಿದ್ದ ಅವರು ತಮ್ಮ ಶಿಷ್ಯರನ್ನು ಕಾಣಲು ಕೂಡ ಹೊರಬೀಳದ
ತಾವರಣ ಆದಾಗಿತ್ತು. ಮಲಿಕ-ಕಾಫಿರನ ದಾಳಿಗಳು ಜಯತೀರ್ಥರ
ುರಗೋಳದ ಗುಹೆಯಲ್ಲಿಯೇ ಕುಳ್ಳಿರುವಂತೆ ಮಾಡಿದುವು. ಆದರಿಂದ ಮಾಧ್ವ
ಹೋಪಕಾರವೇ ಆಯಿತು. ಅದು ಕಾರಣವೇ ಶ್ರೀಮಧ್ವರ ಮೂಲ ಮೂವತ್ತೇ
ಂಥಗಳಿಗೆ ಜಯತೀರ್ಥರು ಟಿಪ್ಪಣಿಗಳನ್ನು ಬರೆದು ಟೀಕಾರಾಯರೆಂ
ಖ್ಯಾತರಾದರು. ಅದರಂತೆ ಮಹಿಪತಿರಾಯರು ತಾಳ-ತಂಬೂರಿ ಹಿಡಿದು ಊರೂ
ಲೆಯಲಿಲ್ಲ. ಆದರಿಂದ ಹಾನಿಯೂ ಆಗಲಿಲ್ಲ. ಒಂದು ಯೋಗಮಾರ್ಗ
್ವಾನುಭವ ದರ್ಶನ ಕನ್ನಡಿಗರಿಗೆ ಆಯಿತು. ಇಷ್ಟಾಗಿಯೂ ಮಹಿಪತಿರಾಯ
ದ್ಧಿಯನ್ನು ಪಡೆದ ಮೇಲೆ ಸಹಜಗುಣವಾಗಿ ಬಂದ ಅವರ ಅನೇಕ ಕೃತಿಗಳು ಅಂ
ಲದ ಜನರ ನಡೆ ನುಡಿಗಳನ್ನು ಅವರನ್ನು ಎಚ್ಚರಿಸಿದ ಬಗೆಯನ್ನು, ನ
ೋಧೆಯನ್ನು ಹೇಳುತ್ತವೆ.

ಹರಿದಾಸರ ದೃಷ್ಟಿ ಪಾರಮಾರ್ಥದ್ದು, ಆದರೆ 'ಪರ'ಕ್ಕಾಗಿ ಇಹವನ್ನು ಅವ
ಡೆಯಲಿಲ್ಲ. ಇಹದಲ್ಲಿದ್ದು ಪರವನ್ನು ಮರೆತರೆ ಅವರನ್ನು ಎಚ್ಚರಿಸುತ್ತಾ
ದರಂತೆ ಕೇವಲ ಪಾರಮಾರ್ಥವನ್ನೇ ಚಿಂತಿಸುತ್ತ, ಇಹಲೋಕವನ್ನು ಕಡೆಗಣಿಸ
ವರನ್ನೂ ಬಿಡುವುದಿಲ್ಲ. 'ಇಹ ಹಾಗೂ ಪರ' ಎರಡರ ಸಮನ್ವಯವನ್ನು ತ
ದುಕಿನ ಸಂದೇಶವೆಂದು ಸಾರಿದ್ದಾರೆ. ನಿತ್ಯದ ಬದುಕನ್ನೇ ಅರ್ಥ ಮಾಡಿಕೊಂ
ಾಳು ಎಂದಿದ್ದಾರೆ. ಹಾಗೆ ಬದುಕಿಗೆ ಅರ್ಥ ಬರುವುದು ಭಗವಂತನ ಪ್ರಸಾದದಿ
ವನನ್ನು ಮರೆತರೆ ಜೀವನದಲ್ಲಿ ಅರ್ಥವಿಲ್ಲ. ಆದ್ದರಿಂದ ಮಹಿಪತಿರಾಯ
ೇಳುತ್ತಾರೆ.

'ಅರಿತುಕೊಳ್ಳಿರೋ ಬ್ಯಾಗ ಹರಿಯ ನಾಮಾಮೃತ
ದೊರಕುವುದಲ್ಲಿದು ನೋಡಿ ಸರ್ಕನೆ ಸರ್ವರಿಗಲ್ಲಾ' (ಕೀ·

ದು ರಾಯರ ಸಂದೇಶದ ಧ್ರುವಪದ. ಹರಿಯ ನಾಮಾಮೃತದಿಂದ ದೊರ

ಆನಂದ, ಮೋಕ್ಷಪ್ರಾಪ್ತಿ, ಮನುಷ್ಯ ಜೀವನದ ಧ್ಯೇಯ, ನಿರರ್ಥಕವಾದ ಬಾ
ಇದರಿಂದ ಬೆಲೆ ಬರುತ್ತದೆ. ಆದ್ದರಿಂದಲೇ ಈ ಮಾನವ ಜನ್ಮ ಸುಲಭ
ಬಂದದ್ದಲ್ಲವೆಂದೂ ಎಚ್ಚರಿಸುತ್ತಾರೆ.

'ಎಂದಿಗೆ ಬಾಹುದು ನೋಡಿ ಸಂದಿಸಿ ಮಾನವ ಜನ್ಮ
ಚಂದ ಮಾಡಿಕೊಳ್ಳಿರೋ ಬಂದ ಕೈಯಲಿ ಬ್ಯಾಗ'

ಎಂದು ಹೇಳುತ್ತಾರೆ. 'ಇರಳ್ಹಗಲ ಪೂರ್ಣ ಸುರಿವುತಿಹ ಅಮೃತ। ತರಳ ಮ
ಪ್ರಾಣ ಹೊರೆವ ಸಂಜೀವನ' ಈ ಸಂಜೀವನ ನಾಮಾಮೃತವನ್ನು ಅರಿತುಕೊ
'ಸುರಿ-ಸುರಿದು ಚಪ್ಪರಿಸಿ ಸೂರ್‍ಯಾಡಿ ಅನುದಿನ ಸೇವಿಸಬೇಕು ಆಲಸ್ಯ ಮಾಡಬ
ಎಂದು ಹೇಳುತ್ತಾರೆ.

'ಹೌದು ನಾವು ಎಚ್ಚತ್ತಿದ್ದೇವೆ. ಗುರು ಕರುಣ ಕೃಪೆಯಿಂದ ಪರಮ ದಿವ್ಯಾ
ಪಾನದಿಂದ ಎಚ್ಚತ್ತಿದ್ದೇವೆ' ಆದರೆ

'ಎದ್ದಿರ್‍ಯಾ ನಿವಿನ್ನೆದ್ದಿರ್‍ಯಾ
ಶುದ್ಧಿ ಮರೆದು ಭವ ನಿದ್ರಿಯ ಗಳದಿನ್ನೆದ್ದಿರ್‍ಯಾ
ಕಾಯ ಮಂದಿರದೊಳು ಮಾಯಮುಸುಕು ತೆಗೆದು' (ಕೀ-

ಹಾಗೆ ಏಳಬೇಕು. ಚನ್ನಾಗಿ ಮಲಗಿದ್ದ 'ಜನ್ಮ' ಹಾಸಿಗೆಯನ್ನು ಬಿಟ್ಟು ತನ್ನನ್ನು
ತಿಳಿಯುವ ಹಾಗೆ ಕಣ್ಣು ತೆರೆದು ಎದ್ದಿದ್ದರೆ, ನೀವಿನ್ನು ಶುದ್ಧ ಬದ್ಧರಾಗಿ ಮ
'ಇನಕೋಟಿ ತೇಜ' ನ ಕಾಣುವ ಹಾಗೆ ಕಣ್ಣು ತೆರೆದರೆ 'ದೀನ ಮಹಿಪತಿ ಸ್ವಾಮಿ
ಮನೋಹರ ಮಾಡುತ್ತಾನೆ.

ಸರಿ ಎದ್ದಿರಿ. ಎದ್ದ ಮೇಲೆ ಅಗಸನಿಗೆ ಬಟ್ಟೆಹಾಕಿ ಸ್ನಾನ ಮಾಡಬೇ
ಮಡಿವಾಳ ಎಂಥವನಿರಬೇಕು?

'ಜ್ಞಾನಗುರು ಶುದ್ಧ ಮಡಿವಾಳ
ಮನಮೈಲಿ ತೊಳೆವ ನಿರ್ಮಳ (ಕೀ

ಈ ಜ್ಞಾನಗುರುವೆಂಬ ಶುದ್ಧಮಡಿವಾಳ, 'ದೃಢ ಮನದ' ಬಂಡೆಗಲ್ಲಿನ
'ಸುಬೋಧ' ಸಬಕಾರವನ್ನು ಹಚ್ಚಿ, 'ವಿವೇಕ' ಉದಕದಲ್ಲಿ ಸೆಳೆದು ವೇಳೆ-
ಒಗೆಯುತ್ತಾನೆ. ಉದ್ದಿ, ಒರೆಸಿ ಅಹಂಭಾವದ ಕಲೆಯನ್ನು ತೊಳೆದು
ಮೈಲಿಗೆಯನ್ನು ಹಿಡಿದು ಹಿಂಡುತ್ತಾನೆ. 'ವೈರಾಗ್ಯದ' ಬಿಸಿಲಲ್ಲಿ 'ಆಶೆ' ಎಂ
ಹಾಸಿ, ಒಣಗಿಸಿ ಹಸನಾಗಿ ಥಳಿಗಿ ಕೂಡಿಸಿ 'ಭಾಷೆ' ಕೊಡುವನು ತಾ ಘ

'ಶುದ್ಧ ಮಾಡಿದ ಮನ ನಿಶ್ಚಯ
ಸಿದ್ಧ ಸಾಕ್ಷಾತ್ಕಾರ ನಮ್ಮಯ್ಯ
ಸುದ್ಬೋದಿಸಿದ ಜ್ಞಾನೋದಯ
ಸದ್ಗೈಸಿದ ಮಹಿಪತಿಯ'

ಇಂಗೆ ಜ್ಞಾನಗುರು ಶುದ್ಧ ಮಡಿವಾಳನಿಂದ ಬಟ್ಟೆಗಳನ್ನು ಪಡೆದು ಸ್ನಾನಮಾಡಬೇಕು

'ಇದೇ ನೋಡಿರೋ ಸುಸ್ನಾನ
ಸದ್ಬೋಧಲಿಹುದು ಮನಾ' (ಕೀ-೪೯

ಜ್ಞಾನವೆಂಬ ಭಾಗೀರಥಿಯಲ್ಲಿ ಮನ ಮೈಲಿಗೆಯನ್ನು ನಾದಿ, ನಾನ
ಮನವೆಂಬುದನ್ನು ಓವಿ ಅನುದಿನ ಆದರಲ್ಲಿ ಮುಳುಗಹಾಕಬೇಕು.

'ನಿತ್ಯ ಮಹಿಪತಿಗಿದೆ ಸುಸ್ನಾನ, ನಿತ್ಯ ಸದ್ಗುರು ನಿಜಧ್ಯಾನ
ಉತ್ತಮೋತ್ತಮವಿದೆ ಸಾಧನ ಹಿತದೋರುತಿದೆ ನಿಧಾನ'

ಇಂಥ ಸ್ನಾನ ಮಾಡಿದ ಮೇಲೆ ಇದಕ್ಕೆ ಸರಿಮಿಗಿಲಾದ 'ಮಡಿ'ಯನ್ನು ಮಾಡಬೇಕು.

'ಅರಹು ಎಂಬುದೆ ಮಡಿ ಉಡಿ
ಮರಹು ಮೈಲಿಗೆ ಮುಟ್ಟಬ್ಯಾಡಿ
ಕಾಮ ಕ್ರೋಧದ ಸ್ಪರ್ಶವ ಬ್ಯಾಡಿ
ನೇಮ ನಿತ್ಯ ಇದನೆ ಮಾಡಿ' (ಕೀ-೫೦

ಈ ಮಡಿಯಲ್ಲಿ ಚಂಚಲೆಂಬ ಆಚಮನಮಾಡಿ, ಸಂಚಿತ ಪ್ರಾಲಬ್ಧ ಕ್ರಿಯೇ
ಅರ್ಘ್ಯದಾನ ಕೊಟ್ಟು ಸಂಧ್ಯಾವಂದನ ಮಾಡಬೇಕು (ಕೀ- ೪೭) ಸಂಧ್ಯಾವಂದನೇ
ಅನಂತರ ದೇವರ ಪೂಜೆಯನ್ನು 'ವ್ಯೋಮಾಕಾರಾದ ಮನೆಯಲ್ಲಿ' ಮೂರ್ತಿ ಎಂ
ಅಮೂರ್ತಿ (ಆತ್ಮ)ಯನ್ನು ತತ್ವಜ್ಞಾನದ ಮಂಟಪದಲ್ಲಿಟ್ಟು ನಿತ್ಯ, ನಿತ್ಯ ನಿತ್ಯಾರ್ಥ
ಗುರುದೀಪವನ್ನು ಹಚ್ಚಿ 'ಸ್ನಾನುಭವದ ಸ್ವಾದೋದಕ, ಜ್ಞಾನ ಭಾಗೀರಥಿ ಅಭಿಷೇ
ಮೌನ, ಮೌನ್ಯವಸ್ತ್ರಾವೋಲಿಕಾ ಧ್ಯಾನವೆಂಬುದೇ ಸೇವೆ ಅನಕಾ'. ಬುದ್ಧಿ ಮನ
ಗಂಧಾಕ್ಷತೆಯನ್ನು ಹಚ್ಚಿ ಸ್ವರೂಪ ವಾಸನೆಗಳ ಧೂಪ ದೀಪಗಳನ್ನು ಬೆ
ಸದ್ಭಾವನೆಯ ನೈವೇದ್ಯವನ್ನು ಇಡಬೇಕು. ಅನಂತರ ಫಲತಾಂಬೂಲವೇ ಸದ್ಭ
ಮೂಲಭಿಭಾವನೆ ಮಂಗಳಾರ್ತಿ ಇದು ಬಾಲಕ ಮಹಿಪತಿಯ ನಿಜ ಪೂಜೆಯ ಸ್ಥಿ
ಇದುವೆ ಕುಲಕೋಟಿಗಳನ್ನು ಉದ್ಧರಿಸುವ ಗತಿ' (ಕೀ- ೫೫)

ಇಂಥ ಪೂಜೆಯ ಅನಂತರ ದೈವಕ್ಕೆ 'ಮನವನೆ ಬತ್ತಿ ತನುವೆ ಆರತಿ ನೇ
ತುಪ್ಪ ಮಾಡಿ ಜ್ಞಾನದೀಪ'ದ ಆರತಿಯನ್ನು ಬೆಳಗಬೇಕು (ಕೀ- ೨೬೨) ಅನಂತ
ನಮಸ್ಕಾರ ಪ್ರದಕ್ಷಿಣೆಗಳು,

'ಬಿಡದಿಹುದೆ ಸತ್ಸಂಗಾ। ನೋಡಿ ಇದವೇ ಶಿರಸಾಷ್ಟಾಂಗಾ।
ಕಡದ್ಹೋಯಿತು ಭವ ದುಸ್ಸಂಗಾ। ದೃಢ ಮಾಡಿ ಅಂತರಂಗಾ।
ನಮ್ರತಲಿಹುದೆ ನಮನಾ। ಪ್ರೇಮಭಾವೆಂಬುದು ಪ್ರದಕ್ಷಿಣಾ।' (ಕೀ-೧

'ಭಕ್ತಿ ವೈರಾಗ್ಯಗಳ ಒಲೆಹೂಡಿ ನಿತ್ಯ ಜ್ಞಾನಾಗ್ನಿಯ ಒಡಗೂಡಿ,
ಪಂಚಪಾತ್ರೆಯಲ್ಲಿ ಸತ್ಯ ಸಂಕಲ್ಪದ ಅಡುಗೆಯನ್ನು ಮಾಡಿದಾಗ ಸಕಲ ಸಾಮಗ್ರಿ
'ಸಂಚಿತ' ಪಕ್ವ ಆಯಿತು.(ಕೀ-೪೮) ಅದನ್ನು

'ಪ್ರೇಮ ತಟ್ಟಿ ಬಟ್ಟಲು ತಳಗಿ ಕಾಮ ಕ್ರೋಧ ಸುಟ್ಟು ಬೆಳಗಿ।
ಸಾಮಸಾರ ಘೃತದೊಳು ಮುಳುಗಿ ನೇಮದಿಂದ ಬಡಸುವಾದಡಗಿ।
ಪಂಚಭಕ್ಷ್ಯ ಪರಮನ್ನಾ ಮುಂಚೆ ಬಡಸುವದು ಗುರುವಚನ।
ಮುಂಚಿದೋರಿತು ಮಿಷ್ಟಾನ್ನ ಸಂಚಿತ ಪುಣ್ಯ ಸಾಧನೆ।
ತತ್ವಸಾರದೊಂದೇ ತುತ್ತು ಅತಿ ಹರುಷಗೊಂಡಿತು।
ನಿತ್ಯತೃಪ್ತ ಹೊಂದಿತು ಹಿತ ಮಹಿಪತಿಗಾಯಿತು।

ಹೀಗೆ ಊಟಮಾಡಿದ ಮೇಲೆ 'ವಿವೇಕ ಎಂಬ ಉದಕದಿಂದ ಕೈ ತೊಳೆದು 'ಭವದ' ಎಂಜಲನ್ನು ಕಳೆದರು'. ಇದು ಮಹಿಪ ದಿನಚರಿಯಾಗಿತ್ತು. ಇದನ್ನು ಇತರರೂ ಅನುಕರಿಸುವ ಅಪೇಕ್ಷೆ ಅವ ಅದಕ್ಕೆಂದೇ ಅವರು ಹೇಳುತ್ತಿದ್ದರು.

'ಒಳ್ಳೊಳ್ಳೆವರು ಬಂದು ಕೇಳಿರೋ ನೀವಿನ್ನು।
ತಿಳಿದುಕೊಳ್ಳಿ ಇದಕೆ ಬೀಳುವದಿಲ್ಲ ಹಣಹೊನ್ನು।
ಉಳ್ಳಬುದ್ಧಿಯಿಂದ ನೀವು ತಿಳಿದು ನೋಡಿ ಕಣ್ಣು।
ಕೊಳ್ಳಲರಿಯದವನ ಬಾಯಾಗಬೀಳೂದು ಮಣ್ಣು।

ತಾನು ಯಾರು? ಏನು? ಎಂದು ತಿಳಿದುಕೊಳ್ಳಬೇಕು ತಿಳಿದುಕೊಂಡಮೇಲೆ ತಿಳಿಯದ ಹಾಗೆ ಇರಬೇಕು ಎನ್ನುತ್ತಾರೆ ರಾಯ

'ಅರ್ತರಿಯದ್ಹಾಂಗೆ ಇರಬೇಕು ಮರ್ತದೊಳಗೆ।
ಬಲ್ಲೆನೆಂಬ ಬಡಿವಾರ ಸಲ್ಲದು ತಾ ಅಹಂಕಾರ।
ಬಲು ಸೂಕ್ಷ್ಮ ಗುರುಪಾರಾಷಾರ ತಿಳಿಯಲು ವಿಚಾರ।
ನೆಲೆಯುಗೊಳಬೇಕು ತಿಳುವಂತೆ ಎಲಿಮರಿ ಕಾಯಂತೆ।

ಪಾರಮಾರ್ಥಿಕ ವಿಚಾರವು ಬಲು ಸೂಕ್ಷ್ಮವಾಗಿದ್ದರಿಂದ ಸುಜ್ಞಾನಿ ಅರಿಯದ ಹಾಗೆ ಈ ಮರ್ತದಲ್ಲಿ ಇರಬೇಕು. ಎಲೆಮರೆಯ ಕಾಯಿ ಗುರುತನ್ನು ತಿಳಿಯಗೊಡದೆ ಹಲವು ಮಾತಾಡದೆ, ಭಾವದೋರದೆ ಸ ನಿಜದಲ್ಲಿ ಬೆರೆತಿರಬೇಕು. ಡಂಭದ ಗುರುಗಳ ಕುರಿತು ಕೂಡ ಎಚ್ಚರಿ ಹೇಳುತ್ತಾರೆ.

'ಗುರುಗಳುಂಟು ಮನೆ ಮನೆ ಬಹಳ
ಬ್ಯಾರೆ ಬ್ಯಾರೆ ಮಾಡುತ ತಮ್ಮ ಮ್ಯಾಳ।
ದೋರುತಿಹರು ಮೋಹಿಸುವ ವಾಗ್ಜಾಲ।
ಸರಿ ತಮಗಾರಿಲ್ಲೆಂದೆನುತಲಾ ತೋಳ।

[illegible] ಮನೆಮನೆ, ಊರೂ

ಗುರುಗಳು ಸವಿಮಾತುಗಳಿಂದ ತಮ್ಮತ್ತ ಎಳೆದು ಗುಂಪುಗುಳಿ ಮ
ಕಣ್ಣೆದುರಿಗೆ ಕಾಣುತ್ತೇವೆ!

'ತಾನು ಯಾರು ತನವು ಯಾರು ತಿಳಿದು ನೋಡಿ' ಎಂಬ ಒಂಭತ
ಕೀರ್ತನೆಯಲ್ಲಿ

'ಜಾತಿಯ ಕುಲಗಳ ಭೇದವ ತಿಳಿದು।
ಯಾತನೆ ದೇಹದ ಸಂಗವನಳಿದು।
ಮಾತಿನ ಮೂಲವ ತಿಳಿದಾತ ಶರಣನು।

ಎಂದು ಹೇಳುತ್ತಾರೆ. 'ಕಾಯದೊಳಿಹ ಕಳವಳಗಳೆದು, ಮಾಯ ಮೋಹ
ತೊಳೆದು, ದೇಹ ವಿದೇಹವಾಗಬೇಕು. ಭ್ರಾಂತಿಯ ಅಭಾವ ಕಡಿದು ನಿ
ಮಾರ್ಗ ಹಿಡಿದು ಜ್ಯೋತಿ ಸ್ವರೂಪವನ್ನು ಕಾಣಬೇಕು. ಭಾವಭಕ್ತಿಯ
ತಿಳಿದು ಹ್ಯಾವ ಹೆಮ್ಮೆಯ ಮೂಲವನ್ನು ಅಳಿದು, ಜೀವ ಶಿವನನ್ನು ತಿ
ಸೋಹ್ಯ ಸೊನ್ನೆಯ ಸೂತ್ರವನ್ನು ಹಿಡಿದು ಲಯಲಕ್ಷ್ಯಿಯ ಮುದ್ರೆ
ಧ್ಯೇಯ ಧ್ಯಾನವನ್ನು ತಿಳಿಯಬೇಕು. ನಾದ ಬಿಂದು ಕಳೆಯನ್ನು ಮ
ಉನ್ಮನ ಮುದ್ರೆಯ ಮುಟ್ಟಿ ಆದಿ ತತ್ವದ ಗತಿಯನ್ನು ತಿಳಿಯಬೇ
ದೃಢದಿಂದ ಅರಹುತನಾಗಿ ಮಧ್ಯ ಮುಪ್ಪುರದಲ್ಲಿ ಸ್ಥಿರನಾಗಿ ಉ
ಗತಿಯನ್ನು ಬೆರೆಯಬೇಕು. ಹೊರ ಒಳಗೆಲ್ಲ ಮಹಿಪತಿಯನ್ನು ಕಂಡು
ಸದ್ಗತಿಯನ್ನು ಪಡೆದರೆ ಆತ ಶರಣನೆನ್ನಿಸುತ್ತಾನೆ. ಇದನ
ಮಾಡಿಕೊಳ್ಳಲಾರದೆ 'ಬರಿದೆ ಭ್ರಮೆಯ ಗೊಂಡ್ಯೋ ಮರುಳ ಮ
ಎಂದು ಎಚ್ಚರಿಸುತ್ತಾರೆ. ಈ ಅನಿತ್ಯ, ಅಸ್ಥಿರ ಬದುಕಿನ ಕುರಿತು
ಹೇಳಿದ್ದಾರೆ. 'ಎರವಿನ ಮನೆಯಲ್ಲಿ ಮರೆವಿನ ಮರೆಯಲ್ಲಿ ಗರವು ಹಿಡಿದು
ತಿಳಿಯಲಿಲ್ಲ. ಭ್ರಾಂತಿ ಹರಿಯಲಿಲ್ಲ ಬಿದ್ದು ಸೊರಗಿ ದಣಿದ, ಹೀನ ಯೆ
ಮರಳುಗೊಂಡು ಕಾನನದಲ್ಲಿ ಹೊಕ್ಕು ಜ್ಞಾನ ಶೂನ್ಯದಲ್ಲಿ ಹಲವಾರು ಜ

'ನಾನು ನನ್ನದು ಎಂದು ಏನು ಗಳಿಸಿಕೊಂಡ್ಯೋ।
ಸ್ವಾನುಭವದ ಸುಖ ಅನುಭವಿಸದೆ ಹೋಗಿ।
ಸ್ವಾನ ಸೂಕರ ಯೋನಿ ಮುಖ ಸೋಸಿದೆಲ್ಲ।
ಹೊನ್ನು ಹೆಣ್ಣಿನ ಸವಿಯ ಬಣ್ಣಿಸಿ ನೀ ಬಯಸಿದೆಲ್ಲ।
ಮಣ್ಣೇ ಮಾಣಿಕವೆಂದು ದಣ್ಣನೆ ದಣುವರಿ।
ಕಣ್ಣಗೆಟ್ಟರಬ್ಯಾಡೋ ತನ್ನೊಳರಿಯದೆ।

ಮುಕ್ತಿನಂಥ ಜನ್ಮವನ್ನು ವ್ಯರ್ಥಕಳೆಯಲಿ ಬ್ಯಾಡ ತಿಳಿದು ನೋ
ಪಾದವನ್ನು ಕೂಡಿ ಮಹಿಪತಿಯನ್ನು ಪೂರ್ಣ ಸಾರ್ಥಕವನ್ನಾಗಿ ಮಾ
ಹೇಳುತ್ತಾರೆ.

'ಏನು ಗಳಿಸಿದ್ಯೋ ಪ್ರಾಣಿ। ಜ್ಞಾನಕ ಮಾಡಿ ನೀ ಹಾನಿ' ಎಂಬ ಕಿ

ತ್ವಜ್ಞಾನಿಯನ್ನು ಕೇಳುತ್ತಾರೆ.

'ಶಬ್ದಜ್ಞಾನದ ಅಂಗಡಿ ನೀಹಾಕಿ। ಉಬ್ಬಿಸಿದೊ ಬಲು ಪಾಕಿ।
ಲಬ್ಧಾಲಬ್ಧಿಯು ತಿಳಿಯದೆ ಡೊಂಕಿ। ಸ್ವಬ್ಧನಾದ್ಯೋ ವಿಷಸೋಂಕಿ।
ವಿದ್ಯಾವ್ಯುತ್ಪತ್ತಿ ತೋರಿ ನೀ ಬಹಳ। ಸದ್ಯ ಮಾಡಿದ್ಯೋ ತಾಳಮೇಳ।
ಸಿದ್ಧಾಂತನುಭವ ನೀ - ಮಾಡಿ ಹಾಳ। ಬಿದ್ಯೋ ಬಲ್ಲತನದ ಕೋಳ।        (ಕೀ-೧೧

ಳಿಸುವುದು ಏನೆಂದು ತಿಳಿಯದೆ ಬರಿ ಜ್ಞಾನದ ಹಿಂದೆ ಓಡಿದರೆ, ಬಾಳಿ, ಬದು
ನಡೆವುದಾದರೂ ಏನು? ಮಹಿಪತಿ ಗುರುವಿನ ಜ್ಞಾನ ಬೆಳಕು ಬೀರುತ್ತದೆ. ಅದನ
ತಿಳಿದುಕೊಳ್ಳಬೇಕು ಎಂದು ಹೇಳುತ್ತಾರೆ.

ಮಾನವನ ನಡೆ ನುಡಿಗಳಿಗೆ ಹರಿದಾಸರು ತುಂಬ ಮಹತ್ವವನ್ನು ಕೊಡುತ್ತಾ
ಅದು ಸರಿಯಾಗಿರಲು ಸತ್ಸಂಗದ ಅವಶ್ಯಕತೆಯಿದೆ ಎಂದು ಒತ್ತಿ ಹೇಳುತ್ತಾ
ಕೇಡಿಗರ ಸಂಗದಿಂದ ದೂರವಿದ್ದು ಒಳ್ಳೆವರ ಸಹವಾಸದಲ್ಲಿ ಇರಬೇಕೆಂಬು
ರಾಯರ ಮತವಾಗಿದೆ. 'ಮಾಡಬಾರದು ನೋಡಿ ಕೇಡಿಗರ ಸಂಗ। ಬೇಡಿ ಕಾ
ಬಾಹುದಭಿಮಾನ ಭಂಗ।' ಎಂಬ ಒಂದು ಕೃತಿಯಲ್ಲಿ (ಕೀ-೪೬೩) ಕೇಡಿ
ಸಂಗವನ್ನು ಮಾಡುವುದರಿಂದ ತನ್ನ ಮರ್ಯಾದೆಗೆ ಭಂಗ ಬರುತ್ತದೆ. ದುಷ್ಟಜ
ಅಂತರಂಗವನ್ನು ಹೊಕ್ಕು ಕಲಹವನ್ನು ಬೆಳೆಸುತ್ತಾರೆ. ಗುಟ್ಟಿನ ಮಾತನ್ನು ತು
ತಂದು ಬಯಲು ಮಾಡಿ, ದೃಢವಾದ ಸ್ನೇಹ ಸಂಬಂಧವನ್ನು ಕಡಿದೊಗೆವರು. ಬೇ
ಮಾತಿನಿಂದ ಎಲ್ಲರನ್ನು ಮೋಹಿಸಿ 'ಅಲ್ಲಹುದು' ಮಾಡಿ, ಸಲ್ಲದವರ ಕೈ ಹಿ
ಇಲ್ಲದ್ದನ್ನು ಸ್ಥಾಪಿಸಿ ಅವರು ಬಲ್ಲಿದರನ್ನು ಬಲೆಯಲ್ಲೆಸೆವರು ಆದ್ದರಿಂದ; 'ಏನಾ
ಕೊಟ್ಟು ಹೀನ ಮನುಜರ ಸಂಗ। ಮನ್ನಣೆಯಲ್ಲಿದ್ದು ತಾಂ ತ್ಯಜಿಸಿ ಬ್ಯಾಗ।।
ಮಹಿಪತಿ ಪ್ರಾಣದೊಡೆಯ ಶ್ರೀನಿಧಿ ಚರಣ। ನೆನೆವರ ನೆರಳಿದ್ದು ಸುಖಿಸು
ಲೇಸು' ಎಂದು ಹೇಳುತ್ತಾರೆ.

ಕೇಡಿಗರ ಸಂಗದಿಂದ ಹೊರಬರುವ ಮನಸ್ಸು ಮಾಡಬೇಕು ಅದಕ್ಕೆ
ಬಲಿಯಬೇಕು. ಮನ ದೃಢವಾಗದಿದ್ದರೆ ಏನನ್ನೂ ಸಾಧಿಸಲು ಸಾಧ್ಯ
ಆದ್ದರಿಂದಲೇ ಹರಿದಾಸರೆಲ್ಲ ಈ ಚಂಚಲ ಮನಸ್ಸಿನ ಕುರಿತು ಅನೇಕ ಬಗೆ
ಹೇಳಿ ಎಚ್ಚರಿಸಿದ್ದಾರೆ.

'ಮನ ಬಲಿಯದನಕ ಅನುಕೂಲವಾಗದನುಭವ' ಎನ್ನುತ್ತಾರೆ. ಆಧ್ಯಾ
ಅನುಭವ ಪಡೆಯಲು ಅಡ್ಡಬರುವ ವಿಷಯಗಳು ಹಲವಾರು.

'ಹೆಣ್ಣು ಹೊನ್ನದಾಶೆ ಹಚ್ಚ್ಯಾದೆ ಘನತನಗರಸದೆ।
ಹುಚ್ಚಮಾಡಿ ಬಿಟ್ಟದೆ ಎಚ್ಚರ ಎಡಿಯ ಗೊಡದೆ।
ಕಚ್ಚಿ ವಿಷಯಕೆ ಬಿದ್ದದೆ ಬೆಚ್ಚಿ ಬೆದರದೆ।।        (ಕೀ-೯

ಆವಿಷಗಳನ್ನು ದೂರಮಾಡಿ ಮನಸ್ಸನ್ನು ಸ್ಥಿರಗೊಳಿಸಬೇಕು. ಜೊತೆಗೆ ಖೂನ'ವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ವ್ಯರ್ಥ, ಏನು ಓದಿ ಏನು ಂದು ಕೇಳುತ್ತಾರೆ.

ನಿಗಮ ಓದಿದರೇನು ಆಗಮ ಹೇಳಿದರೇನು।
ಗೆ ಬಗೆ ವೇಷ ಜಗದೊಳು ದೋರಿದರೇನು।
ಮಠವು ಮಾಡಿದರೇನು ಅಡವಿ ಸಾರಿದರೇನು।
ಬಹ್ಯ ಸೇರಿದರೇನು ಬಾಹ್ಯ ಮೆರೆದರೇನು।
ನೇಹ ದಂಡಿಸಿ ಆಹಾರವ ತೊರೆದರೇನು।
ಮನಕೆ ಮೀರಿಹ ಸ್ಥಾನ ಘನಸುಖದಧಿಷ್ಠಾನ।
ದೀನ ಮಹಿಪತಿ ನೀ ಸಾಧಿಸೋ ಗುರಜ್ಞಾನ।। (ಕೀ-೪೫೨)

ಂದ ಸತ್ಸಂಗ ಇರಬೇಕು. ಸತ್ಯದ ನುಡಿ ಹಿಡಿಯಬೇಕು ಎಂದರು. ಇಂಥ ಇನ್ನೂ ರು ಕೃತಿಗಳಲ್ಲಿ ರಾಯರು ಆತ್ಮೋನ್ನತಿಯ ಮಾರ್ಗವನ್ನು ತೋರಿಸಿದ್ದಾರೆ. ಸನ್ಮಾರ್ಗವನ್ನು ಹಿಡಿದು ಮನುಷ್ಯ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಲು ಳಿಯಿಂದ ಹೇಳಿದ್ದಾರೆ. 'ಒಂದು ಪಥವ ಹೊಂದಲರಿಯರು ಈ ಮನುಜರು' ೧೨೭) ಎಂದು ಕನಿಕರಪಟ್ಟಿದ್ದಾರೆ. 'ದ್ವೈತ-ಅದ್ವೈತ ಎಂದು ದಾಡದಿರು' (ಕೀ-೩೨೨) ಎಂದು ಕಿವಿ ಮಾತು ಹೇಳಿದ್ದಾರೆ. ದ್ವೈತ ನನು ಆತ ಪರಮ ವೈಷ್ಣವನಲ್ಲ ಆದರಂತೆ ಅದ್ವೈತನೆಂದು ಹೇಳಿಕೊಳ್ಳುವವನು ರ್ನನೂ ಅಲ್ಲ. ಸ್ಮಾರ್ತ ವೈಷ್ಣವ ಮತಗಳನ್ನು ಗುರುಗಳು ಬಲ್ಲರು ಅದನ್ನು ದೆ ಸ್ಥಾಪಿಸಿ ಹೊರಡುವುದು ಸಾಮಾನ್ಯ ಮನುಷ್ಯರಿಗಲ್ಲ. ಮೂರುವರೆ ದ ದೇಹದ ಶುದ್ಧಿ ಇಲ್ಲದೆ ಯಾಕೆ ತರ್ಕಸ್ಯಾಡಿಸುವುದು, ದ್ವೈತ-ಅದ್ವೈತದ ಬೇರೆಯೇ ಇದೆ. ಅದರ 'ಭಾನಗಡಿ'ಗೆ ಬೀಳದೆ. ಚಿತ್ತಶುದ್ಧನಾಗಿ ಪತಿಯನ್ನು ಮುಟ್ಟುವದು ಲೇಸು ಎಂದು ಹೇಳುವಲ್ಲಿ ಶುಷ್ಕ ಚರ್ಚೆಗಳಿಗೆ ಳ ಹಾಡಿದ್ದಾರೆ.

★ ★ ★

ಮು ಅನುಭಾವಿಗಳು, ಸಾಧಕರು, ಸಿದ್ಧರು, ಯೋಗಿಗಳು ತಮ್ಮ ಬದುಕಿನಲ್ಲಿ
ರ್ಥಕತೆಯನ್ನು ಪಡೆದವರು. ಅವರು ಕವಿಗಳಾಗಬೇಕೆಂಬ ಆಶೆಯಿಂದ ಕೃತಿಗಳನ್ನು
ಚಿದವರಲ್ಲ. ಸಾಹಿತಿಗೆ ಆವಶ್ಯಕವಾದ ರೀತಿಯಲ್ಲಿ ಅವರು ಅಧ್ಯಯನವನ್ನು
ಡಿದವರಲ್ಲವೆಂದೇ ಹೇಳಬಹುದು. ಕಣ್ಣೆದುರು ಲೌಕಿಕ ಕಾವ್ಯಗಳನ್ನು ಮಾದರಿ
ನ್ನಾಗಿ ಇಟ್ಟುಕೊಂಡವರೂ ಅಲ್ಲ. ಕಾವ್ಯ ಲಕ್ಷಣಗಳನ್ನೂ ಗಮನಿಸಿದವರಲ್ಲ.
ನ್ನವರು ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟವಾಗಿಯೇ ಹೇಳಿದ್ದಾರೆ.

''ಸರ್ವೋತ್ತಮನ ಸ್ತುತಿಗೆ ಸರಿಬಿಸದಕ್ಷರದಣಕ್ಕಾಕೆ
ಯತಿ ಛಲ//೨೫// ಗಣ ಪ್ರಾಸವ್ಯಾಕೆ ಸ್ತುತಿ ಸ್ತವನ ಕೊಂಡಾಡಲಿಕ್ಕೆ
ಹಿತದೋರದು ಮಿತಿ ಮಾಡಲಿಕ್ಕೆ ಅತಿ ಶೋಧಿಸಲಿಕ್ಕೆ
ಮುಕ್ತಿಗೆ ಬದ್ಧವೆಂದೆಂದೂ//೨೬// ಉತ್ತಮರುಪೇಕ್ಷಿಸರೆಂದು
ನೆತ್ತಿಲಿಟ್ಟುಕೊಂಬರು ಬಂದು ಅತಿ ಪ್ರೀತಿಲೆ ನಿಂದು''

(ಹಸ್ತ ಪ್ರತಿ ಠ ೪೨೮)

ದು ಹೇಳುತ್ತಾರೆ. ಇಲ್ಲಿ ಬಸವಣ್ಣನವರ 'ತಾಳಮಾನ ಸರಸವನರಿಯೆ, ಓಜೆ
ಶಾವಣೆಯ ಲೆಕ್ಕವನರಿಯೆ। ಅಮೃತ ಗಣ ದೇವಗಣವನರಿಯೆ ಕೂಡಲ ಸಂಗವ
ವಾ। ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ವಚನ ನೆನಪಾಗದ
ರದು. ಅನುಭಾವಿಗಳ ದಾರಿಯಲ್ಲಿಯ ವನಶ್ರೀಯಂತೆ ಅವರ ಕಾವ್ಯಸಂಪತ್ತು
ಹಿಪತಿರಾಯರ ಕೃತಿಗಳನ್ನು ಅವಲೋಕಿಸಿದಾಗ ಅವುಗಳಿಗೆ ಮೂಲ ಪ್ರೇರಣ
ವರ ಅನುಭವ ಹಾಗು ಸಾಧನೆಯೇ ಆಗಿವೆ. ಒಂದೊಂದು ಸಾಧನೆ-ಸಿದ್ಧಿಯ
ನಂತರ ಪಡೆದ ಅಮೃತ ಶಾಂತಿಯನ್ನು ಅವರು ತಮ್ಮ ಕೃತಿಗಳಲ್ಲಿ ಪ್ರಕಟಿಸಿದ್ದಾರೆ
ಡಬಳ್ಳಿಗಳಿಗೆ ಚಿಗುರು, ಹೂವು, ಕಾಯಿ, ಹಣ್ಣುಗಳಾಗುವಷ್ಟು ಸ್ವಾಭಾವಿಕವಾ
ಃ ಕೃತಿಗಳ ಸೃಷ್ಟಿಯಿದೆ.' ಹೇಳಬೇಕೆಂಬ ಉತ್ಕಟ ಆಕಾಂಕ್ಷೆಯಲ್ಲಿ ಕಾವ್ಯ ಹೊರಹ
ಮ್ಮುತ್ತದೆ. ಅಲ್ಲಿ ಯತಿ, ಗಣ ಪ್ರಾಸಗಳ ಅಭ್ಯಾಸ ಇಲ್ಲದೆಯೇ ಕೆಲವೊಮ
ವುಗಳು ಬಂದಿರುತ್ತವೆ. ಹೆಚ್ಚು ಕಡಿಮೆ ಎಲ್ಲ ಹರಿದಾಸರ, ಅನುಭಾವಿಗ
ಾಹಿತ್ಯವೂ ಹೀಗೆಯೇ ರಚಿತವಾದದ್ದೆಂದು ಹೇಳಬಹುದು.

'ಕಾವ್ಯ ಪ್ರೇಮಿಗಳಲ್ಲಿ ಬಹು ಸಂಖ್ಯಾತರ ದೃಷ್ಟಿಯಲ್ಲಿ ಭಕ್ತ ಕಾವ್ಯ ಗೌಣಕಾವ್
ಸಿಕೊಳ್ಳುತ್ತದೆ. ಇದಕ್ಕೆ ಕಾರಣವಿಲ್ಲದಿಲ್ಲ ಭಕ್ತ ಕವಿಗಳು ಮತದ ವಿಶೇಷ ಪ್ರ
ಮನ್ನು ಸಾಮಾನ್ಯ ಪ್ರಜ್ಞೆಯಲ್ಲಿ ಸೇರಿಸುತ್ತಾರೆ. ಆಗ ಕಾವ್ಯ ಕ್ಷೇತ್ರ ಸಂಕುಚಿತವಾ
ತ್ತದೆ. ಸಾಮಾನ್ಯ ಪ್ರಜ್ಞೆ ಮಹಾಕವಿಯ ವಿಶೇಷ ಲಕ್ಷಣ. ಒಂದೊಂದು ವೇಳೆ
ನ್ನ ಸಾಮಾನ್ಯ ಪ್ರಜ್ಞೆಯನ್ನು ಹತ್ತಿಕ್ಕುತ್ತಾನೆ. ಭಕ್ತ ಕವಿಗಳ ಕಾವ್ಯಗಳಲ್ಲಿ ಎರ
ವರ್ಗಗಳಿವೆ. ಮತ ಕಾವ್ಯ - ಅನುಭವ ಕಾವ್ಯ ಎಂದು ಅವುಗಳನ್ನು ಹೇಳಬಹು
ಮತ ಕಾವ್ಯದಲ್ಲಿ, ಕವಿ ಮತ ಪ್ರಚಾರಕನಾಗುತ್ತಾನೆ. ಇಂತಹ ಕಾವ್ಯದಲ್ಲಿ ಅಭಿನಿವ
ಾಗುತ್ತದೆ. ಆದರೆ ಸತ್ವವಿರುವದಿಲ್ಲ. ಅನುಭವ ಕಾವ್ಯವಾದರೋ ವ್ಯಕ್ತಿ ನಿರಪೇ

ರಪೇಕ್ಷ ಆಗಿರುವುದರಿಂದ ಅದು ಉತ್ತಮ ಕಾವ್ಯವಾಗುತ್ತದೆ. ಈ ಅಂಶ
ಮವಾಗಿದ್ದರೆ ಭಕ್ತ ಕವಿ ಶಕ್ತ ಕವಿಯಾಗುತ್ತಾನೆ.' ಎಂದು ಡಾ. ದಿವಾಣಜಿಯ
ಳಿದ್ದನ್ನು ಗಮನಿಸಬೇಕು.//೨೭// ಮಹಿಪತಿರಾಯರ ಕಾವ್ಯದಲ್ಲಿ ಮತ
ಇಲ್ಲವೇ ಇಲ್ಲ ಎಂದು ಹೇಳಲಾಗದು. ಆದರೆ ಅನುಭಾವ ಕಾವ್ಯಕ್ಕೆ ಹೆಚ್ಚು
ಇಂಥ ಸಾಹಿತ್ಯ ನಿರ್ಮಾಣದ ಕುರಿತು ಮಹಾಯೋಗಿ ಶ್ರೀ ಅರವಿಂದರು
ಹೇಳುತ್ತ, 'ಆಧ್ಯಾತ್ಮ ಸಾಹಿತ್ಯವು ೧)ಸಂಕ್ಷಿಪ್ತವಾಗಿರುತ್ತದೆ. (Precise)
ು ನೇರವಾದ ಅನುಭವವಾಗಿರುತ್ತದೆ. ೩) ಅದು ಸುಲಭವಾಗಿ ಮುಖೋದ್ಗ
ುತ್ತದೆ. ೪) ಅನುಭವಗಳು ಸಂಕೀರ್ಣವಾಗುತ್ತ ಹೋದಂತೆ ಅಭಿವ್ಯಕ್ತಿಯೂ
ರ್ಣವಾಗುತ್ತದೆ. ಅಭಿವ್ಯಕ್ತಿಯ ಗುಣಮಟ್ಟದ ಮೇಲಿಂದ ಕವಿಯ ಪ್ರಜ್ಞೆಯ
ುನ್ನು ಊಹಿಸಬಹುದು' ಎಂದು ಹೇಳುತ್ತಾರೆ.//೨೮// ಈ ದೃಷ್ಟಿಯಿಂದ
ಉದಾಹರಣೆಗಳನ್ನು ನೋಡಬಹುದು.

ಮೂಡುವನು ರವಿ ಮೂಡುವನು
ಕ್ತಲೊಡನೆ ಜಗಳಾಡುವನು'
ಎಂದು ಸಾಮಾನ್ಯ ಅನುಭವದ ಅಭಿವ್ಯಕ್ತಿ
ುಂತಿ ರಸವೆ ಪ್ರೀತಿಯಿಂದ
ೃದೋರಿತಣ್ಣ, ಇದು ಬರಿಬೆಳಗಲ್ಲೋ ಅಣ್ಣ'
ಮೊದಲಿನ ಅನುಭವಕ್ಕಿಂತ ಎತ್ತರವಾದ ಅನುಭವದ ಅಭಿವ್ಯಕ್ತಿಯನ್ನು
ಸುದು. ಇನ್ನೂ ಎತ್ತರದ ಅನುಭವದ ಉದಾಹರಣೆಗೆ
ಬಂಗಾರ ನೀರ ಕಡಲಾಚೆಗೀಚೆಗಿದೆ, ನೀಲ ನೀಲ ತೀರ
ದು ನಮ್ಮ ಊರು ಅದು ನಿಮ್ಮ ಊರು ತಂತಮ್ಮ ಊರೋಧೀರ'

ಮತ್ತು

ದೇವಲೀಲೆಯೋ ಕಾಣೆ ಕರ್ಮಜಾಲವೋ ಕಾಣೆ।
ದು ನಮ್ಮ ಬುದ್ಧಿಯಾಚೆಗಿನ ಮಾತು।
ಯಾವುದೇನೆ ಇರಲಿ ಪ್ರೀತಿಯಂಥ ಮಾತು।
ವದಲ್ಲಿ ಕಾಣೆ ಮನಗಂಡ ಮಾತು।'
ು ಪ್ರತಿಯೊಂದು ಪದ್ಯಗಳಲ್ಲಿಯ ಕವಿದೃಷ್ಟಿಯ ಅವಸ್ಥೆಗಳು ಬೇರೆ ಬೇರೆ
ಇರುವುದನ್ನು ಗುರುತಿಸಬಹುದು.//೨೯//

ವ್ಯ ಸ್ಫೂರ್ತಿ ಹೃದಯ ಮನಸ್ಸುಗಳಿಗೆ ಸಂಬಂಧಿಸಿದ್ದು. ಆಧ್ಯಾತ್ಮಿಕ ಅನುಭವ
ುನಸ್ಸಿನ, ಮೇಲಿನ ಹಂತದಿಂದ ಬರತಕ್ಕವುಗಳು. ಆದ್ದರಿಂದ ಅದನ್ನು ಶ್ರೀ
ದರು 'Over head poetry' ಎಂದು ಕರೆದಿದ್ದಾರೆ.//೩೦// ಈ ರೀತಿಯ
ಮಟ್ಟದ ಪ್ರಜ್ಞೆಯಿಂದ ಮೂಡಿದ ಕಾವ್ಯವು ಬೇರೆ ರೀತಿಯಲ್ಲಿ ಮಂತ್ರವೂ
ತ್ತದೆ.
ೂರ್ಯನಿಲ್ಲದ ಸುಪ್ರಕಾಶ ತುಂಬೇದ ಹೇಳಲೇನ।

ದ್ರನಿಲ್ಲದ ಬೆಳದಿಂಗಳು ಬಿದ್ದದ ಬಲು ಬಹಳ
ದ ಕೊನೆಯಲ್ಲಿದ್ದ ಘನ ಸುಖವ ನೋಡಿರೋ।'

ಮಹಿಪತಿರಾಯರ ಸುಪ್ರಸಿದ್ಧ 'ಅರ್ತಿಯಾಗಿದೆ ಬನ್ನಿ' ಎಂಬ ಕೃತಿಯ ನುಡಿಗಳ ಮೊದಲ ಸಾಲುಗಳು. ಇಲ್ಲಿಯ ಉಜ್ವಲವಾದ ಪ್ರಕಾಶ, ರುವಾದ ಬೆಳದಿಂಗಳುಗಳು ಅನುಭವವಿಲ್ಲದ ಓದುಗನಿಗೆ ಅರ್ಥವಾಗದೇ ಈ ಸಾಲುಗಳು ತಮ್ಮ ಅನುರಣದಿಂದ ಒಂದು ವಿಶಿಷ್ಟ ಅನುಭವವಾಗಿ ವೆ. 'ಅನುಭವದ ಆಳ ವಿಶಾಲಗಳನ್ನು ಸೂಚಿಸಲು ಜಗದಗಲದ ಹೊರತಾದ ಗಳನ್ನು ಸೂರೆ ಮಾಡುವ ಕೃತಿ ಎಲ್ಲವನ್ನೂ ಆವರಿಸಿಬಿಡುತ್ತದೆ.' ಆಗ ಕೊನೆಯಲ್ಲಿದ್ದ ಘನ ಸುಖದ' ಅರಿವೂ ಆಗುತ್ತದೆ.

ನ್ನ ಮನದ ಕೊನೆಯ ಮೊನೆಯ ಮೇಲೆ
ಂಗವಿಲ್ಲದ ರೂಪವ ಕಂಡು ಮರುಳಾದೆನಲ್ಲ,
ತನ ಕಂಡು ಬೆರಗಾದೆನವ್ವ'

ವಚನದಲ್ಲಿಯ, ರೂಪಕಂಡು ಮರುಳಾದ ಬೆರಗಾದ ಅಲ್ಲಮ ಪ್ರಭುವಿನಂತೆ ು 'ಮನದ ಕೊನೆಯ ಮೇಲಿನ ಘನ ಸುಖದ ಅರಿವು' ನಿಚ್ಚಳವಾದಂತೆ ತ್ತದೆ. ಪ್ರತಿಯೊಂದು ಸಾಲಿಗೂ ಮತ್ತೆ ಮೂರು-ಮೂರು ಸಾಲುಗಳ ವಿವರಣೆ ವವನ್ನು ಇನ್ನಷ್ಟು ಗಟ್ಟಿ ಮಾಡುತ್ತದೆ.

'ಸೂರ್ಯನಿಲ್ಲದ ಸುಪ್ರಕಾಶ ತುಂಬೇದ ಹೇಳಲೇನ
ತೂರ್ಯಾವಸ್ಥೆಯೊಳು ಬೆರೆದು ಕೂಡಿದ ಜ್ಞಾನಿ ಬಲ್ಲಖೂನ
ಬರಿಯ ಮಾತನಾಡಿ ಹೊರಿಯ ಹೇಳುವುದಲ್ಲ ಅರವೃಸ್ಥಾನ
ಪರಿಯಾಯದಿಂದ ಪರಿಣಮಿಸಿ ನೋಡಿ ಪರಮ ಪ್ರಾಣ ॥೧॥

ಚಂದ್ರನಿಲ್ಲದ ಬೆಳದಿಂಗಳು ಬಿದ್ದದ ಬಲು ಬಹಳ
ಇಂದ್ರಾದಿಕರೆಲ್ಲ ಹರುಷವಾಗುವದು ನೋಡಿ ಸರ್ವಕಾಲ
ಸುಂದ್ರವಾದ ಸುವಸ್ತುವೊಂದದೆ ಅಚಲ
ಸಾಂದ್ರವಾದ ಸುಖ ತುಂಬಿ ತುಳುಕುತಿದೆ ಥಳಥಳ ॥೨॥

ಮನದ ಕೊನೆಯಲ್ಲಿದ್ದ ಘನಸುಖ ನೋಡಿರೊ ನೆನೆದು ಬ್ಯಾಗ
ಸ್ವಾನುಭವದಲನುಭವಿಸುವದು ಬ್ರಹ್ಮ ಭೋಗ
ನಾ ನೀನೆಂಬುವ ಮಾತು ಏನು ತಾಳುವದಲ್ಲ ರಾಜಯೋಗ
ದೀನ ಮಹಿಪತಿಗೆ ತಾನೆ ತಾನಾದ ಸದ್ಗುರುವೀಗ ॥೩॥

ಅರ್ಥಿಯಾಗಿದೆ ಬನ್ನಿ ಅರ್ತುನೋಡುವ ಗುರುಮೂರ್ತಿಯಿಂದ
ನಿತ್ಯವಾಗಿ ಪೂರ್ಣ ಬೆರ್ತುಕೂಡುವಾ ಬನ್ನಿ ಗುರ್ತದಿಂದ ॥ಧ್ರು॥

(೬೬-೧೧)

ಈ ಚಿಕ್ಕ ಪದ್ಯದಲ್ಲಿ ಮಹಿಪತಿರಾಯರು ಇಡೀ ರಾಜಯೋಗದ ರಹಸ್ಯವನ್ನು

ಬ್ಬರೆ. ರಾಜಯೋಗಕ್ಕೆ ಮನಸ್ಸೇ ತಳಹದಿ. ಜ್ಞಾನವೂ ಅವಶ್ಯ ಅದನ್ನು 'ಅರ್ತುರ್ ಾವಾ' ಎಂದಿದ್ದರೆ. ಈ ಜ್ಞಾನವನ್ನು ನೀಡುವವನು ಗುರು. ಬ್ರಹ್ಮನಲ್ಲಿ ಗಿ ಪೂರ್ಣವಾಗಿ ಬೆರೆತು ಆನಂದಿಸುವುದೇ 'ಮನ'ದ ಗುರಿ. ಈ ಅನುಭವ ಮನಸ್ಸು ಪೂರ್ಣವಾಗಿ ಸ್ವಚ್ಛವಾಗಬೇಕು. ಅದು 'ಮನದ ಕೊನೆಯಲ್ಲಿದ್ದ ಖ'ವನ್ನು ಪಡೆಯಬೇಕು. ಆಗ 'ಬ್ರಹ್ಮವಸ್ತು' ಕಾಣುತ್ತದೆ. ಅದು ದೈವೀ , ಭೌತಿಕ ಪ್ರಕಾಶವಲ್ಲ. ಆದ್ದರಿಂದ ಅದು ಸೂರ್ಯನಿಲ್ಲದ ಸುಪ್ರಕಾಶ. ತುರೀಯ ಅವಸ್ಥೆಯಲ್ಲಿದ್ದ ಜ್ಞಾನಿಯೇ ಅರಿಯ ಬಲ್ಲನು. ಇದು ವಿಪುಲ ಶಬ್ದಗಳಿಂದ ಬಣ್ಣಿಸಲು ಬರುವಂಥದ್ದಲ್ಲ. ಇದೊಂದು ಶುದ್ಧ ಪರಮಜ್ಞಾನದ ಯು. ನಮ್ಮ ಪರಮ ಪ್ರಾಣದಂತಿರುವ ಪರಮಾತ್ಮನ ಸಾಕ್ಷಾತ್, ನಿಕಟ ವದಿಂದಲೇ ತಿಳಿಯುವಂತಹ ಮಾತಿದು. ಚಂದ್ರನಿಲ್ಲದ ವಿಪುಲವಾದ, ನಿರ್ಮ ಬೆಳದಿಂಗಳು ಸರ್ವತ್ರ ವ್ಯಾಪಿಸಿದೆ. ಮತ್ತು ಇಂದ್ರಿಯಗಳೆಲ್ಲ, ಆದರ ವನ್ನು ಸದಾಕಾಲ ಪಡೆಯುತ್ತಿವೆ. ಹೃದಯದಲ್ಲಿ ಸುಂದರವಾದ ಪರಮಾತ್ಮನ ನೆಲೆಸಿದೆ. ಆದರಿಂದ ಸಾಂದ್ರವಾದ ಸುಖವು ತುಂಬಿ ತುಳುಕುತ್ತಿದೆ. ಕೃತಿಯಲ್ಲಿ ತ್ಮ ಪೂರ್ಣವಾದ ಭಾಷೆಯ ಬಳಕೆಯಿಲ್ಲ. ತೀರ ಸಾಮಾನ್ಯವಾದ, ಸಹಜವಾಗಿ ಾಗುವಂಥ ಶಬ್ದಗಳಲ್ಲಿ ರಾಜಯೋಗದ ರಹಸ್ಯವನ್ನು ಬಿಚ್ಚಿ ಇಟ್ಟಿದ್ದಾರೆ. ರ ಕಾವ್ಯ ಸಿದ್ಧಿಗೆ ಇದು ಒಂದು ಉದಾಹರಣೆ. ಗಟ್ಟಿಯಾದ ಅನುಭವವಿಲ್ಲದೆ ತಿಯ ಅಭಿವ್ಯಕ್ತಿ ಸಾಧ್ಯವಾಗುವದಿಲ್ಲ. ರಹಸ್ಯವಾದ ಆಧ್ಯಾತ್ಮದ ಅನುಭವಗ ಕಣ್ಣಿಗೆ ಕಟ್ಟುವಂತೆ ಮತ್ತು ಅದನ್ನು ಓದುವವರಿಗೂ ಕಿಂಚಿತ್ ಅನುಭವವಾಗು ಸಾಮಾನ್ಯ ಶಬ್ದಗಳಲ್ಲಿ ಅಸಾಮಾನ್ಯ ಅನುಭವಗಳನ್ನು ನಿರೂಪಿಸುವ ಕಾವ್ಯಶಕ್ತಿ ತಿರಾಯರಲ್ಲಿ ಅಗಾಧವಾಗಿತ್ತು.

'ಓಂಕಾರ ಮೊದಲಾದ ಶ್ರುತಿ ವೇದ ಘೋಷಗಳು
ಧಿಮಿಧಿಮಿಸುವ ಮಹಾಶಬ್ದಗಳು ವಾದ್ಯಗಳು
ಘೀಳೆನಿಸುವಾ ಶ್ರುತಿನಾದಗಳು ಭೇದಗಳು
ಕೇಳುವದು ಈ ದೃಶ್ಯದಲಿ॥
ಗರ್ಜಿಸುವ ಶೃಂಗ ಶಂಖನಾದದ ಧ್ವನಿಗಳು
ಭೋರಿಡುವ ಭೇರಿ ಮೃದಂಗ ವೇಣುಗಳು
ಚಿಣ ಚಿಣ ತಂತ್ರ ಮೊದಲಾದ ಸಂಕಾರಗಳು
ಕೇಳಿ ಪಾವನನಾದೆನು॥

ರು ಪಡೆದ ಅದ್ಭುತ ಅನುಭವ, ಓಂಕಾರ ಮೊದಲಾದ ಶ್ರುತಿ ವೇದ ಘೋಷ ಧಿಮಿ ಧಿಮಿಸುವ ಮಹಾಶಬ್ದ, ಘೀಳೆನಿಸುವಾ ಶ್ರುತಿ ನಾದ ಭೇದಗಳು, ಸುವ ಶೃಂಗದ ದನಿ, ಶಂಖನಾದ, ಭೋರಿಡುವ ಭೇರಿ ಮೃದಂಗಗಳು, ನಾದಗಳು ಒಂದೆ, ಎರಡೇ, ರಾಯರು ಆಲಿಸಿದ ಧ್ವನಿವೈವಿಧ್ಯವೇ ಮೂಕವಿಸ್ಮಿ ಗಿ ಮಾಡುತ್ತದೆ. ಆದರಂತೆ ಮುಂದಿನ ನುಡಿಯಲ್ಲಿ ಅವರು ಕಂಡ ತೇಜಃ ಪುಂಜ

ಪ್ರಕಾಶದ ವೈವಿಧ್ಯವನ್ನು ವಿವರಿಸುತ್ತಾರೆ.

'ಬೆರೆದು ನೋಡಲು ಅಂತರಾತ್ಮದೊಳು ಪ್ರಭೆಗಳು
ಥಳಥಳಿಸುವ ಮಹಾತೇಜಗಳು ಪುಂಜಗಳು
ಹೇಳಲಿನ್ನೇನದನು ಹೊಳವುಗಳು ಸುಳವುಗಳು
ನೋಡುವದು ಅನಿಮಿಷದಲಿ॥
ರವಿ ಶಶಿತಾರೆಗಳು ಸೂಸುತಿಹ ಕಿರಣಗಳು
ಭಾಸುತಿಹ ನಾನಾ ವರ್ಣಗಳು ಛಾಯೆಗಳು
ತುಂಬಿದ ಬೆಳಗಿನ ಕಳೆಗಳು ಕಾಂತಿಗಳು
ಕಂಡು ಬೆರಗಾದೆನಿಂದು॥

ಬೆಳಕು' ಒಂದೇ, ಆದರೆ ರಾಯರು ಕಂಡ ಬೆಳಕಿನ ವೈವಿಧ್ಯ ಅಗಾಧವಾಗಿ ಥಳಥಳಿಸುವ ಮಹಾತೇಜಗಳು, ಪುಂಜಗಳು, ಹೊಳವುಗಳು, ಸುಳವುಗಳು ಭಾಸು ನಾನಾ ವರ್ಣಗಳು, ಛಾಯೆಗಳು, ರವಿ ಶಶಿ ತಾರೆಗಳು, ಸೂಸುವ ಕಿರಣಗಳು, ಬೆಳ ಕಳೆಗಳು, ಕಾಂತಿಗಳು ಮಹಿಪತಿರಾಯರು ಕಂಡ ಬೆಳಕಿನ ವೈವಿಧ್ಯವಿದು. ಇದರೊಂ ಲಯತೆ ಕೂಡಿ ಇಂಪಾಗಿ ಈ ಪದವನ್ನು ಕೇಳಿದಾಗ ನಾದದ, ಪ್ರಕಾಶದ ಅನುಭ ಕೇಳುಗನ ಎದುರು ಜೀವಂತವಾಗಿ ನಿಲ್ಲುತ್ತದೆ. ವಾತಾವರಣವು ಅನುಭವದ ತರಂ ಂದ ತುಂಬಿ ಹೋಗುತ್ತದೆ. ಕಾವ್ಯ ಸಿದ್ಧಿಗೆ ಇದಕ್ಕಿಂತ ಹೆಚ್ಚಿನ ಉದಾಹರಣೆ ಬೇಕೆ

ಬ್ರಹ್ಮ ಸಾಕ್ಷಾತ್ಕಾರವು ಅನಿರ್ವಚನೀಯವಾದುದು. ಮಾತಿಗೆ ಮೀರಿ ಮನಸ್ಸಿನ ಆಚೆಯದು. ಅನುಭವವು ಅನುಭವವೇ ಹೊರತು ಹೇಳಲು ಬಾರದ ಂಥ ಅನುಭವಗಳನ್ನೂ ಶಬ್ದಗಳಲ್ಲಿ ಹಿಡಿದಿಟ್ಟ ಶ್ರೇಯಸ್ಸು ರಾಯರದು.

ಬುಡದೆಂತೋ ತಿಳಿಯದು ತಿಳಿಯದು
ಸ್ವಾನಂದದ ಸುಖದಾಟ (ಕೀ-೧೧

ಂಬ ಕೃತಿಯಲ್ಲಿ ಆ ದಿವ್ಯ ಅನುಭವವನ್ನು ಅಪರೂಪವಾಗಿ ವರ್ಣಿಸುತ್ತಾರೆ. ಅನಾ ನಂತವೆಂದು ಹೇಳುವ ಬ್ರಹ್ಮವಸ್ತುವನ್ನು 'ತುದಿ ಮೊದಲಿಲ್ಲದ ಸದಮಲ ಬ್ರಹ ಂದು ಕರೆದದ್ದು ಔಚಿತ್ಯ ಪೂರ್ಣವಾಗಿದೆ. 'ಮಹಿಪತಿ ವಸ್ತು ಮಯವೋ' ಎಂಬು ಅಭಿವ್ಯಕ್ತಿಯಲ್ಲಿ ಪರಮಾತ್ಮನ ಸಾಕ್ಷಾತ್ಕಾರದ ಅನುಭವವನ್ನು ಸಾಕ್ಷಾತ ಪ್ರಕಟಿಸುತ್ತದೆ. ಹೀಗೆ ಗೂಢ, ಗುಹ್ಯತರ, ರಹಸ್ಯವೆಂಬ ಅನುಭವಗಳನ್ನು ರಾಯ ಮ್ಮ ಅನೇಕ ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸುವಲ್ಲಿ ಸಾರ್ಥಕರಾಗಿದ್ದಾರೆ.

ದಾಸ ಸಾಹಿತ್ಯದಲ್ಲಿ ಈ ವರೆಗೆ ದೊರೆತ ಕೀರ್ತನೆಗಳಲ್ಲಿ ಅತಿ ಹೆಚ್ಚು ಅಂ ಳುನೂರಕ್ಕೆ ಮಿಕ್ಕಿಲ್ಲದ ಕೀರ್ತನೆಗಳು ಪುರಂದರ ದಾಸರದೆಂದು ಹೇಳಲಾಗುತ್ತ ವುಗಳಿಗೆ ಸರಿಸಮನಾದ ಕೃತಿಗಳನ್ನು ಕೊಟ್ಟ ಇನ್ನೊಬ್ಬ ಹರಿದಾಸರು ಮಹಿಪತಿ ರು. ಡಾ. ಮುಗಳಿ ಅವರು ಹೇಳುವಂತೆ "ವಿಷಯಾನುಗುಣವಾಗಿ ನಾ

ಮಹಿಮೆ, ಹರಿಗುರುಗಳ ಸ್ಮರಣೆ, ಸ್ತುತಿ, ಅಂತರಂಗ ನಿವೇದನೆ, ಕೃಷ್ಣ
ಸಮಾಜ ವಿಮರ್ಶೆ ಸಮಾಜ ಬೋಧನೆ ಹೀಗೆ ಸ್ಥೂಲವಾಗಿ ಎಲ್ಲ
ವಿಶೇಷವಾಗಿ ಪುರಂದರ ದಾಸರ, ಕೀರ್ತನೆಗಳನ್ನು ವಿಭಾಗಿಸಬಹುದು.''/,
ಆದರೆ ಈ ವಿಷಯ ವೈವಿಧ್ಯ ಮಹಿಪತಿರಾಯರ ಕೃತಿಗಳಲ್ಲಿ ದೊರೆಯ
ಯಾಕೆಂದರೆ ಅವರು ನಡೆದ ದಾರಿ ಬೇರೆಯಾಗಿದ್ದಿತು. ದೊರೆತ ೬೮೫ ಕೀರ್ತ
ಅರ್ಧದಷ್ಟು ಕೃತಿಗಳು ಅನುಭವ -ಸ್ವಾನುಭವ ಉಪದೇಶದವುಗಳಾಗಿವೆ. ಉ
ದಲ್ಲಿ ಹರಿ-ಗುರು ಮಹಿಮೆಗಳು, ಅಲ್ಲಿಯೂ ಗುರು ಮಹಿಮೆಗೆ ಹೆಚ್ಚಿನ
ವಿದೆ. ಗುರು ಮಹಿಮೆಯನ್ನು ಹೇಳುವಾಗಲೂ, ಅವರ ಅನುಗ್ರಹದಿಂದ
ಬ್ರಹ್ಮ ಸಾಕ್ಷಾತ್ಕಾರದ ಅನುಭವಕ್ಕೇ ಹೆಚ್ಚಿನ ಕೃತಿಗಳು ಮೀಸಲು. ಹೀಗಾಗಿ ಶ
ಕಂಡುಬರುವದು ಸಹಜವಾಗಿದೆ. ಆದರೆ ಅಭಿವ್ಯಕ್ತಿಯಲ್ಲಿ ವೈವಿಧ್ಯತೆಯಿದೆ

ಮಹಿಪತಿರಾಯರದು ಯೋಗ ಮಾರ್ಗವಾದರೂ ಅವರ ಸಹಜಗತಿ ಭಕ್ತಿ
ದ್ದಾಗಿತ್ತು. ಬ್ರಹ್ಮ ಸಾಕ್ಷಾತ್ಕಾರದಲ್ಲಿಯೂ ಭಕ್ತಿಪೂರ್ಣವಾಗಿ ವರ್ಣಿಸಿದ ಆ
ತ್ಮನ ಸ್ಮರಣೆ ಸ್ತುತಿ ಪರವಾದ ಕೀರ್ತನೆಗಳು ಅಪರೂಪದ್ದಾಗಿವೆ. ಪುರಂದರ
ಗಳಷ್ಟೇ ಸತ್ವಪೂರ್ಣವಾಗಿವೆ. ಹರಿಸರ್ವೋತ್ತಮತ್ವವನ್ನೇ ಒಪ್ಪಿದ ಅ
ಕೀರ್ತನೆಯನ್ನು ನೋಡಬೇಕು.

'ಸಕಲವೆನಗೆ ನೀನೆ ಶ್ರೀ ಹರಿಯೆ
ತಂದೆ ತಾಯಿ ಸ್ವಹಿತಾತ್ಮನು ನೀನೆ
ಬಂಧು ಬಳಗ ಸರ್ವಾತ್ಮನು ನೀನೆ
ದೈವ ಗುರು ಕುಲಗೋತ್ರನು ನೀನೆ
ಕಾವ ಕರುಣ ಸೂತ್ರಾಂತ್ರನು ನೀನೆ
ದ್ರವ್ಯ ಧನವು ಸಕಲಾಶ್ರಯ ನೀನೆ
ದಿವ್ಯಾಲಂಕೃತ ಭೂಷಣ ನೀನೆ
ಭಾಸುತ ಬಾಹ್ಯಾಂತ್ರದೊಳಹ ನೀನೆ
ಭಾಸ್ಕರ ಕೋಟಿ ಸುತೇಜರೂಪನು ನೀನೆ
ಮಹಿಪತಿ ಮನೋ ಮೂರ್ತಿಯು ನೀನೆ
ಸಾಹ್ಯ ಸಕಲಕೆ ಸಾರಥಿಯು ನೀನೆ।'' (೬

ಇಂಥ ಕೃತಿಗಳನ್ನು ಕಂಡಾಗ ಪುರಂದರ ಕನಕರ ಕೃತಿಗಳನ್ನು ಓ
ಆನಂದವಾಗುತ್ತದೆ. ತಟ್ಟನೆ, ಅವರ ಪ್ರಭಾವ ಇದೆಯೆಂದು ಹೇಳದೆ ಇರ
ಆದರೆ ಇಡೀ ಕೀರ್ತನ ಸಾಹಿತ್ಯವೇ ಒಂದು ನಿರ್ದಿಷ್ಟ ದಾರಿಯಲ್ಲಿ ನಡೆ
ಅಲ್ಲಿ ಪ್ರಭಾವಕ್ಕಿಂತ ಸಮಾನ ಅನುಭವದ ಅಭಿವ್ಯಕ್ತಿ ಮುಖ್ಯವೆನಿಸುತ್ತದೆ.
ಪುಟ್ಟ ಕೀರ್ತನೆಯಲ್ಲಿ ಮಹಿಪತಿರಾಯರ ಅಚಲವಾದ ಹರಿಭಕ್ತಿ ತೋರಿ

ೃಢವಾಗುತ್ತದೆ. ಇದೇ ಸರಣಿಯಲ್ಲಿ ಬರುವ,
ಷ್ಟೆಲ್ಲವೂ ಹರಿಸೇವೆ ಎನ್ನಿ ಯಕುತಿಮತರು ಹರಿ ಭಕುತಿ ಎನ್ನಿ' (ಕೀ-೫೨೭)
ಿಂತು ನಮಗೆ ಆತ್ಮಸ್ವರೂಪಾದ ನಿಶ್ಚಯದ ಧನವು (ಕೀ-೪೯೭)
ಾ ಸುಧೇವಸವು ಗುರು ನಿಮ್ಮ ನಾಮ ಸುರಮುನಿಯು ಸೇವಿಸುವ ದಿವ್ಯನಾಮ'
(ಕೀ-೩೯೪)
ಾಧಿದೇವ ಶ್ರೀದೇವ ಶಿಖಾಮಣಿ ಬಾರೋ' (ಕೀ-೩೮೯)
ಂಗಳಿನ್ನ ಮಂಗಳಾತ್ಮನ ಕಂಡೆ (ಕೀ-೧೮೭)
ಿಯ ಸೇವೆಯ ಮಾಡುವಬನ್ನಿ' (ಕೀ-೫೨೦)
ಿ ಎನ್ನಿ ಸಿರಿಲೋಲ ಎನ್ನಿ' (ಕೀ-೬೪೦)
ಕುತರ ದುಶನವು ಆತಿ ಹರುಷವು (ಕೀ-೬೩೧)
ಕೀರ್ತನೆಗಳನ್ನು ಗಮನಿಸಬಹುದು. ಶ್ರೀಹರಿಯ ದಶಾವತಾರವಂತೂ ುರಿಗೆ ಅತಿ ಪ್ರಿಯವಾದ ವಸ್ತು. ಅದನ್ನು ಅನೇಕ ವಿಧವಾಗಿ ಹೇಳಿ ಿಪದ್ಯ ರೂಪದಲ್ಲಿರುವ 'ಆಲದೆಲೆಯ ಮ್ಯಾಲ ಮಲಗಿಂಗ್ಯುಟವ ೀನಾರೈ' (ಕೀ-೨೧) ಎಂಬ ೮ ನುಡಿಗಳ ಕೀರ್ತನೆಯನ್ನು ಹೆಂಗಳೆಯರ ಮ್ಮ ಮಕ್ಕಳಿಗೆ ಹಾಲುಣಿಸುವಾಗ ಕೇಳಬೇಕು. ಸರಳ ಭಾಷೆ, ತಿಳಿಯಾದ ದರ ಸ್ವಾದವೇ ಬೇರೆ. ಅದರಂತೆ ದಶಾವತಾರವನ್ನು ಕೀರ್ತನ, ಸುವ್ವಿ, ಾಟ, ಕೊರವಂಜಿ ಪದಗಳಲ್ಲೂ ಹೇಳಿದ್ದಾರೆ. ಸಮೂಹ ಗಾನದಲ್ಲಿಯ ಿದ,

ಾ ಕೋಲೆನ್ನ ಕೋಲೆ ಕೋಲು ಕೋಲೆನ್ನ ಕೋಲೆ
ಶ್ರೀಹರಿಯ ಬಲಗೊಂಬೆ ಕೋಲ ||ಧ್ರು||
ಿಗಮ ಚೋರ ರಾಕ್ಷಸನ ಕೊಂದು
ವೇದವ ನುಳುಹಿದ ಕೋಲ
ವೇದವ ನುಳುಹಿದ ಕೋಲ
ವತಾರನ ಬಲಗೊಂಬೆ ಕೋಲ ||೧|| (ಕೀ-೧೭೮)

ಂದು ನುಡಿಗಳಲ್ಲಿ ರಾಯರ ವಾಣಿ ನಿರರ್ಗಳವಾಗಿ ಹರಿದಿದೆ. ಅದರಂತೆ ನ್ನು ಒಂದೊಂದೇ ಶಬ್ದಗಳಲ್ಲಿ ಹಿಡಿಯುವುದರೊಂದಿಗೆ, ಇಪ್ಪತ್ತು ಿಸ್ತರಿಸಿದ್ದನ್ನೂ ಕಾಣಬಹುದು. 'ಹೊಳೆಯು ನೀನೆ ಇಳದಿ ಬಾರೋ , ಬಳದಿ ಬಾರೋ, ಇಳೆಯ ಗೆಲಿದು ೧೪ ಕಂಭದೊಳು ಹೊಳದಿ ೀ-೪೧೫) ಎಂದು ಹೇಳಿದ್ದರೆ. ೭೪ ನುಡಿಗಳ ಕೊರವಂಜಿ ಪದದಲ್ಲಿ ಿ ಚಲಿಪಿಲಿ ಮಾಡುವ, ಒಮ್ಮೆ ಬಾಗಿ ಜಗನೆಗುವ, ಒಮ್ಮೆ ಹಲ್ಲಲಿ ವ, ಒಮ್ಮೆ ಬರುತಲಿ ಗುರುಗುಡವ' ಹೀಗೆ ಅನೇಕ ವಿಧವಾಗಿ ಹರಿಯ ್ನು ವರ್ಣಿಸಿದುದರಲ್ಲಿ ವೈವಿಧ್ಯವನ್ನಲ್ಲದೆ ಕಾವ್ಯ ಸೌಂದರ್ಯ ಾಸಬಹುದು.

ರಾಯರು ತಮ್ಮ ಕೃತಿಗಳಲ್ಲಿ ಸೃಷ್ಟಿಸಿರುವ ರೂಪಕಗಳು, ಮತ್ತು ಬ
ಉಪಮಾನಗಳು ಅಪರೂಪದ್ದಾಗಿವೆ. ಅವರ ಕಲ್ಪನಾ ಶಕ್ತಿಯ ಹಿರಿಮೆ
ಮಹಾಕವಿಗೆ ಇರಬಹುದಾದ ಪ್ರಜ್ಞೆ, ಇವುಗಳ ಅರಿವಾಗುತ್ತದೆ. ಈ ದೃಷ್ಟಿ
ಕೆಲವು ಕೃತಿಗಳನ್ನು ನೋಡಬಹುದು.

ನಿತ್ಯ ಜೀವನದಲ್ಲಿಯ ಸಂಗತಿಗಳನ್ನು ಆಧ್ಯಾತ್ಮ, ಸಾಧನ ಅನುಭವದ ಅ
ಬಳಸುವುದು ತುಸು ಕಠಿಣ. ಒಕ್ಕಲುತನವು ಬಹು ಜನರ ಉದ್ಯೋಗ
ಭೂಮಿಯನ್ನು ಉತ್ತಿ, ಬಿತ್ತಿ, ಕಳೆಯನ್ನು ತೆಗೆದು ಬೆಳೆಯ ರಾಶಿ ಮ
ಒಕ್ಕಲುತನದ ವಿಧಾನವನ್ನೇ ಪ್ರತೀಕಗಳನ್ನಾಗಿ ಬಳಸಿ ಆಧ್ಯಾತ್ಮ ಸಾಧನೆ
ವ್ಯವಸಾಯ ಮಾಡುವ ವಿಧಾನವನ್ನು ರಾಯರು ಹೇಳುವ ರೀತಿ ವಿಶಿಷ್ಟ

'ಹುರಿದು ಭವಬೀಜ ಧರೆಯೊಳು ಕರುಣದಲಿ
ಪರಮ ಆನಂದ ಸುಖ ಮಳೆಗರೆದು
ಕರ್ಮಪಾಶಗಳೆಂಬ ಕರಕಿ ಬೇರವು ಕಿತ್ತಿ
ಹರಗಿ ಬಿತ್ತಲು ನಾಮ ತಾರಕುಪದೇಶದಲಿ
ವರ ಪ್ರತಾಪದ ಬೆಳೆಯು ತುಂಬಿ ತುಳುಕುವ ಸಿರಿಯು
ಸರ್ವಮಯವೆಂಬ ತೆನೆಗಳು ತುಂಬಿ
ಏರಿ ಸುಷುಮ್ನ ನಾಳದ ಮಂಚಿಕೆಯ ಮೆಟ್ಟಿ
ಪರಿ ಪರಿ ಅವಸ್ಥೆಯ ಪಕ್ಕಿಗಳು ಹಾರಿಸಲಾಗಿ
ಮುರಿದು ಭೇದಾಭೇದವೆಂಬ ಗೂಡಲೊಟ್ಟಿ
ಅರಿವು ಕಣದಲ್ಲಿ ಥರಥರದಲಿಕ್ಕಿ
ಜ್ಞಾನ ವೈರಾಗ್ಯ ವೆಂಬೆರಡೆತ್ತುಗಳ ಹೂಡಿ
ಸರ್ವಗುಣ ತೆನೆ ತೆಗೆದು ತುಳಿದು ರಾಶಿ ಮಾಡಿಸಲಾಗಿ
ಸರ್ವಮಯವೆಂಬ ರಾಶಿಯ ಒಟ್ಟುಳಿ ಮಾಡಿ
ತೂರಿ ತರ್ಕ ಭಾಸಗಳೆದು
ಮಿಥ್ಯಾ ಪ್ರಪಂಚವೆಂಬ ಕಾಳವು ಕಡಮಾಡಿ
ಸಫಲ ಸಹಕಾರದಲಿ ಸುಗ್ಗಿ ಮಾಡಿಸಲಾಗಿ
ಏಕೋ ಬ್ರಹ್ಮದ ಗತಿ ನಿಧಾನ ರಾಶಿಯ ದೋರಿ
ಜನ್ಮ ಮರಣವು ಕೂಯಿಲಿಯ ಸುಟ್ಟು ಉರುಹಿ
ಸದ್ಗತಿ ಮುಕ್ತಿ ಸುಕಾಲ ಸಾಧನವಿತ್ತು
ಮೂಢ ಮಹಿಪತಿ ಪ್ರಾಣ ಸದ್ವೆಸಲಾಗಿನ್ನು' (ಕೀ

ಹೀಗೆ ದಿನ ಬಳಕೆಯ ವ್ಯವಸಾಯದ ಶಬ್ದಗಳನ್ನು ಬಳಸಿ ಸಾಧನ
ವಿಧಾನವನ್ನು ರಾಯರು ಅನನ್ಯವಾಗಿ ನಿರೂಪಿಸಿದ್ದಾರೆ.

ಮಹಿಪತಿರಾಯರ ರಮ್ಯ ಕಲ್ಪನಾಶಕ್ತಿಗೆ ಉದಾಹರಣೆಯಾಗಿ ಅವರ
ಸುವ್ವಿ ಪದವನ್ನು ನೋಡಬಹುದು. ಅದರಲ್ಲಿ ಅವರು ವಾಸುದೇವನ ಮದುವ

ಸ್ತಾರೆ. ಈ ನೀಡಿದಾದ ಕೃತಿ ಉದ್ದಕ್ಕೂ ಸಾಂಕೇತಿಕವಾಗಿ ನಿರೂಪಿತವಾಗಿದ್ದು
ಧಾಟಿಯನ್ನು ಹೋಲುತ್ತದೆ. ಈ ಕೃತಿಯಲ್ಲಿ ರಾಯರ ಕಥನ ಕೌಶಲವನ್ನೂ
ಹುದು.

ಣಪತಿಯ ಮದುವೆಯ ವೈಭವ ಅಪರೂಪವಾದದ್ದು, ಮೊದಲು ಗಣಪತಿಯ
ಮಾಗಬೇಕು.

ಮನವ ಕಣಕವ ಮಾಡಿ ಗಣಪತಿಯ ಬಲಗೊಂಡು
ಅನುಮಾನಂಬೆಳ್ಳಚಿಗಳಿಯ
ಅನುಮಾನಂಬೆಳ್ಳಚಿಗಳಿಯ ನೆನವು ನೆನಗಡಲಿಯ
ಗಣನಾಥಗಿಟ್ಟು ಬಲಗೊಂಡು'
ಗಣಪತಿಯ ಪೂಜೆಯನ್ನು ಮಾಡಿ
ಮನವೆಂಬ ಕಣಕವ ಘನವಾಗಿ ಕುಟ್ಟುತ್ತ
ಜ್ಞಾನ ವೈರಾಗ್ಯದೊಡಗೂಡಿ
ಡಗೂಡಿ ಕುಟ್ಟುತ ಪ್ರಾಣದ ಸಖಿಯರು
ನಂದ ಘನವ ಬಲಗೊಂಡು'

ನಂದ ಘನವನ್ನು, ನಿಗಮಗೋಚರನನ್ನು, ನಿತ್ಯನಿರ್ಗುಣನನ್ನು ಪತಿತಪಾವ
ಬಲಗೊಂಡು ವಿಶ್ವ ವ್ಯಾಪಕನ ಮದುವೆಗೆ ಮಾಡಿದ ಅಡುಗೆಯ ಸಂಭ್ರಮ
ರದು. ಮನವೆಂಬ ಕಣಕವನ್ನು ಕುಟ್ಟಿದ್ದೇ ಕುಟ್ಟಿದ್ದು. 'ವಸುಧೆಯೊಳು ದೃಢ
ಕಲ್ಲನೆ ಮಾಡಿ, ಕುಸುವ ನಿಶ್ಚಯದ ವನಕೆಯ ಹಸ್ತದಿ ಹಿಡಿದು ಹಸನಾಗಿ
ಾದಿ ಉರುಳಿ ಮಾಡಿ, ಆಸಿಯುಕಲ್ಲು, ಒನಕೆ ಉಸಲಾರಗೊಡದೆ ಕುಟ್ಟಿದ
ಘಟ್ಟಿಸಿಹ ಮಾಡಿ, ಉನ್ಮನೆಯ ಮುದ್ರಿಯಲಿ ಒಟ್ಟಿದರು. ಜ್ಞಾನ ವೈರಾಗ್ಯ
ನಾದಿ ಶಕ್ತರು ಕಣಕ ಕುಟ್ಟಿ ದಣಿದರು. ಈ ಹಸನಾದ ಕಣಕದಿಂದ ಹೊಸಪರಿ
ನ್ನು ತಯಾರಿಸಿ, ಹೆಸರಿಟ್ಟು ಏಸು ಪರಿಯಿಂದ - ಬೀಸೋರಿಗೆಗಳು
ವನ ಮದುವೆಗೆ ಸುತ್ತ ಕುಳಿತ ಪಂಕ್ತಿಯಲ್ಲಿ ಆತ್ಮದಿಂದ ಬಡಿಸಿದರು.

ಖರಿ ತುಪ್ಪವು ಭಕ್ತಿ ಭಾವದಲಾದ
ಕ್ಕ ತಂಗೇರು ಬಡಿಸುತ
ಡಿಸುತ ನಡೆದರು ಅಖರದಿಂದಲಿ
ಶಾಂತನ ಮದುವಿಗೆ
ಧ ಕಸ್ತೂರಿಯು ತಂದೆ ಗುರುಕೃಪೆಯು
ದವಾಗಿಟ್ಟು ಮೆರೆದರು
ರೆದು ಮೇದಿನಿಯೊಳು ಗುರುದಯ ಕರುಣದಿ
ಮ ಸುಪಥವ ಪಡೆದರು
ಇಲ್ಲದ ಪ್ರಸ್ತ ಧರೆಯೊಳಾಯಿತು
ಮಾನಂದ ಹರುಷದಲಿ
ುಷವ ಕಂಡಿನ್ನು ಕರಮುಗಿದು ಮಹಿಪತಿ

ಲದಲ್ಲಿ ಸ್ತುತಿಸಿದ' (ಕೀ-೬೧೬)
ಡಿಗಳ ಈ ಸುವ್ವಾಲಿಯನ್ನು ಹೆಣ್ಣುಮಕ್ಕಳು ಮದುವೆಯ ಸಮಾರಂಭ
ಾಗಿ ಹಾಡಿದಾಗ ಆಗುವ ಪರಿಣಾಮ ಅದ್ಭುತವಾದದ್ದು.

ಯರ ಕಲ್ಪನಾಶಕ್ತಿ ಹಾಗೂ ಕಥನ ಕೌಶಲಕ್ಕೆ ಅನೇಕ ಉದಾಹರಣೆಗ
ಹುದು. 'ಜ್ಞಾನ ಗುರು ಶುದ್ಧ ಮಡಿವಾಳ' (ಕೀ-೨೫೩) ಎಂಬ
ನವನ್ನು ಅಗಸನಿಗೆ ಹೋಲಿಸಿ ದೃಢದ ಬಂಡೆಗಲ್ಲಿನ ಮೇಲೆ ಸುಬೋ
ವನ್ನು ಹಚ್ಚಿ ಮನದ ಮೈಲಿಗೆಯನ್ನು ಹಿಡಿದು -ಹಿಂಡಿ, ವೈರಾಗ್ಯದ
ಣಗಹಾಕಿದ್ದಾರೆ. 'ತವರು ಮನೆ ನನ್ನ ಸುವಿದ್ಯಾಪುರದಲ್ಲಿದೆ'
ಎಂಬ ಹನ್ನೊಂದು ನುಡಿಗಳ ನಿಡಿದಾದ ಕೃತಿಯಲ್ಲಿ ಅವರ ತವರು
ನ್ನು ಬಿತ್ತರಿಸಿದ್ದಾರೆ. ಒಂದು ಆರತಿ ಪದದಲ್ಲಿ (ಕೀ-೨೩೭) 'ಮನವೆ
ರತಿ ನೆನವು ತುಪ್ಪ ಜ್ಞಾನ ದೀಪ' ಹಚ್ಚಿ ಬೆಳಗಿದ್ದಾರೆ. ಇನ್ನೊಂದು
(ಕೀ-೪೦೯) ಪರಮಾತ್ಮನು ಅವರಿಗೆ ಕೃಪೆ ಮಾಡುವ ರೀತಿಯನ್ನು
ತಾಯಿ ಶಿಶುಸ್ತನ ಪಾನಕೆ ಬಾಯೊಳಗಿಡುವ್ಹಾಂಗೆ' ಅವರಿಗೆ ದಯ

ಅನುಭವ ಇವುಗಳಿಗಷ್ಟೇ ಅವರ ರೂಪಕ ಶಕ್ತಿ
ಕಂಡು ಹೇಳಿದ ಕೃತಿ 'ಹರಿಗೆ ನಮಿಸದ ಶಿರವು
ೀ-೬೩೨) ಎಂಬ ಕೃತಿಯಲ್ಲಿ 'ವಂದಿಸದ ಹಣೆಯು
ರ ಕೈ ಮುರಕ ಕೀಲಿಕೈ' 'ಕೊಂಡಾಡದ ನಾಲಿಗೆ ಒಡಕ
ಕೀರುವ ಚಿಮ್ಮಡಿಯ ಮುಖವು' 'ಕೇಳದ ಕಿವಿಯು
ಕಣ್ಣು ತೋರುವ ನವಿಲ್ಗರಿಕಣ್ಣು' 'ಸೇವೆಗೊದಗದ
ು' ಎಂದು ಇತ್ಯಾದಿಯಾಗಿ ಹೇಳುವಲ್ಲಿ ನಾವಿನ್ಯತೆ

ೂಪಕಶಕ್ತಿ ಅಪರೂಪವಾಗಿದೆ. ಇದೀ ಸಾಧನೆಯನ್ನೇ
ಡುತ್ತಾರೆ. ದೊರೆತ ಮೂರೇ -ಮೂರು ವಚನಗಳು
ರ್ಯವನ್ನು ಎತ್ತಿ ತೋರಿಸುತ್ತವೆ. ಅವುಗಳಲ್ಲಿಯ

ಶನುವು ಹದಿಯನೆಕಟ್ಟಿ
ನ ಮರಣದ ಗುರಿಯ ಕೆಡಹಿದಾ
ದು ಸ್ತುತಿಸಿದ ಮಹಿಪತಿ॥

(ಹಸ್ತಪ್ರತಿ -ಈ)

ಮಾನವನಲ್ಲಿ ಕಂಡು ಬರುವ ಸದ್ಗುಣ ಹಾಗು ದುರ್ಗುಣಗಳನ್ನು ದೃಷ್ಟ ಮತ್ತು ಷ್ಟ ಶಕ್ತಿಗಳೆಂದು ಕರೆದು ಅವುಗಳ ಮಧ್ಯದ 'ಸಮರ'ವನ್ನು 'ದೃಷ್ಟಾದೃಷ್ಟ ಾದ' (ಕೀ-೩೦೭) ಎಂಬ ಕೃತಿಯಲ್ಲಿ ನೂರ ಇಪ್ಪತ್ತೆರಡು ಸಾಲುಗಳಲ್ಲಿ ತುಂಬ ಾಹಲ ಕಾರಿಯಾಗಿ ಹೇಳಿದ್ದಾರೆ. ಅದು ದೈವೀ -ಅಸುರೀ ಶಕ್ತಿಯೂ ಹೌದು. ಯುದ್ಧ ನಿರಂತರವಾಗಿ ನಡೆದಷ್ಟೇ ಆಗಿದೆ. ಕೊನೆಗೆ ದೈವೀ ಶಕ್ತಿಗೆ, ಸದ್ಗುಣಕ್ಕೆ ದೊರೆಯುತ್ತದೆ. ಕೃತಿಯ ಉದ್ದಕ್ಕೂ ಕಂಡುಬರುವ ಪಾರಿಭಾಷಿಕ ಶಬ್ದಗಳು, ಎರಡು ಶಕ್ತಿಗಳ ಪರಸ್ಪರ ಕಲಹ, ಪರಿಣಾಮ ಮುಂತಾದವುಗಳಲ್ಲಿ ಕಾವ್ಯಗುಣ ಲಕ್ಷಿಸಲು ಅರ್ಹವಾಗಿವೆ. ಯೋಗ ಸಾಧನೆಯ ಎಲ್ಲ ವಿವರಗಳನ್ನು ಈ ಯಲ್ಲಿ ನಿರೂಪಿಸಲಾಗಿದೆ.

ಮಹಿಪತಿರಾಯರ ದೊರೆತ ಕೃತಿಗಳ ಸಂಖ್ಯೆ ವಿಪುಲವೆಂದು ಹೇಳಿತು. ಅದರಂತೆ ಿ ವೈವಿಧ್ಯವೂ ವಿಪುಲವಾಗಿದೆ. ಬಹುಶಃ ರಾಯರ ಶಿಷ್ಯ ಮಂಡಲಿಯು ಕೆಲವು ದ್ದಾಗಿರಲಿಲ್ಲವೆಂದು ತೋರುತ್ತದೆ. ಎಲ್ಲ ಬಗೆಯ ಸಾಮಾಜಿಕ ಅಂತುಸ್ತುಗಳಿಗೆ ರ ಜನರು ಇದ್ದಿರಬೇಕು. ಆದ್ದರಿಂದ ಅವರವರ ಅಭಿರುಚಿಗೆ ತಕ್ಕಂತೆ, ಸಾಂಸ್ಕೃತಿಕ ಗಳಿಗೆ ಸರಿಹೊಂದುವಂತೆ ಬೇರೆ ಬೇರೆ ಬಗೆಯ ಸಾಹಿತ್ಯ ರಚನೆ ಮಾಡಿದ್ದಾರೆ. ು ಒಂದೇ ಆಗಿದ್ದರೂ ಅದನ್ನು ವಿವರಿಸುವ ರೀತಿ ವೈವಿಧ್ಯಮಯವಾಗಿದೆ.

ಸಂಸ್ಕೃತ ಶಿಷ್ಯರಿಗಾಗಿ ಕೀರ್ತನೆಗಳನ್ನು, ಸ್ತೋತ್ರ ಸ್ತುತಿ ಪದಗಳನ್ನು, ಆರತಿ ನ್ನು, ಪ್ರಾತಃಸ್ಮರಣೆಗಳನ್ನು ರಚಿಸಿದ್ದಾರೆ. ಸ್ತ್ರೀಯರಿಗಾಗಿ ಸಾಂಗತ್ಯ, ಶೋಭನ ತ್ರಿಪದಿ, ಜೋಗುಳ ಪದ, ಕುಟ್ಟುವ ಪದ, ಸುವ್ವಿ ಪದ, ಕೋಲಾಟದ ನ್ನು ಬರೆದಿದ್ದಾರೆ. ಜನಸಾಮಾನ್ಯರಿಗೆ ಲಾವಣಿ, ಹಂತಿಪದ, ಭಾವಗೀತೆ, ಾಟ, ಕೊರವಂಜಿ ಪದ, ಸುಗ್ಗಿಯಪದ, ತಾನಾ-ತಂದಾನಾಗಳನ್ನು ರಚಿಸಿದ್ದಾರೆ. ಳಲ್ಲಿ ವೃತ್ತಗಳ ವಿವಿಧತೆಯೂ ಸಾಕಷ್ಟಿದೆ. ಬೇರೆ ಬೇರೆ ರಾಗ-ತಾಳಗಳಿಂದ ರ ತ್ರಿಪದಿಗಳು, ಚೌಪದಿಗಳು, ಸಾಂಗತ್ಯ, ಭಾಮಿನಿ, ವಾರ್ಧಕ ಷಟ್ಪದಿಗಳು ಲಾವಣಿ, ಮಾಲಾವೃತ್ತ ವಚನ ಇವುಗಳಿಂದ ರಾಯರ ಸಾಹಿತ್ಯವು ಸಂಪದ್ಭರಿತ ಹೃದಯಂಗಮವಾಗಿದೆ.

ಯರು ಬಹುಭಾಷಾ ವಿಶಾರದರಾಗಿದ್ದರು. ಕನ್ನಡದ ಹೊರತಾಗಿ ಮರಾಠಿ ಅಂದಿನ ದಖಣಿ ಭಾಷೆಯಲ್ಲಿ ರಚಿಸಿದ ಅವರ ಕೆಲವು ಕೃತಿಗಳೂ ದೊರೆಯು ಜೊತೆಗೆ ಮಿಶ್ರ ಭಾಷಾ ಕೆಲವು ಕೃತಿಗಳನ್ನೂ ರಚಿಸಿದ್ದಾರೆ. ಕನ್ನಡ, ಮರಾಠಿ, ಪರ್ಶಿಯನ್ ಹಾಗೂ ದಖಣಿ ಭಾಷೆಗಳನ್ನು ಬಳಸಿ ರಚಿಸಿದ ಐದು ಕೃತಿಗಳು ಯುತ್ತವೆ. ಇದರಿಂದಾಗಿ ಅವರ ಕನ್ನಡ ಕೃತಿ ರಚನಾ ಶೈಲಿಯ ಮೇಲೂ

ಒಕಷ್ಟು ಪರಿಣಾಮವಾಗಿದೆ. ಸಂಸ್ಕೃತ ಹಾಗು ಜಾನಪದ ನುಡಿಗಳ ಮಧುರ
ಲನವಂತೂ ಸರಿಯೆ. ದಖಣಿ ಭಾಷೆಯ ಪ್ರಭಾವದಿಂದಲೋ ಏನೋ, ಕನ್ನಡ
ಭಾಷೆಯನ್ನು ಹೇಗೆ ಬೇಕೋ ಹಾಗೆ ದುಡಿಸಿಕೊಂಡಿದ್ದಾರೆ. ಬಹು ಭಾಷೆಗಳ
ರಿಚಯವಿದ್ದರೂ ಅವರ ಆಯಾ ಭಾಷೆಗಳ ಕೃತಿಗಳಲ್ಲಿ ಇನ್ನೊಂದು ಭಾಷೆಯ
ಬ್ದಗಳ ಬಳಕೆ ಇಲ್ಲದ್ದು ವೈಶಿಷ್ಟ್ಯವೆನ್ನಬಹುದು. ಪರ್ಶಿಯನ್ -ದಖಣಿ ಭಾಷೆಗಳ
ಚ್ಛಾಯ ಕಾಲದಲ್ಲಿ ಕೃತಿಗಳನ್ನು ರಚಿಸಿದ್ದರೂ, ಆ ಭಾಷೆಗಳ ಮೇಲೆ ಅವರಿಗೆ
ಭುತ್ವವಿದ್ದರೂ ಕನ್ನಡ ಭಾಷೆಯ ಅವರ ಕೃತಿಗಳಲ್ಲಿ ಪರ್ಶಿಯನ್ ಅಥವಾ ದಖಣಿ
ಬ್ದಗಳನ್ನು ತಪ್ಪಿಕೂಡ ಬಳಸಿದ್ದನ್ನು ಕಾಣುವುದಿಲ್ಲ. ಅವರ ಕನ್ನಡ ಕೃತಿಗಳಲ್ಲಿ
ರ್ಗಕ್ಕಿಂತ ಹೆಚ್ಚು ವಿಜಾಪುರದ ಸುತ್ತಮುತ್ತ ಇಂದಿಗೂ ಬಳಸುವ ಜನಸಾಮಾನ್ಯರ
ಬ್ದಗಳ ಬಳಕೆಯೇ ಅಧಿಕವಾಗಿದೆ.

ಾನೆ, (ಇದ್ದಾನೆ) ಅಭ್ಯಂತ್ರ, ಕರಕೋ, ಅಮ್ಮ, ಅಮ್ಮಿ (ಮೊಲೆ), ರಮ್ಮಿಸಿ, ತ್ಯರನೆ,
ುವ್ವ, ಸಿಲ್ಕುವ, ಅರಿಕ್ಕುಳ್ಳ, ತಿರವು, ಮರವ್ವ, ಖೂನ (ಗುರುತು), ಬೆರಿ (ಕೂಡು),
ದ, ಇರಳ್ಹಗಲ, ಬಡಿವಾರ, ಸರ್ಕನೆ, ತುಂಬ್ಯಾದ, ಗುರ್ತು, ಬೆರ್ತು, ಪ್ಯಾಟಿ,
ರ್‍ಯಾಡು, ಕಡಗಂಡು, ಸರಗ, ಉಮ್ಮಸ (ಹುಮ್ಮಸ), ಭಗತರು, ಹೊತ್ತಿಗೆ, ಸುಖಗರು
, ಸಂತ್ರಾಧಾರಿ, ಸ್ವಸ್ಥ, ಅಖರದಿ, ಕಂಡಮ್ಯಾಲೆ, ಬಲುಬ್ಯಾಗ, ಕೊಟ್ಟಾಂಗ, ತುಟ್ಟಿಲೆ
ಟೆಲೆ), ಹೊಟ್ಟಿ, ಸಾಯಾಸ, ಮಾರಗವು (ಮಾರ್ಗವು), ಹತ್ತಿಲೆ (ಸಮೀಪ),
ಟಿ, ನಾಟಿ, ಮುರುವು (ದನಗಳಿಗೆ ಹಾಕುವ ನುಚ್ಚು)

್ಯಾದಿ ಇನ್ನೂ ಅನೇಕ ಶಬ್ದಗಳನ್ನು ಉದಾಹರಿಸಬಹುದು. ಭಾಷಾಭ್ಯಾಸಿಗಳಿಗೆ
ುರ ಸಾಹಿತ್ಯವು ಒಂದು ಆಗರವಿದ್ದಂತೆ. ಈ ಶಬ್ದಗಳ ಉಪಯೋಗ ಕೂಡ
ನಾರ್ಹವಾಗಿದೆ.

'ಸುಗ್ಗಿ ಇದೆ ಲಗ್ಗೆ ಮಾಡಿಕೊಳ್ಳಿ
ಬೊಗ್ಗಿ ಉಣಬೇಕು ಹಿಗ್ಗಿಕೊಳ್ಳೋ' (ಕೀ-೧)
'ಉಮ್ಮೇ ಸವಿದೊಮ್ಮೆ ಅಮ್ಮ ನಾ
ಅಮ್ಮಿಯಾಲಮೃತ್ಯರಿ' (ಕೀ-೪)
(ಮೊಲೆ ಹಾಲ ಅಮೃತವನೆರ)
'ಮುರು ಹರಿಯಗುಡದನಕ' (ಕೀ-೫)
'ಮರಹು ಮರದೀಡ್ಯಾಡಿ' (ಕೀ-೭)
'ಒಳ್ಯಾವರ ಕೇಳಿ ಉಳವಲುಪಾಯದ ಮಾತು' (ಕೀ-೧೨೬)
'ಅಟಾಅಟ ಬಡುವದ್ಯಾತಕೆ' (ಕೀ-೧೫೪)

್ಯಾದಿ ವಾಕ್ಯ ಪ್ರಯೋಗಗಳು ಆಡುಮಾತಿನ ಬಳಕೆಗೆ ಸಾಕ್ಷಿಯಾಗಿವೆ.

ಮಹಿಪತಿರಾಯರು ಶಬ್ದ ಸಾಮ್ರಾಟರು. ಅವರ ಶಬ್ದ ಸಂಗ್ರಹ ಅನುಪಮವಾ
ಆ ಶಬ್ದಗಳ ಸರಿ ಉಪಯೋಗ ಕೃತಿಗಳಿಗೆ ನಾದ ಮಾಧುರ್ಯವನ್ನು ಒದಗಿಸಿದೆ.
, ಅನುಪ್ರಾಸ, ಯಮಕಾದಿ ಶಬ್ದಾಲಂಕಾರಗಳು, ಮುಕ್ತಪದ ಗ್ರಾಸಾಲಂಕಾರ.

ನುಕಾರಿ ನಾದವುಳ್ಳ ಶಬ್ದಗಳ ಬಳಕೆ ಸಹಜವಾಗಿ ಹೊರಹೊಮ್ಮಿ ಅವರ
ನಾದ ಮಾಧುರ್ಯವನ್ನು ಹೆಚ್ಚಿಸಿವೆ.

ತ್ಸಂಗ ಮಾಡೋ ಮನವೆ' (ಕೀ-೫೩೪) ಲಾವಣಿಯಲ್ಲಿಯ ಅನುಪ್ರಾಸ
ಮಕಗಳು ಅನುಪಮವಾಗಿವೆ. ಇವುಗಳು ಸಹಜವಾಗಿ ಬಂಧಿವೆಯಲ್ಲದೆ ಪಾಂಡಿ
ಪ್ರತೀಕವಾಗಿ ಅಲ್ಲ – ಎಂಬುದು ಗಮನಾರ್ಹವಾಗಿದೆ.

'ತೊಡಕಿ ಮಿಡುಕಬ್ಯಾಡ ಹಡಕಿ ವಿಷಯದೊಳು ಗಡಕವಾಗಿ।
ಕೆಡುಕ ಬುದ್ಧಿಯಿಂದ ಕೆಡುದೇನ ಬಡದ ಭವಣಿಬಟ್ಟು।
ಮಡದಿ ಮಕ್ಕಳಿಗೆ ದುಡಿದು ತಂದು ಅಡಕಿದರ ತಾವು ಕೊಡುವರೇನ।
ಒಡಲ ಪೊರಿಯಲಿಕ್ಕೆ ಒಡದ ಮಡಕಿಯಂತೆ ದಣಿಯಲಿಲ್ಲ।
ತುಡುಕಿ ಹೋಗುತಿಹಾಯುಷ್ಯಕ್ಷೀಣ ಸಡಕಹಾಕಿ ವ್ಯವಯಮನ।
ದುಡುಕಿಯೊಳಗಾಗ ಬ್ಯಾಡ ಪಡಕೋಬ್ಯಾಗ ಗುರುದಯಕರುಣ॥

ಸಿಲ್ಕಿಮಾಯ ಮಲ್ಕಿನೊಳು ಅಳ್ಕಿ ಆಲಪರಿಯಬ್ಯಾಡ।
ಬಲ್ಕಿ ಮಾಡಿಕೊಳ್ಳು ನೀ ಸುಜ್ಞಾನ ಕ್ಷುಲ್ಲಕ ಬುದ್ಧಿಗಾಗಿ।
ಅಳ್ಕಿ ಕಲ್ಕಿಬ್ಯಾಡೋ ನೀನು ತಿಳಕೋ ನಿನ್ನ ತನುವಿನೊಳಗಖೂನ।
ನುಲ್ಕಿ ಸುಟ್ಟ ಮಲ್ಕಿನಂತೆ ಜನಕಾಲಂಬ ತೋರಿ ನೀನು।
ಜಲ್ಕಮಲದಂತಿರನುದಿನ ನೀನು ನಿಲ್ಕಿ ನೆಲಗೊಂಬುದಿದು।
ತಳ್ಕು ತನ್ನೊಳಗದಯೆಂದು ನಾಲ್ಕು ವೇದ ಸಾರುತಿದೆ ಪೂರ್ಣ॥''

ಸಾಗುತ್ತದೆ. ಇದರೊಂದಿಗೆ,

'ಮೂರುಗುಣರಹಿತ ಮೂರುಲೋಕ ವಂದಿತ।
ಮುರಹರನಹುದೀತ ಗುರುನಾಥ।

ಸುರಜನ ಪೂರಿತ ಪರಮಾನಂದ ಭರಿತ।
ತಾರಕನಹುದೀತ ಗುರುನಾಥ॥ (ಕೀ-೧೪೨)

ಎಂಟು ನುಡಿಗಳ ಕೃತಿಯಲ್ಲಿ ಒಂದೇ ಒಂದು ಒತ್ತಕ್ಷರದ ಉಪಯೋಗವಿಲ್ಲ
ಗಮನಿಸಬೇಕು. ಇದು ರಾಯರ ಭಾಷಾ ಪ್ರಭುತ್ವಕ್ಕೆ ಸಾಕ್ಷಿ. ಅದರಂತೆ
ಮನೆಂದು ನಿಮ್ಮ ವಿಡದಿರೆ ಪಾದವ' (ಕೀ-೧೨೫) 'ಇದೇ ನೋಡಿರೋ ನಿಜ
ಸೋ' (ಕೀ-೪೬) ಮೊದಲಾದ ಕೃತಿಗಳನ್ನೂ ನೋಡಬಹುದು.

'ನೋಡಿ, ನೋಡಿ ನೋಡಿ ನೋಡುದರೊಳು ಕೂಡಿ
ನೋಡುವದೇನೆಂದು ನೋಡಿ
ನೋಡಿದ ಮ್ಯಾಲಿನ್ನು ಮೂಡಿ ಬಂದರ ಘನ
ನೋಡುವದೇ ಖೂನಮಾಡಿ
ಮಾಡಿದ ಮಾಟವು ಕೂಡಿ ಬಂದರ ಕೈಯ
ನಾಡಗೂಡ ಹೇಳಬ್ಯಾಡಿ

ತೆ ಗುಹ್ಯದ ಮಾತು ಒಡೆದು ಹೇಳುವದಲ್ಲಾ
ಡಿ ನಿಮ್ಮೊಳು ಬೆರದಾಡಿ'
ುಗಳು ಓದುಗರ ಕಿವಿಗಳನ್ನು ತಣಿಸದಿರವು. 'ಸೋಜಿಗವಾಯಿತು ಸದ್ಗುರು
(ಕೀ-೬೨೨) ಕೃತಿಯಲ್ಲಿನ,
ಹೋಗು, ಬಾಗು, ಸಾಗು, ಆಗು, ಕೂಗು, ತೂಗು ಮತ್ತು ಹರಿ, ಮುರಿ,
, ಅರಿ, ಸುರಿ, ನರಿ, ತ್ಯರಿ, ಜರಿ, ನೆರಿ ಅಲ್ಲದೆ ಜಾರು, ಮೀರು, ಹಾರು,
ೀರು, ಸಾರು, ಭೀರು,
ನ ಬಳಕೆಯನ್ನು ಗಮನಿಸಬೇಕು.

ರೇ ಆದ ಮಹಿಪತಿರಾಯರ ಕೃತಿಗಳ ಮೇಲೆ ಮಾಧ್ವರ ದ್ವಾದಶಸ್ತೋತ್ರ,
ತಿ ಮೊದಲಾದವುಗಳ ಪ್ರಭಾವ ಆಗಿರುವುದು ಸಹಜವೇ ಆಗಿದೆ. ಜೊತೆಗೆ
ಜೈಮಿನಿ ಭಾರತ, ರತ್ನಾಕರವರ್ಣಿಯ ಭರತೇಶ ವೈಭವದಂಥ ಕಾವ್ಯಗಳ
ಆಗಿರುವ ಸಾಧ್ಯತೆಯನ್ನು ಗುರುತಿಸಬಹುದಾಗಿದೆ.

'ಇಂದೀವರ ದಳನಯನ ನಂದಕುಮಾರ
ಸುಂದರ ಶುಭವದನ
ಮಾಧವ ಮಧುಸೂದನ
.ಮಂದರ ವೃಂದ ಗೋಕುಲೋದ್ಧರಣ' (ಕೀ-೪೧೩)

ಳೆ ಮೇಲೆ ಮಧ್ವಾಚಾರ್ಯರ ದ್ವಾದಶಸ್ತೋತ್ರದ ಪ್ರಭಾವ ಆಗಿರದೇ

ಗ್ಯ ಭೋಗದ ಸಾರಸುಖವಿದು ಯೋಗಿ ಮಾನಸ ಜೀವನ
ಯಲನುಭವಿಸಿ ಮಹಿಪತಿಯೋಗ್ಯ ನಾಗೋಸನಾತನ
ಂಗತ್ಯದ ಸಾಲುಗಳ ಮೇಲೆ ರತ್ನಾಕರವರ್ಣಿಯ ಪ್ರಭಾವವು ಇಲ್ಲವೆಂದು
ದು.

ತಿರಾಯರ ಶೈಲಿಯ ವಿವಿಧ ವಿನ್ಯಾಸಗಳನ್ನು ನೋಡಿದಾಗ ಇವುಗಳಲ್ಲಿ
ರ ತತ್ವಜ್ಞಾನ, ಲೋಕಾನುಭವ ಹಾಗೂ ಭಾಷಾಪ್ರಭುತ್ವಗಳು ಎದ್ದು
ವೇದೋಪನಿಷತ್ತುಗಳೇ ಮೊದಲಾದ ಆರ್ಯ ಆಧ್ಯಾತ್ಮಿಕ ಗ್ರಂಥಗಳನ್ನು
ನಾಡಿದ ಅವರು ಈ ಶಬ್ದ ಮಾಧುರ್ಯ ಉಕ್ತಿ ಚಾತುರ್ಯಗಳನ್ನು
ಮೇ ಸಂಪಾದಿಸಿಕೊಂಡಿದ್ದರೆಂದು ತಿಳಿಯಬಹುದು.

★ ★ ★

## ಕೆಗಳು

ಸ್ಕ ಹರಿದಾಸ (ಸಂ): ಸೇವಾತತ್ವ ಕೃತಿ ೧೯೫ ಪುಟ ೧೬೦

ಹಾಗೂ ಈ ಮುಂದೆ ಉದ್ಧರಿಸುವ ಕೃತಿಸಂಖ್ಯೆಗಳು ಮೈಸೂರು ವಿಶ್ವ ವಿದ್ಯಾಲಯದ
ರಾಯರ ಕೃತಿಗಳು' ಸಂಗ್ರಹದಿಂದ ಆಯ್ದುಕೊಂಡಿದೆ.
ಂಡುರಂಗಿ : ಆಧ್ಯಾತ್ಮ ದೃಷ್ಟಿ ಪುಟ ೪
ಟ ೫
ರಾಜರಾವ (ಸಂ): ಶ್ರೀ ಮಹಿಪತಿರಾಯರ ಕೃತಿಗಳು ಪೀಠಿಕೆ XXVI
robindo on himself: ಪುಟ – ೩೯
ಡುರಂಗಿ: ಆಧ್ಯಾತ್ಮಿಕ ದೃಷ್ಟಿ ಪುಟ ೩೯
ರಾಮರಾಯರು (ಸಂ): ಹರಿದಾಸ ಕೀರ್ತನ ತರಂಗಿಣಿ ಭಾಗ ೧-೨ ಪುಟ ೩೬
ಪುಟ ೪೫
ಪುಟ ೨೨೫
ಪುಟ ೮೬
ಪುಟ ೪೬
ಪುಟ ೨೭೬
ಪುಟ ೧೦೨
ಕೃಷ್ಣಶರ್ಮ/ ಬೆಟಗೇರಿ ಹೆಚ್.ಜಿ. (ಸಂ): ಕನಕದಾಸರ ಹಾಡುಗಳು ಕೃತಿ ೨೩
ತಿ. ೨೪
ತಿ ೨೮
ತಿ ೧೨೬
ದ ರಾಮರಾವ (ಸಂ): ಹರಿದಾಸ ಕೀರ್ತನ ತರಂಗಿಣಿ ಭಾಗ ೩.೪ ಪುಟ ೮೧
ಮುಕ್ತಾನಂದ: ಚಿತ್‌ಶಕ್ತಿ ವಿಲಾಸ (೧೯೭೫) ಪ್ರಸ್ತಾವನೆ ಪುಟ ೯
ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಪುಟ ೨೭೬

ಧ್ಯಾಯ - ಏಳು

## ೭. ಸಮಾರೋಪ

ಭಾರತೀಯ ಆಧ್ಯಾತ್ಮ ಪರಂಪರೆಯು ಬಹು ಪುರಾತನವಾದದ್ದು. ಈ
ಪರೆಯು ಸನಾತನವಾದಷ್ಟೇ ವಿನೂತನವೂ ಆಗಿದೆ. ಪರಮ ಸತ್ಯವನ್ನು
ಧಿಸುವಲ್ಲಿ, ಆ ಸತ್ಯದ ಸಾಕ್ಷಾತ್ಕಾರಕ್ಕಾಗಿ ಎಲ್ಲರಿಗೂ ಸಂಪೂರ್ಣ
ಂತ್ರ್ಯವನ್ನು ನೀಡಲಾಗಿದೆ. ಸತ್ಯದ ಶೋಧನೆಯನ್ನು ಯಾರು ಮಾಡಿದರು
ವುದಕ್ಕಿಂತ ಸತ್ಯದ ನಿಜವಾದ ಮೌಲ್ಯಮಾಪನ ಮಾಡಿ ಆ ಸತ್ಯಕ್ಕೆ
ಣೆಯಿತ್ತು ಮತ್ತೆ ಮುಂದಿನ ಹೆಜ್ಜೆ ಇಡುವುದು ಭಾರತೀಯ ಪರಂಪರೆಯ
ಕರ, ಸಿದ್ಧರ ಸಹಜ ಗತಿಯಾಗಿದೆ. ಅಂತೆಯೇ ವೇದದ ಅಧಿಕಾರವನ್ನು ಅಷ್ಟೇ
ಭಗವಂತನ ಅಸ್ತಿತ್ವವನ್ನೇ ಪ್ರಶ್ನಿಸಿದ ಬೌದ್ಧ, ಜೈನ ಧರ್ಮಗಳು ಕೂಡ ನಮ್ಮ
ತ್ಮ ದರ್ಶನದ ಭಾಗಗಳಾಗಿಯೇ ಉಳಿದವು. ಹೊಸ ಹೊಸ ಸತ್ಯದರ್ಶನಗಳನ್ನು
ೂಡಿಸಿಕೊಂಡು ಈ ದೇಶದ ಆಧ್ಯಾತ್ಮ ಜೀವನಗಂಗೆ ನಿತ್ಯ ನಿರ್ಮಲಳಾಗಿ
ಯುತ್ತಿದ್ದಾಳೆ. ಅಂತೆಯೇ ಎಲ್ಲ ವಿಧದ ಸಾಧನೆಗಳಿಗೂ ಇಲ್ಲಿ ಅವಕಾಶವಿದೆ.
ಬೇರೆ ದರ್ಶನಗಳು ಪರಸ್ಪರ ವಿರೋಧವಾಗಿ ಕಾಣದೆ ಒಂದೇ ಸತ್ಯದ ವಿವಿಧ
ಗಳನ್ನು ತೋರಿಸುತ್ತವೆ.

ಕಾಲಕ್ರಮದಲ್ಲಿ ಒಂದು ಸತ್ಯದ, ಪರಂಪರೆಯ ಧರ್ಮದ ಸತ್ವವು ಕಡಿಮೆಯಾಗಿ
ಮಾರ್ಗಗಳ ಅವಶ್ಯಕತೆ ಉಂಟಾದಾಗ ರಾಜಕೀಯ ಅಸ್ಥಿರತೆಯಿಂದಾಗಿ
ೀವನವು ವ್ಯಸ್ತವಾದಾಗ, ಸಾಮಾಜಿಕ ಜೀವನವು ಅಲ್ಲೋಲ
ಲವಾದಾಗ, ಪರಿಸ್ಥಿತಿಯ ಒತ್ತಡದಿಂದಾಗಿ ಮಹಾಪುರುಷರು ಹುಟ್ಟಿ
ತ್ತಾರೆ. ತಮ್ಮ ವೈಯಕ್ತಿಕ ಸಾಧನೆ ಸಿದ್ಧಿಗಳ ಬಲದಿಂದ ಇಡೀ ಸಮಾಜಕ್ಕೆ ಹೊಸ
ರ್ಗವನ್ನು ತೋರಿಸಿ ಜನಜೀವನದಲ್ಲಿ ಶಾಂತಿ ಸಮಾಧಾನಗಳನ್ನು ನೆಲೆಸಲು
ಗುತ್ತಾರೆ. ಭಾರತದಲ್ಲಿ ಈ ಮಾತು ಐತಿಹಾಸಿಕ ಸತ್ಯವಾಗಿದ್ದು, ನಮ್ಮ
ತ್ಮ ಪರಂಪರೆಯು ಜೀವಂತವಾಗಿ ಉಳಿಯಲು ಮುಖ್ಯ ಕಾರಣವಾಗಿದೆ.

ಮುಸಲ್ಮಾನರ ದಾಳಿಯಿಂದ ದೇಶವು ತತ್ತರಿಸಿದಾಗ, ಆಂಗ್ಲರ ಧೂರ್ತ
ಯಿಂದ ನಮ್ಮ ಸಂಸ್ಕೃತಿಗೆ ಬಲವಾದ ಪೆಟ್ಟು ಬಿದ್ದಾಗ, ಅನೇಕ ಜನ ಸಾಧು
ು, ಆಚಾರ್ಯರು ಅವತರಿಸಿ ಮಾರ್ಗದರ್ಶನ ಮಾಡಿದ್ದಾರೆ. ಆಂಗ್ಲರ
ೀಯ ಉದ್ದೇಶದಿಂದ ಪ್ರೇರಿತವಾದ ನೀತಿಯಿಂದ ನಮ್ಮ ಶಿಕ್ಷಣ ಪದ್ಧತಿಯು
ಾಗಿ ಭಾರತೀಯ ಮೌಲ್ಯಗಳನ್ನು ತಿರಸ್ಕರಿಸುವ ನಾಸ್ತಿಕತೆಯೇ ಜೀವನದ
ಮೆಂದು ಭ್ರಮಿಸುವ ಪರಿಸ್ಥಿತಿ ಉತ್ಪನ್ನವಾದಾಗ ರಾಮಕೃಷ್ಣ ಪರಮ ಹಂಸರು
ಶದ ಆಧ್ಯಾತ್ಮ ಜೀವನವನ್ನು ಪುನರುಜ್ಜೀವನಗೊಳಿಸಿದರು. ಸ್ವಾಮಿ

ವಿವೇಕಾನಂದರು ಭಾರತೀಯ ಆಧ್ಯಾತ್ಮದ ಹಿರಿಮೆಯನ್ನು ಮೆರೆಸಿದರು. ರಾ
ಭಾವನೆಯ ಅವಶ್ಯಕತೆ ಉಂಟಾದಾಗ ಮಹಾತ್ಮಾ ಗಾಂಧೀಜಿಯವರು ಮುಂದೆ
ಸಮಗ್ರ ಭಾರತದಲ್ಲಿ ಜಾಗ್ರತಿಯನ್ನುಂಟು ಮಾಡಿದರು.

ಒಬ್ಬ ವಿಜ್ಞಾನಿಯು ಸಂಶೋಧಿಸಿದ ಹೊಸದೊಂದು ಸಂಶೋಧ
ಅವನೊಬ್ಬನಿಗೇ ಅಲ್ಲದೇ ಇಡೀ ಲೋಕಕ್ಕೆ ಉಪಕಾರವಾಗುವುದು. ಅದರಂತೆ
ಸಾಧಕನು ಗೈದ ಸಾಧನೆಯು, ಸುತ್ತಲಿನ ಸಮಾಜಕ್ಕೂ, ಜನರಿಗೂ ಉ
ಮಾರ್ಗ ತೋರಿಸಿ ಅವರ ಪ್ರಜ್ಞೆಯು ಉನ್ಮುಖವಾಗಲು ನೆರವಾಗ
ಮಹಾತ್ಮಾ ಗಾಂಧೀಜಿಯವರ ಸತ್ಯ ನಿಷ್ಠ, ದೇವರಲ್ಲಿಯ ಶ್ರದ್ಧೆ, ನೈತಿಕ
ದೇಶದ ಜನರ ಮೇಲೆ ವಿಲಕ್ಷಣ ಪರಿಣಾಮ ಬೀರಿತು. ಭಾರತೀಯರ
-ಆಧ್ಯಾತ್ಮಿಕ ಪ್ರಜ್ಞೆಯನ್ನು ಮೇಲೆತ್ತಲು ಕಾರಣವಾದದ್ದನ್ನು ಯ
ಅಲ್ಲಗಳೆಯಲಾರರು.

ಈ ದೃಷ್ಟಿಯಿಂದ ನೋಡಿದಾಗ, ಸಾಧು ಸಂತರ, ಸಿದ್ಧರ ಜೀವನ ಕೃತಿ
ಅಭ್ಯಸಿಸುವುದು ಮತ್ತು ಅಂಥವರ ಜೀವನದಿಂದ ಉಂಟಾದ ಪರಿಣಾಮ
ನಿರೀಕ್ಷಿಸುವುದು ಅತ್ಯಂತ ಅವಶ್ಯವಾಗಿದೆ. ವಿಜಯನಗರ ಸಾಮ್ರಾಜ್ಯವು ಕ
ಮುಸಲ್ಮಾನರ ಮೇಲುಗೈಯಾಗಿ ಸಾಂಸ್ಕೃತಿಕ, ಸಾಮಾಜಿಕ, ಆಧ್ಯಾತ್ಮಿಕ ಜೀ
ಗೊಂದಲಮಯವಾದಾಗ ಮಹಿಪತಿರಾಯರು ತಮ್ಮ ಸಾಧನೆ, ಸಿದ್ಧಿಯಿಂದ,
ಸಾವಿರಾರು ಪದ -ಪದ್ಯಗಳಿಂದ ಅಂದಿನ ಸಮಾಜಕ್ಕೆ ಧೈರ್ಯ, ಸ್ಥೈರ್ಯ
ಕೊಟ್ಟಿದ್ದಾರೆ. ಬತ್ತಿಯೇ ಹೋಯಿತೆಂದು ತಿಳಿದ ಭಕ್ತಿ ತೊರೆಯನ್ನು ಅವರು
ಹರಿಬಿಟ್ಟಿದ್ದಾರೆ.

ಮಹಿಪತಿರಾಯರು ಸಾಹಿತ್ಯವನ್ನು ರಚಿಸಿದ ಕಾಲವು ಈ ವರೆಗೂ ಕ
ಸಾಹಿತ್ಯದ ಚರಿತ್ರೆಯಲ್ಲಿ ಅತ್ಯಂತ ಸಂದಿಗ್ಧವಾದ ಕಾಲವೆನಿಸಿತ್ತು.
ಪುರಂದರದಾಸರ ಕಾಲ ಮುಗಿದು ಇತ್ತ ವಿಜಯದಾಸರ ಕಾಲ
ಆರಂಭವಾಗದಿದ್ದ ಅವಧಿ ಎಂದರೆ ಕ್ರಿ.ಶ. ೧೫೬೪ ರಿಂದ ಕ್ರಿ.ಶ ೧೬೮೭
ಈ ಕ್ಷೇತ್ರದಲ್ಲಿ ಏನೂ ಕೃಷಿಯೇ ಆಗಿರಲಿಲ್ಲ. ಅದೊಂದು ಅಜ್ಞಾತಕಾ
ತಿಳಿಯಲಾಗಿತ್ತು. ಅಲ್ಲಿ ಇಲ್ಲಿ ಮಹಿಪತಿರಾಯರ ಸೊಲ್ಲು ಕೇಳಿ ಬರುತ್ತಿತ್ತಾ
ಕೆಲವರು ಅವರನ್ನು ಹೆಸರಿಗೆ ಮಾತ್ರ ದಾಸರೆಂದು ಉಲ್ಲೇಖಿಸಿದರೆ, ಇನ್ನು
ಅಂಕಿತ ಗುರೂಪದೇಶಗಳನ್ನು ಮುಂದೆ ಮಾಡಿ ದಾಸಕೂಟದಿಂದ
ಇಟ್ಟಿದ್ದರು. ಇನ್ನು ಕೆಲವರು- ಅವರನ್ನು ಅದ್ವೈತಿಗಳೆಂದು, ಅ
ಪಂಥದವರೆಂದೂ ಸಾಧಿಸಿದರು.

ಈ ಪ್ರಬಂಧದ ಮುಖಾಂತರ ದೊರೆತ ೩೬ ಹಸ್ತಪ್ರತಿಗಳು ಹರಿದಾಸ
ಾಹಿತ್ಯದಲ್ಲಿ ಅಜ್ಞಾತಕಾಲವೊಂದಿದೆಯೆಂಬುದನ್ನು ಸುಳ್ಳು ಮಾಡುತ್ತದೆ. ಆ
ಟ್ಟಿನಲ್ಲಿ ದೊರೆತ ಅಗಾಧ ಪ್ರಮಾಣದ ಸಾಹಿತ್ಯ ವಿಶೇಷವಾಗಿ ಮಹಿಪತಿರಾಯರ
ೈವಿಧ್ಯಮಯ ಶೈಲಿಯ ಕೃತಿಗಳು ೧೭ ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ
ಲ್ಲೇಖಾರ್ಹವಾಗಿವೆ. ಮಹಿಪತಿರಾಯರ ಕೃತಿಗಳ ಅವಲೋಕನದಿಂದ ಅವರ
ಂಪ್ರದಾಯ ಶ್ರದ್ಧೆಗಳ ಕುರಿತು ಇರುವ ಎಲ್ಲ ಸಂದೇಹಗಳೂ
ನಾರಣೆಯಾದಂತಾಗಿದೆ.

ಜಾತಿ ಮತ ಪಂಥಗಳ ಗೋಜಲು ಇಂದು ಎಂದಿಗಿಂತಲೂ ಹೆಚ್ಚಾಗಿದೆ.
ಹಿಪತಿರಾಯರು ತಮ್ಮ ಶ್ರದ್ಧೆಯನ್ನು ಬದಲಿಸದೆ ಧರ್ಮ ಸಮನ್ವಯದ
ಂದೇಶವನ್ನು ಸಾರಿದರು. ಮೂರೂವರೆ ಮೊಳದ ದೇಹ ಶುದ್ಧಿಯನ್ನು ಪಡೆಯದೇ
ೃತ -ಅದ್ವೈತ ಎಂದು ಯಾಕೆ ಬಡಿದಾಡುತ್ತಿ? ಎಂದು ಕೇಳಿದರು. ಸಮಕಾಲೀನ
ಮಾಜದೊಂದಿಗೆ ಜಾತಿ ಮತ ಕುಲಗಳ ಭೇದವಿಲ್ಲದೆ ಬೆರೆದು ಆತ್ಮೋನ್ನತಿಯ
ಾರ್ಗವನ್ನು ತೋರಿದರು. ಹಿಂದು ಧರ್ಮವೇ ಖಿಲವಾಗುತ್ತಿದ್ದ ಅಥವಾ
ಂದರ್ಭದಲ್ಲಿ ಹೇಳ ಹೆಸರಿಲ್ಲದಂತೆ ಆಗುವ ದಿನಗಳಲ್ಲಿ ಮಹಿಪತಿರಾಯರು ಹಾಗು
ವರ ಸಮಕಾಲೀನರು ವಿಜಾಪುರದ ಭಾಗದಲ್ಲಿ ಹುಟ್ಟಿ ಹಿಂದು ಧರ್ಮ ಹಾಗೂ
ಂಸ್ಕೃತಿಯನ್ನು ಪುನರುಜ್ಜೀವಿಸಿದರು.

ದ್ವೈತನೋ, ಅದ್ವೈತನೋ, ವೀರಶೈವನೋ, ಅವಧೂತನೋ, ಅಂತು ಹಿಂದೂ
ರ್ಮ ಉಳಿಯಲಿ, ಅನ್ಯ ಮತ - ಧರ್ಮಗಳ ಸಂಸ್ಕೃತಿಗೆ, ಪ್ರಭಾವಕ್ಕೆ ನಮ್ಮವರು
ಲಿಯಾಗದಿರಲಿ ಎಂಬ ಉತ್ಕಟ ಆಕಾಂಕ್ಷೆಯಿಂದ ಮಹಿಪತಿರಾಯರು ತಮ್ಮ
ಾಹಿತ್ಯವನ್ನು ಒಂದು ಸಂಪ್ರದಾಯಕ್ಕೆಂದು ಸಂಕುಚಿತಗೊಳಿಸಲಿಲ್ಲ. ಅದರಂತೆ
ಾಷೆಯಾವುದಾದರೇನು ದೇವರನ್ನು ಕಾಣುವ, ಅವನನ್ನು ಅರ್ಥ ಮಾಡಿಕೊಳ್ಳುವ
ರಿ ಒಂದೇ ಎಂದು ಮುಂತಾಗಿ ಹೇಳಿ ತಮ್ಮ ದೃಷ್ಟಿಯನ್ನು ನಾಲ್ಕು ನಿಟ್ಟಿಗೂ
ಬಿಟ್ಟರು. ಅದು ಅವರ ದೊಡ್ಡಗುಣ. ತಂತಮ್ಮ ಶ್ರದ್ಧೆಗಳನ್ನು ಭಾಷೆಯನ್ನು
ಿಕೊಡದೆ, ಆ ಕೆಲಸವನ್ನು ಅವರು ಮತ್ತು ಅವರಂಥವರು ಅಂದಿನ ದಿನಗಳಲ್ಲಿ
ಾಡಿದರೆಂದೇ ಇಂದು ವಿಜಾಪುರ ಹಾಗು ಸುತ್ತಮುತ್ತಲಿನ ಭಾಗಗಳಲ್ಲಿ ಇಂದಿನ
ಂದು ಸಂಸ್ಕೃತಿಯನ್ನು ಕಾಣುವಂತಾಗಿದೆ ಎಂದು ಧೈರ್ಯವಾಗಿ ಹೇಳಬಹುದು.

ಅಧ್ಯಯನದ ದೃಷ್ಟಿಯಿಂದ, ಸಾವಿರಾರು ದೇವರನಾಮಗಳನ್ನು ರಚಿಸಿದರೆಂದು
ೇಳಲಾದ ಮಹಿಪತಿರಾಯರ ಖಚಿತವಾದ ಕೃತಿಗಳ ಸಂಖ್ಯೆಯನ್ನು ಹಾಗು ಅವರು

ತಗಳನ್ನು ಈ ಪ್ರಬಂಧ ನಿರ್ಣಯಿಸುತ್ತದೆ.

ರಾಯರು ಹರಿದಾಸರು ಹೌದೋ -ಅಲ್ಲವೋ ಎಂಬುದು ಗೌಣ.
ನ್ನು ವಿವರವಾಗಿ ಚರ್ಚಿಸುವದರೊಂದಿಗೆ ಹರಿದಾಸ ಲಕ್ಷಣದ ಲಕ್ಷ್ಯಣ
ಎಳೆದ ವ್ಯಕ್ತಿ - ಕಾಲ ನಿರ್ದೇಶನಗಳನ್ನು ಸೂಚಿಸಲಾಗಿದೆ.

ರಾಯರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಮೋಘ ಕೊಡುಗೆ. ಅವರ
ಸಾಹಿತ್ಯ. ಆದರಲ್ಲೂ ಅವರು ಕನ್ನಡಮ್ಮನಿಗೆ ಮಾಡಿಸಿದ
ದರ್ಶನ. ಈ ಕುರಿತು ಇನ್ನೂ ಒಂದು ಪ್ರತ್ಯೇಕ ಪ್ರಬಂಧವಾಗುವಷ್ಟು
ರ ಅನುಭಾವ ಸಾಹಿತ್ಯದಲ್ಲಿ ಇದೆಯೆಂಬುದು ಈ ಅಭ್ಯಾಸದಿಂದ
ದೆ.

ಸಾಹಿತ್ಯದಲ್ಲಿ ಬಳಕೆಯಾದ ಅಂದಿನ ಕನ್ನಡ ಭಾಷೆಯು, ಹೊಸಗನ್ನಡ
ದನ್ನು ವಿವರಿಸಲು ಅಪೂರ್ವ ವಿಷಯ ರಾಶಿಯಾಗಿದೆ. ಕನ್ನಡ ಭಾಷಾ
ಅಭ್ಯಾಸಕ್ಕೆ ಒಂದು ಹೊಸ ದಾರಿಯಾಗಿದೆ.

ಕಾಲೀನರಾದ ವಿಜಾಪುರದ ರುಕ್ಮಾಂಗದ ಪಂಡಿತರು. ಸಿಂದಗಿಯ
ರು ಮತ್ತು ಅವರ ಮಕ್ಕಳು ರಚಿಸಿದ ಸಾಹಿತ್ಯ ಹಾಗು ಸಾಧನೆಗಳು
ಬಂಧಗಳಿಗೆ ದಾರಿ ಮಾಡಿಕೊಡುತ್ತವೆ. ಆದರಂತೆ ಮಹಿಪತಿರಾಯರ
ನೂರು ತಲೆಮಾರುಗಳು ಅವರ ಮನೆತನದಲ್ಲಿ ಸಾಹಿತ್ಯ ರಚನೆಯಾಗಿದೆ.
ಕೀರ್ತನೆಗಳು, ಹತ್ತೆಂಟು ಆಖ್ಯಾನಗಳು, ಕಾವ್ಯಗಳು ಇನ್ನೂ
ಗಿಯೇ ಉಳಿದಿವೆ. ಅವುಗಳ ಅಭ್ಯಾಸವು ವಿಜಯನಗರ ಕಾಲದ
ಕನ್ನಡ ಸಾಹಿತ್ಯ ಚರಿತ್ರೆಗೆ ಹೊಸ ಬೆಳಕನ್ನು ನೀಡುವುದರಲ್ಲಿ
. ಮಹಿಪತಿರಾಯರ ಮನೆತನದ ಅಪ್ರಕಟಿತ ಸಾಹಿತ್ಯವೂ ಇನ್ನೊಂದು
ಧಕ್ಕೆ ವಸ್ತುವಾಗುವಷ್ಟು ದೊರೆತಿದೆ.

ಸ ಸಾಹಿತ್ಯದ ಆಕಾಶದಲ್ಲಿ ಹೊಳೆಯುತ್ತಿರುವ ಅನೇಕ ತೇಜಃ ಪುಂಜ
ಮಹಿಪತಿರಾಯರು ಸಿಡಿದು ನಿಂತ ಧ್ರುವ ನಕ್ಷತ್ರದಂತಿದ್ದಾರೆ.

## ಅನುಬಂಧ -ಒಂದು

# ಅಧಿಕ ಕೃತಿಗಳು

೧

ವಚನ.

ಮನವು ಬಿಲ್ಲನೆ ಮಾಡಿ।
ತನವು ಹೆದಿಯನೆ ಗಟ್ಟಿ।
ಅನುಭವದ ಅಂಬಿನಲಿ।
ಜನನ ಮರಣದ ಗುರಿಯ ಕೆಡಹಿದಾ।
ಜ್ಞಾನಸಾಗರ ಗುರುನಾಥನೆಂದು।
ಸ್ತುತಿಸಿದಾ ಮಹಿಪತಿಯು.।।

ಹಸ್ತಪ್ರತಿ -

೨

ಸಂಗ ಏಡಿಏಡಿ। ಸಾಧು ಸಂಗ ಏಡಿ ಏಡಿ। ಸಂಗಏಡಿಯಳಂಗದೊಳಗ।
ಮಂಗಳುತ್ಸಾಹ ದೋರುವರ।। ।।ಧ್ರು।।
ಹರಿಪದ ಪರಾಗನುಂಡು। ಹರುಷವೇರಿ ಭವಶರಧಿಗೆ।
ಹರಿಯ ಭಕುತಿ ಸೇತುಗಟ್ಟಿ। ತೋರಿಸಿ ಜನರ ತಾರಿಸುವರಾ।।೧।।
ವೇದಶಾಸ್ತ್ರ ಸಾರವಾದ ಬೋಧ। ಸುಧಿಯವೆರದು ಮರದು।
ಹಾದಿ ದೋರಿ ಮನಕ ಗತಿಯ। ಸಾಧನವನು ಬೀರುವರಾ।।೨।।
ಹ್ಯಾವ ಹೆಮ್ಮೆ ಬಿಡಿಸಿ ಸಂಮತಿ। ಭಾವದಿಂದ ಮಹಿಪತಿಸ್ವಾಮಿಯ
ಸಾವಧಾನದಿಂದಲಿ ಜಗ। ತೀವಲಯದೊಳರಹಿಸುವರ ।।೩।।

ಹಸ್ತಪ್ರತಿ -

೩

ದಾವನು ಗುರುಸಹವಾಸಿ। ಅವನಿದ್ದದ್ದೇ ಸ್ಥಳಕಾಶಿ ।।ಧ್ರು।।
ಕೂಡಿದವರ ತ್ರಿತಾಪಭಂಗಾ। ರೂಢಿಗೆ ಮೆರೆವಳು ಜ್ಞಾನಗಂಗಾ।
ಮೂಡಿಹ ಆತ್ಮಜ್ಯೋತಿ ಲಿಂಗಾ। ಕಂಡಿಹ ಗುಣರಾಸೀ ।।೧।।
ಏವರಿಸಿ ತಾರಕ ಮಂತ್ರದ ನೆಲಿಯಾ। ಕಿವಿಯೊಳು ಹೇಳಲು ಗುರುರಾಯಾ।
ಅವನಿಗಿನ್ನೆಲ್ಲಿಯದು ಭವಭಯಾ। ಸ್ವಾನಂದವ ಬೆರಸೀ ।।೨।।
ಜನದಲಿ ನಾನಾ ಸಾಧನ ಜರಿದು। ಮನದಲಿ ಒಂದೇ ನಿಶ್ಚಯ ಹಿಡಿದು।
ಅನುಮಾನದ ಸಿದ್ಧಾಂತಗಳದು। ಸದ್ಭಾವನೆ ಬಲಿಸೀ।।೩।।
ಪ್ರೇಮಿಯ ನಿಜಸುಖ ಪ್ರೇಮಿಕ ಬಲ್ಲಾ। ಈ ಮನುಜರಿಗಿದು ಭೇದಿಸುದಲ್ಲಾ।
ಶ್ರೀಮಹಿಪತಿ ಬೋಧಿಸಿದನು ಸೊಲ್ಲಾ। ಪೂರಿಸಿ ಮನದಾಸೀ ।।೪।।

ಹಸ್ತಪ್ರತಿ

೬

ಪಡಕೊ ನಿಜಗುರುತಾ ನಿಜಗುರತಾ।
ಪಡವದಿದೆ ನಿಜ ನೀ ಗುರುತಾ ।।ಧ್ರು।।
ಸಾಧಿಸಿ ಗುರು ಗುರುತಾ। ಸಾಧಿಸಿ ಗುರು ಗುರುತಾ।
ಆದೇ ತುಂಬ್ಯದ ಜಗಭರಿತಾ ।।೧।।
ಮನ್ನಿಸಿ ತಿಳಿ ತ್ವರಿತಾ। ಮನ್ನಿಸಿ ತಿಳಿ ತ್ವರಿತಾ।
ನಿನ್ನಿದಿಲ್ಲದು ಹೊರತಾ ।।೨।।
ತರಣೋಪಾಯದ ವರತಾ। ತರಣೋಪಾಯದ ವರತಾ।
ಗುರುಕರುಣದ ದಯಗರತಾ ।।೩।।
ಪರಮ ಜ್ಞಾನಾಮೃತಾ। ಅಮೃತಾ।
ತರಳ ಮಹಿಪತಿ ಮನೋಹರಾ ।।೪।।

## ಅನುಬಂಧ - ಎರಡು

# ಮಿಶ್ರ ಭಾಷಾ ಕೃತಿಗಳು

೧

ಸಮಜೊ ಭಾಯಿ ಸಕುನಾ ಚಾರೋ ಖುದಾಕಾ
ತೆಲಗು ಕನ್ನಡ ತುರಕಾರೆ ವಂದೇ ಸುಖ ।।ಧ್ರು।।
ದೇಖೋ ಭಾಯಿ ದಿಸತಾ ತುಮನಾ ನಜರೋಮೆ -ನಜರೋಮೆ।
ತನ್ನೊಳಗದೆ ಅತಿಸೂಕ್ಷ್ಮವಾಗಿ ತಿಳಕೋಮೆ ತಿಳಕೋಮೆ।
ಸದ್ಗುರು ವಚನ ಶೋಧುನಿ ಪಾಹಾ ಸಪ್ರೇಮ ಸಪ್ರೇಮ।
ಚುಡವಯ್ಯ ಉನ್ನದಿ ಪೂರ್ಣ ಘನ ಮಹಿಮೆ ।।೧।।
ಘ್ಯಾರೆ ವಳಖೂನಿ ಸಾರಾಸಾರಾ ನಿವಡೂನಿ ನಿವಡೂನಿ।
ನಜರ ಹುಜರ ದೇಖೋ ಯಾರಾ ಹ್ಯೆಗನೀ ಹ್ಯೆಗನಿ।
ಜನ್ಮಕಬಂದು ಮಾಡುವದೆ ಸಾಧನೀ ಸಾಧನೀ।
ಮಂಚಿ ಉನ್ನದಿ ನಕಳೆ ಸದ್ಗುರು ಪಾವುನಿ ।।೨।।
ಎಲ್ಲಾ ಒಂದೇ ಮಾತಿನ ಸೊಗಸು ಸಿವನಾಟಾ ಸಿವನಾಟಾ।
ಅಪಸಮೇಆಪ ಲಢನಾ ಸಬ ಝೂಟಾ ಸಬಝೂಟಾ।
ಚೆಪ್ಪೆವೈಯ್ಯಾ ಎಂದರ ಹೇಳುವ ಗುರುನೀಠಾ ಗುರುನೀಠಾ।
ಆನಂದ ಆಹೆ ತುಜ ಮಹಿಪತಿ ಸುಖ ಮೋಠಾ ।।೩।।

೨

ಸಿದ್ಧ ನೋಡಿರೋಯ ಸಾಕ್ಷಾತ್ಕಾರವ। ।।ಧ್ರು।।
ಸಾಧುಕಾ ದಸ್ತಿ ಪಂಪಲೇಣಾ।
ಸಾಧುಕೆ ಸಂಗ ಕರಣಾ ಸಾಧ್ಯವಾಹುವುದು।
ಸದ್ಗುರು ಕರುಣಾನಿಧರಿಯೊ ಜಾಣಾ। ।।೧।।
ಬಾಹ್ಯಾಂತ್ರೀ ಜೋ ಪಾಹೆ ಗೋವಿಂದಾ।
ಇಹಾಪರ ಅವಗಾನಂದಾ ದೇಹಭ್ರಾಂತಿಗೆ।
ಸಿಲಕದೆಂದಾ ವೈ ಖುದಾಕಾ ಬಂದಾ ।।೨।।
ಪಾಕದಿಲ್ಲಾ -ಸುಜೇರ ಕರಣಾ।
ಯಕೀನ ಸಾಬೀತ ರಾಹಾಣಾ।
ಟಾಕ ತ್ಯಾಭಾವ ಮೀತೂಪಣಾ ಐಕ್ಯವಿದು ಭೂಷಣಾ ।।೩।।
ನಿಸದಿನ ಕರಿಮಕ ಹೊಯಾರಾ।
ವಾಸುದೇವ ಸಾಹಕಾರಾ ವಿಶ್ವವ್ಯಾಪಕ।
ಮ್ಹಣುನಿ ಸ್ಮರಾ ಲೇಸು ಅವನ ಸಂಸಾರಾ ।।೪।।
ಮೂವಿಧ ಪರಿಯಲಿ ಹೇಳಿದ ಭಾಷಾ
ಮಹಾಗುರುವಿನ ಉಪದೇಶಾ ಮಹಿಪತಿಗಾಯಿತು.
ಅತಿ ಸಂತೋಷಾ ಜೀವಕ ಭವ ಭಯನಾಶಾ ।।೫।।

